# ಪರಿವಿಡಿ

—÷—



○ ಸೂಚನೆ— ಪುಟ ೧೮೧, ೧೮೩ ಇವು ಅದಲು ಬದಲು ಪ್ರಿಂಟಾಗಿವೆ ವಾಚಕರತ್ತ ಗಮನಿಸುವದು.

ಕುಳಿತುಕೊಳ್ಳಲು ಆಸನಕೊಟ್ಟು, ತಾವಿಲ್ಲಿಗೆ ಆಗಮಿಸಲು ಕಾರಣವೇನೆಂದು ಕೇಳಿದನು.

ಜಾನ:—ಸುಪರಿಡೆಂಟರ! ಈ ದಿನ ಮಧ್ಯಾಹ್ನಾನಂತರ ನಾನು ಪತ್ನೀಸಮೇತನಾಗಿ "ಮಿಸ್ಟಿಗೆ" 'ಜೆಮ್ಸ್ಬಟ' ಚಿತ್ರನೋಡಲು ಹೋಗಿದ್ದೆನು. ಅಲ್ಲಿಂದ ಹೊರಟು ಸಾಧಾರಣ ಸಾಯಂಕಾಲ ಏಳುಗಂಟೆಗೆ ಮನೆಗೆ ಬಂದೆವು. ಮನೆಯಲ್ಲಿ ಸಿಲಿಯುಳು ಕುತ್ತಿಗೆಯಿಂದ ಆಭರಣಗಳನ್ನು ತೆಗೆದಿಡಲು ನೋಡಿದಾಗ ಅವಳ ಕೊರಳಿನಲ್ಲಿನ ಆಭರಣಗಳು ಮಾಯವಾಗಿದ್ದವು.

ಯುಶವಂತಸಿಂಹ:— ಕಳೆದು ಹೋದ ಆಭರಣಗಳಾವವು? ಎಂದು ಹೇಳಿ ಸಿಗರೇಟ ತೆಗೆದು ಜಾನರಿಗೊಂದನ್ನು ಕೊಟ್ಟು ತಾನೊಂದನ್ನು ಸೇದ ಲಾರಂಭಿಸಿದನು.

ಜಾ:—ಸಿಲಿಯುಳ ವಜ್ರದ ಹಾರ ಮತ್ತು ಬಂಗಾರದ ಚೈನಲ್ಲದೆ ನನ್ನ ಕೋಟಿನ ಕಿಸೆಯಿಂದ ಸಿನೇಮಾಕ್ಕೆ ಹೋಗುವಾಗ "ನ್ಯೂ ಮೊಡಲ್ ಬೇಂಕ"ನಲ್ಲಿತಂದ ೫ಸಾವಿರ ಅಲ್ಲದೆ, ಕೈಯಿಂದ ಬಂಗಾರದ ಸರಪಣಿಯಿರುವ ರಿಸ್ಟವಾಚ್ ಸಹ ಮಾಯವಾಗಿವೆ.

ಯುಶವಂತ:— ನಿಮ್ಮ ಊಹೆಯಲ್ಲಿ ಚೋರನು ಆವನಾಗಿರಬಹುದು?

ಜಾ:—ನನಗೆ ಗೊತ್ತಾಗುವುದಿಲ್ಲವಲ್ಲ!!

ಯುಶವಂತ:— ಸಿನೆಮಾದಲ್ಲಿ ನಿಮ್ಮ ಹತ್ತಿರ ಅಪರಿಚಿತರಾರಾದರೂ ಕುಳಿತಿದ್ದರೆ?

ಜಾ:— ನಾವು ಕುಳಿತ ಸೀಟಿನಿಂದ ಹಿಂದೆ ಅಪರಿಚಿತ ಯುವಕ ನೋರ್ವನು ಕುಳಿತಿದ್ದರೂ, ಅವನು ಚೋರನಾಗಿರಲಾರನು; ಯಾಕೆಂದರೆ ಅವನ ಉಡಿಗೆ-ತೊಡಿಗೆಗಳನ್ನು ನೋಡುವಾಗಲೂ, ಮುಖಲಕ್ಷಣಗಳಿಂದ ಲೂ ಅವನು ಸಭ್ಯನಂತೆ ತೋರುತ್ತಾನೆ.

ಯುಶವಂತ:—ಸಿನೆಮಾದಿಂದ ಹೊರಟಾಗ ನೀವು ನಿಮ್ಮ ಆಭರಣ ಗಳೆಲ್ಲ ಸರಿಯಾಗಿ ಇವೆಯೋ ಎಂದು ನೋಡಿದ್ದಿರಾ?

ಜಾ:—ಇಲ್ಲ.

ಯುಶವಂತ:—ಒಂದುವೇಳೆ ನಿಮ್ಮ ಒಡವೆಗಳು ದಾರಿಯಲ್ಲಿ ಬಿದ್ದಿದ್ದರೆ?

ಜಾರ್ಜ್:— ಅಸಂಭವವದು. ನಾವು ಕಾರಿನಲ್ಲಿ ಬಂದುದಾದುದರಿಂದ ಒಡವೆಗಳು ಕಳಚಿಬಿದ್ದಿದ್ದರೂ ಕಾರಿನಲ್ಲಿರಬೇಕಿತ್ತು. ನಾವು ಕಾರಿನಲ್ಲಿ ಬಿದ್ದಿರುವವೋ ಎಂದು ಪರೀಕ್ಷಿಸಿದ್ದೆವು; ಆದರೆ ಕಾರಿನಲ್ಲಿ ಬಿದ್ದಿದ್ದರಲ್ಲವೆ ಸಿಕ್ಕುವುದು ?

ಯಶವಂತ:—ನಿಮ್ಮ ಕಾರಿನಲ್ಲಿ ಬೇರ್‍ಯಾರಾದರೂ ಬಂದಿದ್ದರೆ?

ಜಾರ್ಜ್:—ನಮ್ಮ ಮಿತ್ರರಾದ ಲೋಬೋ ಬಂದಿದ್ದರು; ಅವರನ್ನು ಅವರ ಮನೆಯಲ್ಲಿ ಬಿಟ್ಟು ನಾವು ನಮ್ಮ ಮನೆಗೆ ಹೋದೆವು.

ಯಶವಂತ:—ಛೆ! ಏನು ? ವಿಜ್ಞಾನಿಗಳಾದ ಲೋಬೋನವರೊ ? ಅವರು ಸರ್ವಥಾ ಅಪಹರಿಸಲಿಕ್ಕಿಲ್ಲ.

ಜಾರ್ಜ್:-ಹಾಗೆಲ್ಲಿ ನಾನೆಂದುದು? ಅವರೂ ಸಹ ನನ್ನೊಡನೆ ಬಂದಿದ್ದರು ಎಂದಂದೆನಲ್ಲದೆ ಅವರು ತಸ್ಕರರೆಂದು ನಾನು ನೆನಸಲಿಲ್ಲ.

ಯಶವಂತ:—ನಿಮ್ಮ ಹಿಂದಿನ ಸೀಟಿನಲ್ಲಿ ಕುಳಿತ ಅಪರಿಚಿತ ವ್ಯಕ್ತಿಯು ಪ್ರಾಯ ಸಾಧಾರಣ ಎಷ್ಟಾಗಬಹುದು?

ಜಾರ್ಜ್:—ಸಾಧಾರಣ ೨೫—೩೦ ವಯಸ್ಸಾಗಬಹುದು.

ಯಶವಂತ:—ಆ ವ್ಯಕ್ತಿಯು ಮೈಬಣ್ಣ ಹೇಗೆ?

ಜಾರ್ಜ್—ಸ್ವಲ್ಪ ಕಪ್ಪು.

ಯಶವಂತ:—ಆಕಾರ?

ಜಾರ್ಜ್:—ಸ್ವಲ್ಪ ಕೃಶ. ಸಾಧಾರಣ ಐದು ಅಡಿ ಎತ್ತರವಿರಬಹುದು.

ಸುಪರಿಡೆಂಟ ಯಶವಂತಸಿಂಹನು ಜಾರ್ಜರೊಡನೆ ಪ್ರಶ್ನೆಗಳನ್ನು ಕೇಳಿ ಅವರು ಕೊಟ್ಟ ಉತ್ತರಗಳನ್ನು ತನ್ನ ಡೈರಿಯಲ್ಲಿ ಬರೆದುಕೊಂಡನು. ಆಗ ಯೂಮಿಕ ಠಾಣೆಯ ಗಡಿಯಾರವು ಒಂಬತ್ತು ಹೊಡೆಯಲು ಸುಪರಿಡೆಂಟನು ಜಾರ್ಜರೊಡನೆ, ನೀವೀಗ ಮನೆಗೆ ಹೋಗಿರಿ. ನಾಳೆ ಬೆಳಿಗ್ಗೆ ಕಳವಿನ ಪತ್ತೆಯ ವಿಷಯ ಆಲೋಚಿಸುವಾ, ಎಂದನು. ಅನಂತರ ಜಾರ್ಜರು ಯಶವಂತ ಸಿಂಹನಿಗೆ ಹಸ್ತ ಲಾಘವವನ್ನಿತ್ತು ತಮ್ಮ ಕಾರಿನಲ್ಲಿ ಬಲ್ಮಠಕ್ಕೆ ತೆರಳಿದರು.

° ° ° °

ಮರುದಿವಸ ಎಂದಿನಂತೆ ಬೆಳಿಗ್ಗೆ ಯಶವಂತಸಿಂಹನು ಪ್ರಾತರ್ವಿಧಿಯನ್ನು ತೀರಿಸಿ, ಪೋಲೀಸಠಾಣೆಗೆ ಬಂದನು. ಆಗ ಠಾಣೆಯ ಹೊರಜಗುಲಿ

ಯಲ್ಲಿ ಒಬ್ಬ ಸೇವಕನು ನಿಂತುಕೊಂಡಿದ್ದನು. ಅವನು ಸುಪರಿಡೆಂಟನನ್ನು ಕಂಡ ಕೂಡಲೆ ಬಗ್ಗಿ ನಮಸ್ಕರಿಸಲು, ಸುಪರಿಡೆಂಟನು ಏನಾಗಬೇಕಾಗಿದೆಯೆಂದು ಅಧಿಕಾರಯುಕ್ತ ವಾಣಿಯಲ್ಲಿ ಕೇಳಿದನು. ಆಗ ಸೇವಕನು ನಾನು 'ನ್ಯೂ ಮೊಡೆಲ್ ಬೆಂಕಿ'ನ ಸೇವಕನು. ನಮ್ಮ ಮೇನೇಜರ ಮಹಾಶಯರು ನಿಮ್ಮನ್ನು ಒಂದು ಸಲ ಬೇಂಕಿಗೆ ಜರೂರ ಕೆಲಸವಿರುವದರಿಂದ ಬರ ಹೇಳು, ಎಂದು ಹೇಳಿ ನನ್ನನ್ನಿಲ್ಲಿಗೆ ಕಳುಹಿಸಿರುವರಾದುದರಿಂದ ದಯಮಾಡಿ ಬೇಂಕಿಗೊಂದು ಬಾರಿ ಆಗಮಿಸಿರಿ ಎಂದು ಸವಿನಯದಿಂದ ಹೇಳಿದನು. ಯಶವಂತನಿಗಾಗ ಹೆಚ್ಚಿನ ಕೆಲಸವಿದ್ದುದರಿಂದ ಸೇವಕನೊಡನೆ ಹಾಗಾದರೆ ಈಗಲೇ ಹೋಗುವ, ಎಂದಂದು 'ನ್ಯೂ ಮೊಡೆಲ್ ಬೆಂಕಿ'ನ ದಾರಿ ಹಿಡಿದು ಮುಂದುವರಿದನು. ಸಾಧಾರಣ ಒಂಬತ್ತು ಗಂಟೆಗೆ ಕದ್ರಿಯಲ್ಲಿರುವ ಮೇಲೆ ಹೇಳಿದ ಬೇಂಕಿನ ಬಳಿಗೆ ಸುಪರಿಡೆಂಟನು ಬಂದನು. ಆಗ ಬೇಂಕಿನ ಮೇನೇಜರನಾದ ನಾರಾಯಣರಾಯನು ಅವನತ ವದನನಾಗಿ ಚಿಂತಿಸುತ್ತ ವರ್ಹಾಂಡದಲ್ಲಿ ಅಸ್ತವ್ಯಸ್ತವಾಗಿ ಹೆಜ್ಜೆಯಿಟ್ಟು ಶತಪಥ ಹಾಕುತ್ತಿದ್ದುದನ್ನು ಕಂಡನು. ಯಶವಂತನು ನಾರಾಯಣನನ್ನು ಕಂಡು, ಏನೋ ಈ ಬೇಂಕಿನಲ್ಲಿ ನಿನ್ನೆ ಅವಘಡ ಉಂಟಾಗಿದೆಯೆಂದು ತರ್ಕಿಸಿ, ಮೆಟ್ಟಿಲುಗಳನ್ನೇರಿ ಬಂದು ನಾರಾಯಣರಾಯನ ಬೆನ್ನು ತಟ್ಟಲು, ಅವನು ಬೆಚ್ಚಿಬಿದ್ದನು. ಅವನು ತಿರುಗಿ ನೋಡಿದಾಗ ಯಶವಂತಸಿಂಹನನ್ನು ಕಂಡು ಹರ್ಷಚಿತ್ತನಾಗಿ—ಮಹಾಶಯರೆ! ನಮಸ್ಕಾರ, ಬನ್ನಿರಿ, ವಿಶ್ರಮಿಸಿರಿ, ಎಂದು ಹೇಳಿ ಕಾರ್ಯಾಲಯಕ್ಕೆ ಕರೆಕೊಂಡು ಹೋದನು.

ಕಾರ್ಯಾಲಯದಲ್ಲಿ ಒಂದು ದೊಡ್ಡ ಮೇಜು ಚಿತ್ರವಿಚಿತ್ರವಾದ ಬಟ್ಟೆಯಿಂದಾಚ್ಛಾದಿತವಾಗಿದ್ದಿತು; ಅದರ ಎದುರುಗಡೆಯಲ್ಲಿ ಮೂರು-ನಾಲ್ಕು ಕುರ್ಚಿಗಳಿದ್ದುವಲ್ಲದೆ, ಅದರ ಸಮೀಪ ಕೆಲವು ಬೆಂಚುಗಳಿದ್ದುವು. ನಾರಾಯಣರಾಯನು ಸುಪರಿಡೆಂಟನನ್ನು ಒಂದು ಕುರ್ಚಿಯಲ್ಲಿ ಕುಳ್ಳಿರಿಸಿ ಅನಂತರ ತಾನು ಬೇರೊಂದರಲ್ಲಿ ಕುಳಿತನು. ಸುಪರಿಡೆಂಟನಾಗ ಇಲೆಕ್ಟ್ರಿಕಲ್ ಎಂಜಿನೀಯರ ಆದ ಲೋಬೋನಿಂದ ರಚಿಸಲ್ಪಟ್ಟ ಸುಂದರ ನರ್ತಿಸುವ ಬೊಂಬೆಯನ್ನು ನರ್ತಿಸುವಂತೆ ಮಾಡಿರಿ,ಎನ್ನಲವನು ಆತನು ಸ್ವಿಚ್ ಹಾಕಲು ಬೊಂಬೆಯು ಮನೋಹರವಾಗಿ ನಾಟ್ಯ ಮಾಡಲಾರಂಭಿಸಿತು. ಅನಂತರ ಯಶವಂತನು ನಾರಾಯಣರಾಯರೆ! ನನ್ನನ್ನು ಬರಮಾಡಿಸಲು

ಕಾರಣವೇನೆಂದು ಕೇಳಲವನು ಹೀಗೆಂದನು:—ನಿನ್ನೆ ದಿನ ಯಾರೋ ಒಬ್ಬ ವರ್ತಕನು ಕೆಲವು ಆಭರಣಗಳನ್ನು ಇಲ್ಲಿ ಒತ್ತೆಯಿಟ್ಟಿರುವನು. ಅದರ ಬೆಲೆ ಸಾಧಾರಣ ಹತ್ತು ಸಾವಿರ ರೂಪಾಯಿ ಆಗಬಹುದು. ಈ ದಿನ ಬೆಳಿಗ್ಗೆ ನಾನು ನಗಗಳನ್ನಿಟ್ಟ ಪೆಟ್ಟಿಗೆಯ ಹತ್ತಿರ ಹೋಗಿ ಬೀಗದ ಮೇಲಿನ ಸೀಲ ಸರಿಯಾಗಿದೆಯೋ ಎಂದು ನೋಡಿದೆನು; ಸೀಲು ಸರಿಯಾಗಿತ್ತು. ಸ್ವಲ್ಪ ಹೊತ್ತಿನಲ್ಲಿ ಡೈರೆಕ್ಟರರು ಬ್ಯಾಂಕಿಗೆ ಬಂದು, ಇಲ್ಲಿ ಒತ್ತೆಯಿಟ್ಟಿರುವ ನಗಗಳನ್ನು ನೋಡುವ, ಎಂದಾಗ ನಾನು ಪೆಟ್ಟಿಗೆಯ ಬೀಗದ ಮೇಲಿನ ಸೀಲು ತೆಗೆದು ಪೆಟ್ಟಿಗೆಯ ಬಾಗಿಲನ್ನು ತೆರೆದೆನು. ಆಗ ನಾನು ಬೆಚ್ಚಿ ಬಿದ್ದು ಎಲ! ಇದೇನು? ಎಂದು ಉದ್ಗರಿಸಲು, ಡೈರೆಕ್ಟರರು ವಿಷಯವೇನೆಂದು ಪ್ರಶ್ನಿಸಿದರು. ನಾನಾಗ ಗಾಬರಿಯಿಂದಲೂ ಚಿಂತೆಯಿಂದಲೂ, ನಿನ್ನೆ ಇಲ್ಲಿಟ್ಟ ನಗಗಳು ಮಾಯ....ಎಂದು ಹೇಳುತ್ತಿರುವಷ್ಟರಲ್ಲಿ ಏನು ? ಕಳವಾಗಿದೆಯೇ? ಅವರು ಕಳವಳದಿಂದ ನಡುಗುತ್ತಾ ಹೇಳಿ ಸಖೇದಾಶ್ಚರ್ಯಗೊಂಡರು. ಅವರು ಯಾವ ಯಾವ ನಗಗಳು ಕಳವಾಗಿ ಹೋಗಿರುವವು? ಎಂದು ಕೇಳಲು, ಒಂದು ಚಿನ್ನದ ಹೂ, ವಜ್ರದ ಬೆಂಡೋಲೆ, ನಾಲ್ಕು ಚಿನ್ನದ ಬಳೆಗಳು, ಬಂಗಾರದ ತಾಟೊಂದು ಮತ್ತು ಹತ್ತು ಪವನಗಳು, ಇವಿಷ್ಟು ಮಾಯವಾಗಿವೆಯೆಂದೆನು. ಇದನ್ನು ಕೇಳಿ ಡೈರೆಕ್ಟರರಿಗೆ ಆಕಾಶವೇ ಕಳಚಿಬಿದ್ದಂತಾಯಿತು. ಅವರು ವ್ಯಸನಗೊಂಡು, ಕೂಡಲೇ ಯಾವಿಃಕರೊಡೆಯರಿಗೆ ತಿಳಿಸೆಂದು ಹೇಳಿ, ದುಃಖಿಸುತ್ತ ಇಲ್ಲಿಂದ ಹೋದರು. ತಾವು ಕಳವಾಗಿ ಹೋದ ನಗಗಳನ್ನು ಪುನಃ ನಮ್ಮ ಕೈಸೇರುವಂತೆ ಮಾಡಬೇಕೆಂದು ಇಚ್ಛಿಸುವೆನು.

ಯಶವಂತನು ಇಷ್ಟರವರೆಗೆ ಈ ರೀತಿಯ ಕಳವನ್ನು ಕಂಡೂ ಕೇಳಿಯೂ ಅರಿತಿರಲಿಲ್ಲ. ಅವನು ಆಶ್ಚರ್ಯಗೊಂಡು ಇತಿಕರ್ತವ್ಯತಾಮೂಢನಾದನು. ಇದೇನು, ಬೀಗದ ಮೇಲಿನ ಸೀಲನ್ನು ತೆಗೆದು ಬೀಗತೆರೆಯದೆ, ಚೋರರು ಹೇಗೆ ಕಳವು ಮಾಡಿರಬಹುದು? ಇಂದ್ರಜಾಲ-ಮಹೇಂದ್ರಜಾಲವೆ! ಅಥವಾ ಭೂತ ಪ್ರೇತ ಪಿಶಾಚಿಗಳ ಆಟವೆ ಇದು! ಅಥವಾ ನೀಚ ಮಂತ್ರವಾದಿಯ ಕಪಟನಾಟವೆ!ಎಂದವನು ತಿಳಿಯದೆ ದಿಂಗ್ಮೂಢನಾದನು. ಜಾರ್ನೆ ಕಳೆದು ಹೋದ ನಗಗಳ ಪತ್ತೆಯೊಂದೆಡೆ. ಈ ಜಟಿಲ ಸಮಸ್ಯೆಯನ್ನು ಬಿಡಿಸುವುದು ಮತ್ತೊಂದೆಡೆ ಈ ರೀತಿಯ ಕಷ್ಟ ಪರಂಪರೆಗಳಿಂದ

ವನು ಜರ್ಜರಿತನಾಗಿ ಶೋಕಾಕ್ರಾಂತನಾದನು. ಹಾ ದೈವವೆ! ನಿನ್ನ ಆಟದಿಂದಲಾಗಿ ಯಾರಿಗಿಲ್ಲ ಕಷ್ಟ ಒದಗಿತು. ಹಾ! ಸರ್ವಾಂತರ್ಯಾಮಿಯಾಗಿದ್ದು, ನಿರಾಕಾರ ನಿರಂಜನ ನಿರ್ಲಿಪ್ತನಾಗಿಪ್ಪ ಭಗವಾನ್ ಪರಶಿವನೆ! ನಮ್ಮನ್ನು ಕಾಪಾಡು, ಎಂದು ಯಶವಂತನು ಭಕ್ತಾಭೀಷ್ಟ ಪ್ರದಾಯಕನಾದ ಭಗವಂತನನ್ನು ನೆನೆದನು. ಸತ್ಯವು ಲೋಕದಲ್ಲಿ ಚಿರಸ್ಥಾಯಿಯಾಗಿ ಇರುವುದಾದರೆ, ಸಜ್ಜನರಿಗೆ ಭೂಮಿಯಲ್ಲಿ ಸತ್ವಶಕ್ತಿಯಿದ್ದರೆ ಮಾನವ ಪ್ರೇಮಿ ಬಡವರ, ಅಸಹಾಯಕರ ಪಕ್ಷಪಾತಿಯಾದ ಅಮೋಘವಿಜಯದ ಪತ್ತೆದಾರಿಯಾದ ಕರಮುಚಂದನೇ ಸರ್ವಸಾಮಾನ್ಯರಿಗೆ ಬಿಡಿಸಲಸಾಧ್ಯವಾದ ಈ ಜಟಿಲ ಸಮಸ್ಯೆಗಳನ್ನು ಬಿಡಿಸಲು ಸಮರ್ಥನು. ಅವನಲ್ಲದೆ ಬೇರಾರೂ ಗುರುತರವಾದ ಈ ಅಭೇದ್ಯವಾದ ಸಮಸ್ಯೆಗಳನ್ನು ಬಗೆಹರಿಸಲು ಸಮರ್ಥರಾಗಲಿಕ್ಕೇ ಇಲ್ಲವೆಂದು ನೆನೆದನು.

---

# ಕರಮುಚಂದ

ವಾಚಕರೆ! ಕರಮುಚಂದನ ಪರಿಚಯವನ್ನು ಮಾಡಿಕೊಡಲು ನಾನೀಗ ಆತುರನಾಗಿದ್ದೇನೆ: ಅಲ್ಲದೆ ತಾವು ಸಹ ಸುಪ್ರಸಿದ್ಧ ತುಬ್ಬಗಾರನಾದ ಅವನ ಪರಿಚಯ ಮಾಡಲು ಹಿಂಜರಿಯಲಿಕ್ಕಿಲ್ಲವೆಂದು ಭರವಸೆ ಪಟ್ಟಿರುವೆನು. ಮುಂದಿನ ಕಥೆಯನ್ನು ಬಿಟ್ಟು 'ಸಂದಿಯಲ್ಲಿ ಸಮಾರಾಧನೆ' ಮಾಡಿದಂತಾದುದಕ್ಕೆ ಕ್ಷಮಿಸೋಣಾಗಲಿ.

ಕರಮುಚಂದನು ಮಂಗಳೂರಿನಲ್ಲಿ ಹೆಸರಾಂತ ಪತ್ತೆದಾರಿಯಾಗಿದ್ದನು. ಚಿಕ್ಕಂದಿನಲ್ಲಿಯೇ ಅವನು ವಿಜ್ಞಾನವನ್ನು ಚೆನ್ನಾಗಿ ಅಭ್ಯಸಿಸಿದ್ದನು. ಅವನ ವಯಸ್ಸು ಸಾಧಾರಣ ೩೦—೩೫ ಆಗಬಹುದು. ಆಜಾನುಬಾಹುವಾಗಿದ್ದು ಗರಡಿ ಸಾಧನೆಯಲ್ಲಿ ಪಳಗಿದವನಾಗಿದ್ದನು. ಬಹಳ ಚಮತ್ಕಾರವುಳ್ಳವನೂ ಕೈಚಳಕದಿಂದ ಕೂಡಿದವನೂ ಆಗಿದ್ದನಲ್ಲದೆ ಸ್ವರ ಬದಲಾಯಿಸುವುದರಲ್ಲಿ, ಕಪಟವೇಷ ಧರಿಸುವುದರಲ್ಲಿ ವಿಶೇಷ ನೈಪುಣ್ಯವನ್ನು ಪಡೆದಿದ್ದನು. ಕುಶಾಗ್ರಬುದ್ಧಿಯುವನಾದ ಕರಮುಚಂದರು ಸಹನಶೀಲನಾಗಿದ್ದು ಅದ್ಭುತಪರಾಕ್ರಮಿಯಾಗಿದ್ದನು. ವಾಗ್ಮಿಯೂ, ರಸಿಕ ಶಿರೋಮಣಿ ದಾನಶೀಲನೆಂದೂ ನಗರದಲ್ಲೆಲ್ಲ ಪ್ರಸಿದ್ಧನಾಗಿದ್ದನು. ಅವನ ತವರೂರು

ಕುಂದಾಪುರವಾಗಿದ್ದರೂ, ಅನೇಕ ವರ್ಷಗಳಿಂದವನು 'ಭೂಲೋಕದ ಸ್ವರ್ಗ' ವೆಂತಿದ್ದ ಮಂಗಳೂರಿನಲ್ಲಿ ವಾಸವಾಗಿದ್ದನು. ಆತನ ತಮ್ಮನಾದ ರಾಮದಾಸನು ಸಾಧಾರಣ ಇಪ್ಪತ್ತು-ಇಪ್ಪತ್ತೈದು ವಯಸ್ಸಿನವನಾಗಿದ್ದು ಚುರುಕು ಸ್ವಭಾವದವನೂ, ಸಾತ್ವಿಕನೂ ಆಗಿದ್ದನು. ಸುಂದರನಾಗಿಯೂ, ಬಲವಂತನಾಗಿಯೂ ಇದ್ದ ಆ ಸಹೋದರನು ಕರಮಚಂದನಿಗೆ, ಕೆಲವು ರಹಸ್ಯ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ಸಹಾಯಕನಾಗಿದ್ದನು. ಅನೇಕ ಸಲ ಕಳ್ಳರನ್ನು ಅನುಸರಿಸಿ ಹೋಗಿ ಅವರ ಗುಪ್ತ ಬೇತುಗಳನ್ನು ಅರಿಯುತ್ತಿದ್ದನಾದರೂ, ಒಂದೊಂದು ಸಲ ಚೋರರ ಕೈಗೆ ಅಜಾಗರೂಕತೆಯಿಂದ ಸಿಕ್ಕಿಬಿದ್ದಾಗ, ಪತ್ತೆದಾರಿ ಕರಮಚಂದನು ಅವನನ್ನು ಕಾಪಾಡುತ್ತಿದ್ದನು. ಛದ್ಮವೇಷ ಧರಿಸುವುದರಲ್ಲಂತೂ ಅವನು ಅಣ್ಣನನ್ನು ಸೋಲಿಸುತಿದ್ದನು ಕೈಚಮತ್ಕಾರದಲ್ಲಿ ರಾಮದಾಸನನ್ನು ಮಿಗಿಲಿಸುವವರು ಇಲ್ಲವೇ ಇಲ್ಲ.' ಕರಮಚಂದನ ಮನೆಯಲ್ಲಿ ಅವನಲ್ಲದೆ, ತಮ್ಮ ತಾಯಿ ಮತ್ತು ಸೇವಕನಾದ ಲಿಂಗಪ್ಪನ ಹೊರತು ಬೇರಾರೂ ಇರಲಿಲ್ಲ. ಪತ್ತೆದಾರಿಗಿನ್ನೂ ವಿವಾಹವಾಗಿರಲಿಲ್ಲ.

ಪತ್ತೆದಾರಿಯು ಶ್ರೀಮಂತನೇ ಆಗಿದ್ದನು. ತವರೂರಾದ ಕುಂದಾಪುರದಿಂದ ಅವನಿಗೆ ವರ್ಷಕ್ಕೆ ಸಾವಿರ ಮುಡಿ ಅಕ್ಕಿ ಗೇಣಿ ಬರುತ್ತಿದ್ದುದಲ್ಲದೆ ಬೇಂಕಿನಲ್ಲಿ ಸಾಧಾರಣ ಇಪ್ಪತ್ತು-ಇಪ್ಪತ್ತೈದು ಸಾವಿರ ರೂಪಾಯಿ ಅವನ ಹೆಸರಿನಲ್ಲಿದ್ದಿತು. ಮಂಗಳೂರಿನಲ್ಲಿ ಕದ್ರಿಯೆಂಬಲ್ಲಿ ಅವನಿಗೊಂದು ದೊಡ್ಡ ಹಿತ್ತಲಿದ್ದಿತು ಅಲ್ಲಿಯೇ ಅವನ ಮನೆ. ಮನೆಯು ಅಚ್ಚುಗಟ್ಟಾಗಿದ್ದು ನಾಗರೀಕರಿಗೆ ವಾಸಿಸಲು ಯೋಗ್ಯವಾಗಿದ್ದಿತು. ಮಾಳಿಗೆಯು ಬಹಳ ಸುಂದರವಾಗಿತ್ತು. ಅನೇಕ ಲತಾಮಂಟಪಗಳಿಂದಲೂ ಅನ್ಯದೇಶೀಯ ಹೂ ಗಿಡ ಮತ್ತು ಅನೇಕ ಹಣ್ಣು-ಹಂಪಲುಗಳ ಗಿಡಮರಗಳಿಂದ ಅವನ ಉದ್ಯಾನವು ಶೋಭಿಸುತಿದ್ದು, ಇಡೀ ಹಿತ್ತಲೇ ಜನರ ಮನಸ್ಸನ್ನಾಕರ್ಷಿಸುವಂತಿತ್ತು. ಗೇಟಿನ ಮೇಲೆ ಕಮಾನಿನಲ್ಲಿ ಹಿತ್ತಾಳೆಯ ತಗಡಿನಲ್ಲಿ ದಪ್ಪ ದಪ್ಪ ಅಕ್ಷರಗಳಲ್ಲಿ 'ಕರಮಚಂದ' ಎಂದು ಕೆತ್ತಿದ್ದರು. ಗೇಟಿನ ಬಳಿಯಲ್ಲಿಯೇ ಇರುವ ಕಾರಂಜಿಗಳಿಂದ ನೀರು ಚಿಮ್ಮುತ್ತಿತ್ತು. ಕರಮಚಂದನು ಕಲಾಕೌಶಲ್ಯದಿಂದಲಾಗಿ ವಿದ್ಯುತ್‌ಕಿರಣಗಳು ಕಾರಂಜಿಯಿಂದ ಚಿಮ್ಮುತ್ತಿರುವ ನೀರಿನ ಹನಿಗಳ ಮೇಲೆ ಬೀಳುವಂತೆ ಮಾಡಿದ್ದುದರಿಂದ,ಸಾಯಂಕಾಲ ಆರುಗಂಟೆಗೆ

ವಿದ್ಯುತ್ ಕಿರಣಗಳು ನೀರಿನ ಹನಿಯುಮೇಲೆ ಬಿದ್ದಾಗ ಅನೇಕ ಬಣ್ಣಗಳುಂಟಾಗಿ, ಆ ಉದ್ಯಾನವು ಬಹು ಸುಂದರವಾಗಿ ಶೋಭಿಸುತ್ತಿತ್ತು.

ಕರಮಚಂದನು ತೇಜಸ್ವಿಯಾಗಿದ್ದು ಗಂಭೀರ ಹೃದಯವುಳ್ಳವನಾಗಿದ್ದನು. ಸತ್ಯಪಕ್ಷವೇ ಲೋಕದಲ್ಲಿ ಆಚಂದ್ರಾರ್ಕವಾಗಿ ಉಳಿಯಬೇಕೆಂದು ಅವನು ಕೆಲಸಮಾಡುತ್ತಿದ್ದನು. ಅಹಂಕಾರಿಗಳನ್ನು ಕಂಡರೆ ಅವನಿಗೆ ಆಗುತ್ತಿರಲಿಲ್ಲ. ಸರಿಯಾದ ಆಧಾರಗಳು ದೊರೆಯದೆ ಇರಲು, ಅವನು ಯಾರನ್ನೂ ಅಪರಾಧಿಗಳೆಂದು ತಿಳಿಯುತ್ತಿರಲಿಲ್ಲ. ಕರಮಚಂದನು ತುಬ್ಬು ಮಾಡಲು ಹೊರಟನೆಂದರೆ, ಆ ರಹಸ್ಯವು ಬಯಲಾದಂತೆ ಎಂದೆಲ್ಲವರಿಗೂ ತಿಳಿದಿತ್ತು. ಕಳ್ಳರು ಅವನ ಹೆಸರು ಕೇಳಿದೊಡನೆ ಗಡಗಡ ಎಂದು ನಡುಗುತ್ತಿದ್ದರು. ಗರಡಿ ಸಾಧನೆಯಲ್ಲಿ ಪಳಗಿದ ಅವನಂಥ ಬಂಟನೆದುರು ಬದ್ಮಾಷರು ಬರುತ್ತಲೇ ಇರಲಿಲ್ಲ. ಪೋಲೀಸ ಡಿಪಾರ್ಟಮೆಂಟಿನಿಂದ ಕಂಡು ಹಿಡಿಯಲಿಕ್ಕಾಗದ ಗುಪ್ತವಿಷಯಗಳನ್ನು ಬಹಿರಂಗಪಡಿಸುತಿದ್ದನು. ಸರಕಾರದವರಿಂದ ನಿರಪರಾಧಿಗಳು ಅಪರಾಧಿಗಳೆಂದು ತೀರ್ಮಾನಿಸಲ್ಪಟ್ಟಾಗ, ನಿರಪರಾಧಿಗಳನ್ನು ಕಾಪಾಡಿ, ನಿಜವಾದ ದುಷ್ಟ ಅಪರಾಧಿಗಳನ್ನು ಪತ್ತೆಮಾಡಿ ಶಿಕ್ಷೆಗೊಳಗಾಗುವಂತೆ ಮಾಡಿದ್ದನು. ಬಡಜನರಿಗೆ ವಿಪತ್ತೊದಗಿದಾಗ ಕರಮಚಂದನೆಂದರೆ ಪ್ರತ್ಯಕ್ಷ ದೇವರಂತಿದ್ದನು. ದುಷ್ಟರಿಗೆ ಅವನು ಕಾಲನಂತೆಯೂ ಸಾತ್ವಿಕರಿಗೆ ದೈವದಂತೆಯೂ ಇದ್ದನು.

ಪತ್ತೆದಾರಿಯ ಮನೆಯ ಪೋರ್ಚಿಕೋದಲ್ಲಿ ರತ್ನಗಂಬಳಿ ಹಾಸಿದ್ದರು. ರೌಂಡ್ ಟೇಬಲ್ಲಿನ ಬಳಿಯಲ್ಲಿ ಅನೇಕ ಆರಾಮ ಕುರ್ಚಿಗಳನ್ನಿಟ್ಟಿದ್ದರು. ಗಾಂಧೀಜೀ, ತಿಲಕ, ವಿವೇಕಾನಂದ ಮೊದಲಾದ ದೇಶಭಕ್ತರ ಭಾವಚಿತ್ರಗಳು ಗೋಡೆಯಲ್ಲಿ ತೂಗಿಸಲ್ಪಟ್ಟಿದ್ದುವು. ಈದಿನ ಬೆಳಿಗ್ಗೆ ಕರಮಚಂದನು ಉಪಹಾರ ತೀರಿಸಿ, ಪೋರ್ಚಿಕೋದಲ್ಲಿ ಕುಳಿತುಕೊಂಡು ಸಿಗರೇಟ ಸೇದುತ್ತಾ ಯಾವುದೋ ಒಂದು ಆಂಗ್ಲಪತ್ರಿಕೆಯನ್ನು ಓದುತ್ತಿದ್ದನು. ಆ ವೃತ್ತಪತ್ರಿಕೆಯಲ್ಲಿ ಈ ರೀತಿಯಿದ್ದಿತು. "ಕೆಲವು ದಿವಸಗಳ ಹಿಂದೆ ಫ್ರಾನ್ಸ್ನಲ್ಲಿ ದಸ್ಯುವೊಬ್ಬನು ವಿಜ್ಞಾನದ ಬಲದಿಂದ, ಯಾವುದೋ ಒಂದು ವಿಷಯುಕ್ತವಾದ ಪರಿಮಳದ ಪೌಡರನ್ನು ತಯಾರಿಸಿ, ತನ್ನನ್ನು ವಿವಾಹವಾಗಲು ನಿರಾಕರಿಸಿದ ರಮಣಿಗೆ ಯುಕ್ತಿ-ಪ್ರಯುಕ್ತಿಗಳಿಂದ ಬಹುಮಾನವಾಗಿ ಕೊಟ್ಟನು. ಆ ತರುಣಿಯು ಈ ಸುಗಂಧದ ಪೌಡರ ವಿಷಯುಕ್ತ

ವಾರ್ಧದಿಂದು ತಿಳಿಯದೆ, ಸಂತೋಷದಿಂದ ಮುಖಕ್ಕೆ ಹಚ್ಚಿದಳು. ಮರು ದಿವಸ ಬೆಳಿಗ್ಗೆ ಅವಳ ಮುಖದಲ್ಲಿ ಗುಳ್ಳೆಗಳೆದ್ದವು. ಭಯಂಕರವಾದ ಆ ವಿಷ ದಿಂದ ಉಂಟಾದ ಗುಳ್ಳೆಗಳನ್ನು ಪ್ರಖ್ಯಾತಿಪಟ್ಟ ಯಾವ ಡಾಕ್ಟರುಗಳಿಗೂ ಶಮನಮಾಡಲು ಅಸಾಧ್ಯವಾಯಿತು ಎರಡು-ಮೂರು ದಿವಸಗಳಲ್ಲಿ ಆ ತರು ಣಿಯು ಮೃತಪಟ್ಟಳು, ಎಂದಿದ್ದಿತ್ತು. ಅದನ್ನೋದಿ, ಕರಿಮುಚಂಡ ಈಗ ಜನರು ವಿಜ್ಞಾನ ಶಕ್ತಿಯನ್ನು ದುರುಪಯೋಗಗೊಳಿಸಿ ಜನಾಂಗಕ್ಕೆ ಕೇಡನ್ನು ಬಗೆಯುತ್ತಾರಲ್ಲಾ! ಎಂದು ಚಿಂತಿಸಿದನು.

ಆಗ ರಾಮುದಾಸನು ಮನೆಯಲ್ಲಿರಲಿಲ್ಲ. ಯಾವದೋ ಒಂದು ಅಗತ್ಯದ ಕೆಲಸಕ್ಕಾಗಿ ಪೇಟೆಗೆ ಹೋಗಿದ್ದನು. ಆಗ ಸಾಧಾರಣ ಹತ್ತುಗಂಟೆ ಸಮಯ ವಾಗಿರಬಹುದು. ಕರಿಮುಚಂಡನ ದೃಷ್ಟಿಯು ಇನ್ನೂ ಪತ್ರಿಕೆಯ ಮೇಲೆಯೇ ಇದ್ದಿತು. ಅವನಿಗಾಗ ಬೂಟ್ಸಿನ ಟಿಪ್....ಟಿಪ್....ಟಿಪ್....ಶಬ್ದ ಕೇಳಿ ಸಲು. ಆದಾರೋ ತಮ್ಮಲ್ಲಿಗೆ ಬರುತ್ತಿರುವರೆಂದು ತಿಳಿದು, ತಿರುಗಿ ನೋಡಲು ಪೋಲೀಸ ಸುಪರಿಡೆಂಟ್ ಯಶವಂತಸಿಂಹನು ಬರುವುದನ್ನು ಕಂಡು, ಅವನನ್ನು ಹಸ್ತಲಾಘವದೊಡನೆ ಸತ್ಕರಿಸಿ, ಕುರ್ಚಿಯಲ್ಲಿ ಕುಳ್ಳಿರಿಸಿ ಒಳಗೆ ಹೋದನು. ಅರೆ ಕ್ಷಣದಲ್ಲಿ ಕೈಯಲ್ಲಿ ಎರಡು ಕಪ್ ಕಾಫಿ ತೆಗೆದುಕೊಂಡು ಬಂದು ಒಂದನ್ನು ಯಶವಂತಸಿಂಹನ ಮುಂದಿಟ್ಟು ತೆಗೆದುಕೊಳ್ಳಿರೆಂದು ತಾನೂ ಕಾಫಿ ಸ್ವೀಕರಿಸಿದನು. ಅಷ್ಟರಲ್ಲಿ ಪೇಟೆಯಿಂದ ರಾಮುದಾಸನೂ ಬಂದನು. ಅವನು ಕೆಲವು ಬಿಸ್ಕೂಟ್‌ಗಳನ್ನು ಅವರಿಬ್ಬರ ಮುಂದಿಡಲು, ಯಶವಂತನು ಬೇಡವೆಂದರೂ ಅವನು ಒತ್ತಾಯ ಮಾಡಿ ಸ್ವೀಕರಿಸುವಂತೆ ಮಾಡಿದನು.

ಅನಂತರ ಕರಿಮುಚಂಡನು ಯಶವಂತಸಿಂಹನೊಡನೆ ಕುಶಲಪ್ರಶ್ನೆ ಗಳನ್ನಾಡಿ, ನೀವು ಕಾರಣವಿಲ್ಲದೆ ನಮ್ಮಂಥವರಲ್ಲಿಗೆ ಬರುವ ಕ್ರಮವಿಲ್ಲವಷ್ಟೆ? ವಿಶೇಷ ಕಾರ್ಯಕ್ರಮವೇನಾದರೂ ಇದೆಯೇ? ಎಂದು ಕೇಳಿದನು. ಆಗ ಸುಪರಿಡೆಂಟನು ಜಾರ್ಜ ಒಡವೆಗಳು ಕಳವಾದ ವಿಷಯವನ್ನೂ 'ನ್ಯೂ ಮೋಡೆಲ್ ಬೆಂಕಿ'ನಿಂದ ಹತ್ತು ಸಾವಿರ ಕ್ರಯ ಬಾಳುವ ನಗಗಳು ಮಾಯ ವಾದ ಸಂಗತಿಯನ್ನೂ ತಿಳಿಸಿದನಲ್ಲದೆ, ಬೇಂಕಿನಿಂದ ತಸ್ಕರರು ಯಾವ ರೀತಿ ಯಲ್ಲಿ ಕಳವು ಮಾಡಿದರೆಂದು ಗೊತ್ತಾಗುವುದಿಲ್ಲವೆಂದನು. ಪೆಟ್ಟಿಗೆಯಲ್ಲಿ ನಗಗಳನ್ನಿಟ್ಟು ಬೀಗಹಾಕಿದ ನಂತರ ಬೀಗದ ಮೇಲಿನ ಸೀಲನ್ನು ತೆಗೆಯದೆ

ಕಳ್ಳರು ಹೇಗೆ ನನಗಳನ್ನು ಅಪಹರಿಸಿದರೆಂದು ತಿಳಿಯುವುದಿಲ್ಲವಲ್ಲವೆಂದನು. ಚೋರರು ಪಿಶಾಚಿಗಳ ಸಹಾಯದಿಂದ ಕಳವು ಮಾಡಿದರೋ ಅಥವಾ ಇಂದ್ರ ಜಾಲ-ಮಹೇಂದ್ರಜಾಲಗಳಿಂದ ಅಪಹರಿಸಿದರೋ, ಜಾದೂವಿದ್ಯೆಯಿಂದ ಕಳವು ಮಾಡಿದರೊ ಒಂದೂ ಗೊತ್ತಾಗುವದಿಲ್ಲವಾದುದರಿಂದ, ತಾವು ಈ ರಹಸ್ಯವನ್ನು ಬಹಿರಂಗಮಾಡಬೇಕು. ಎಂದು ಹೇಳಿದನು. ಕರಮಚಂದನು ಆಗ ಮುಗುಳು ನಗುತ್ತಾ ಸರ್ವರಿಗೂ ಹಿತವನ್ನುಂಟು ಮಾಡುವ ಸರ್ವ ವಿಘ್ನ ನಿವಾರಕನಾದ ಪರಶಿವನ ಕರುಣಾ ಕಟಾಕ್ಷವು ನಮ್ಮ ಮೇಲಿದ್ದರೆ ಕೆಲಸವಾಗುವದೆಂದನು. ಅನಂತರ ಕರಮಚಂದನು ಯಶವಂತಸಿಂಹ ನೊಡನೆ ಪೋಲೀಸ ಠಾಣೆಗೆ ಹೋದನು. ಅವನು ಸುಪರಿಡೆಂಟನಿಂದ ಡೈರಿ ಯನ್ನು ಪಡೆದುಕೊಂಡು, ಜಾರ್ಜನಿಗೂ ಅವನಿಗೂ ಆದ ಸಂಭಾಷಣೆಯನ್ನು ಓದಿ ನೋಡಿದನು.

ಈ ದಿನ ಟೀಪಾರ್ಟಿಗೆಂದು ವಿಜ್ಞಾನಿಯಾದ ಲೋಬೋನು ಗಣ್ಯ ವ್ಯಕ್ತಿಗಳಾದ ಕರಮಚಂದ, ಜಾರ್ಜ, ಯಶವಂತಸಿಂಹ, ಸರ್ಜನರಾದ ಕೃಷ್ಣ ರಾಯ, ನಿವೃತ್ತ ಜಡ್ಜರಾದ ವಿಠ್ಠಲರಾವ, ಜಮೀನ್ದಾರ ಲಕ್ಷ್ಮಣರಾವ ಮೊದಲಾದವರಿಗೆ ಆಮಂತ್ರಣವನ್ನಿತ್ತಿದ್ದನು. ಸಾಯಂಕಾಲ ಐದು ಗಂಟೆಗೆ ಜಾರ್ಜನರ ಕಾರಿನಲ್ಲಿ ಅವರೊಡನೆ ಪತ್ತೆದಾರ ಕರಮಚಂದ, ಸುಪರಿಡೆಂಟ ಯಶವಂತಸಿಂಹ ಇವರುಗಳೂ ಮತ್ತು ಅವರವರ ಕಾರುಗಳಲ್ಲಿ ಬೇರೆ ಬೇರೆ ಪ್ರತಿಷ್ಠಿತವ್ಯಕ್ತಿಗಳೂ ವಿಜ್ಞಾನಿಯ ಮನೆಗೆ ಬಂದರು. ಲೋಬೋನ ಮನೆಯ ಎದುರುಗಡೆಯಲ್ಲಿ ಆಗಮಿಸಿದ ಅತಿಥಿಗಳ ಕಾರಿನ ಸಾಲುಗಳು, ಜಟ್ಕಾ, ಸೈಕಲ್ ಮೊದಲಾದ ವಾಹನಗಳ ಸಾಲುಗಳು ಬಹಳ ರಮ್ಯವಾಗಿ ತೋರು ತಿದ್ದವು. ಲೋಬೋ ಎಲೆಕ್ಟ್ರಿಕಲ್ ಇಂಜನೀಯರನು. ಎಲ್ಲರನ್ನೂ ಸತ್ಕರಿಸಿ ಸವಿನಯ ಆದರದೊಡನೆ ಪಶ್ಚಿಮ ದಿಕ್ಕಿನಲ್ಲಿರುವ ಉದ್ಯಾನಕ್ಕೆ ದಯಮಾಡ ಬೇಕೆಂದು ಹೇಳಿ, ಅತಿಥಿಗಳನ್ನು ಕರೆದುಕೊಂಡು ಹೋದನು.

ಆ ಉದ್ಯಾನದಲ್ಲಿ ವಿಧವಿಧದ ಬಣ್ಣಗಳ ಪುಷ್ಪಗಳಿದ್ದವು. ಒಂದೇ ಗಿಡದಲ್ಲಿ ಬಿಳಿ, ಹಸರು, ಕೆಂಪು, ಹಳದಿ ಮೊದಲಾದ ಬಣ್ಣಗಳಿರುವ ಹೂ ಗಳಿದ್ದವು! ಚಿತ್ರವಿಚಿತ್ರವಾಗಿ ಅರಳಿ ಹೂಬಿಟ್ಟ ಲತಾಬಳ್ಳಿಗಳು ಅನೇಕ- ವಿದ್ದವು ಉದ್ಯಾನದ ಮಧ್ಯದಲ್ಲಿ ಒಂದು ಸುಂದರವಾದ ಕೃತಕ ಸರೋವರ

ವಿದ್ದಿತು. ಅದರಲ್ಲಿ ಅನೇಕ ಕಮಲ ಪುಷ್ಪಗಳೂ ಅಲ್ಲದೆ, ವಿದೇಶದಲ್ಲಿ ನೀರಿನಲ್ಲಿ ಬೆಳೆಯುವ ಕೆಲವು ಸುಂದರ ಹೂಗಳೂ ಇದ್ದವು. ಆ ಕೆರೆಯ ನೀರು ಶುಭ್ರವಾಗಿದ್ದು ಕನ್ನಡಿಯಂತೆ ಪ್ರತಿಬಿಂಬವನ್ನು ಮಾಡುತ್ತಿತ್ತು. ಕಮಲಗಳಲ್ಲಿ, ಮಕರಂದವನ್ನು ಸವಿಯಲು ಬಂದ ತುಂಬಿಗಳು ಝೇಂಕರಿಸುತ್ತಿದ್ದಾಗ ಸುರಸುಂದರಿಯರು ಆ ನೀರಿನಲ್ಲಿ ಮುಳುಗಿಕೊಂಡಿದ್ದಾಗ ಅವರ ತಲೆಯು ಮಾತ್ರ ನೀರಿನಿಂದ ಮೇಲಿದ್ದರೆ, ಆಗ ಅವರ ಮುಖಕಮಲದಲ್ಲಿ ಹಾರಾಡುತ್ತಿರುವ ಮುಂಗುರುಳುಗಳಂತೆ, ಕಮಲ ಪುಷ್ಪಕ್ಕೆ ಬಂದ ತುಂಬಿಗಳು ಕಾಣುತಿದ್ದುವು. ಆ ಕೃತಕ ಸರೋವರದ ಸುತ್ತಲೂ ರೌಂಡ ಟೇಬಲ್‌ಗಳನ್ನಿಟ್ಟು, ಕುರ್ಚಿಗಳನ್ನಿಟ್ಟಿದ್ದರು. ದುಂಡು ಮೇಜಿನ ಮೇಲೆ ಪಾಶ್ಚಾತ ದೇಶದಲ್ಲಿ ತಯಾರಿಸಲ್ಪಟ್ಟ ರೇಷ್ಮೆಯ ಮನೋಹರವಾದ ಬಟ್ಟೆಯನ್ನು ಹಾಸಿ, ಅದರ ಮೇಲೆ ಅತ್ತರು, ಕಸ್ತೂರಿ, ಚಂದನ ಮೊದಲಾದ ಸುಗಂಧ ವಸ್ತುಗಳನ್ನಿಟ್ಟಿದ್ದರು ಉದ್ಯಾನದಲ್ಲಿರುವ ಪರಿಮಳ ಹೂಗಳ ಮೇಲಿನಿಂದ ಬೀಸಿ ಬರುತ್ತಿದ್ದ ಮಂದ ಮಾರುತವು ಬಹಳ ಆಹ್ಲಾದಕರವಾಗಿತ್ತು. ಗುಂಪು ಗುಂಪಾಗಿ ಬೆಳೆದ ಸುಂದರ ಬಣ್ಣದ ಗಿಡಗಳು ಹೂವಿನ ಪಾತ್ರೆಯಲ್ಲಿದ್ದು, ಮಂದಮಾರುತವು ಬೀಸುತ್ತಿದ್ದಾಗ ಅಚೀಚೆವಾಗುತ್ತಿರಲು, ಬಣ್ಣಬಣ್ಣದ ಕುರಿಗಳ ಹಿಂಡುಗಳು ಚಲಿಸುತಿದ್ದಂತೆ ತೋರುತ್ತಿತ್ತು. ಅತಿಥಿಗಳು ಆ ಸುಂದರ ಉಪವನವನ್ನು ನೋಡಿ ಆನಂದಿತರಾಗಿ, "ಈ ಹೂವಿನ ತೋಟವು ದೇವಲೋಕದಲ್ಲಿನ ಅಮರಾವತಿಯಲ್ಲಿರುವ ಇಂದ್ರನ ನಂದನವನಕ್ಕಿಂತಲೂ ಮೇಲ್ತರಗತಿಯದಾಗಿದೆ" ಎಂದರು. ಸ್ವಲ್ಪ ಸಮಯದಲ್ಲಿ ಎಲ್ಲರೂ ಸಭಾಸನದಲ್ಲಿ ಕುಳಿತುಕೊಳ್ಳಲು, ಅನೇಕ ತರದ ಸಿಹಿ ತಿಂಡಿಗಳೂ, ಇನ್ನಿತರ ತಿಂಡಿ-ತಿನಿಸುಗಳೂ, ಕಿತ್ತಳೆ, ಸೇಬು ಮೊದಲಾದ ಉತ್ತಮ ಜಾತಿಯ ಹಣ್ಣುಗಳೂ, ಅಲ್ಲದೆ ಕಾಫಿ, ಕೊಕೋ, ವೈನ್ ಮೊದಲಾದ ಪಾನೀಯಗಳನ್ನು ಸುಪ್ರಸಿದ್ಧವಾದ ಉಪಾಹಾರ ಗೃಹದಿಂದ ತರಿಸಿ ಲೋಬೋನು ಎಲ್ಲರಿಗೂ ಕೊಟ್ಟನು ಎಲ್ಲರೂ ಪಾನೀಯ ಕುಡಿಯುತ್ತಿರಲು, ಲೋಬೋನು ಮನೆಯೊಳಗೆ ಹೋಗಿ ವೈನ್‌ನಲ್ಲಿ ಮಾದಕ ಪದಾರ್ಥ ಬೆರೆಸಿ ಜಾರ್ಜಿಗೆ ತಂದು ಕೊಟ್ಟನು. ಅವರದನ್ನು ಕುಡಿದರು. ವಿಜ್ಞಾನಿಯು ಜಾರ್ಜಿಗೆ ವೈನ್‌ನಲ್ಲಿ ಮಾದಕ ಪದಾರ್ಥ ಬೆರೆಸಿಕೊಟ್ಟುದು ಯಾರಿಗೂ ತಿಳಿಯಲೇ ಇಲ್ಲ. ಉಪಾಹಾರ ಮುಗಿಯಲು, ಎಲ್ಲರಿಗೂ ಕರ್ಪೂರ ಮಿಶ್ರವಾದ ವೀಳ್ಯ

ಬೀಡಿಯನ್ನೂ ಸಿಗರೇಟನ್ನೂ ವಿಜ್ಞಾನಿಯು ಕೊಟ್ಟು, ಅನಂತರ ತನ್ನ ಬುದ್ಧಿಕೌಶಲ್ಯದಿಂದ ರಚಿಸಿ ಉದ್ಯಾನದಲ್ಲಿಟ್ಟ ವಿದ್ಯುತ್ ಬೊಂಬೆಯಿಂದ ನರ್ತನ ಮಾಡಿಸಿದನು. ಸಾಯಂಕಾಲ ಎಂಟುಗಂಟೆಗೆ ಎಲ್ಲರೂ ವಿಜ್ಞಾನಿಯನ್ನು ಬೀಳ್ಕೊಟ್ಟು ತಮ್ಮಮನೆಗೆ ತೆರಳಿದರು. ಲೋಬೋನು ತನ್ನ ಕಾರ್ಯವಾಯಿತೆಂದು ತಿಳಿದು ಜಾರ್ಜರನ್ನು ನೋಡಿ ಮುಗುಳ್ನಕ್ಕನಾದರೂ, ಅದರ ಅರ್ಥ ಯಾರಿಗೂ ಹೊಳೆಯಲಿಲ್ಲ. ಕರಮುಚಂಡನನ್ನು ಜಾನರು ತಮ್ಮ ಕಾರಿನಲ್ಲಿ ಕುಳ್ಳಿರಿಸಿ, ಅವನ ಕದ್ರಿಯಲ್ಲಿರುವ ಮನೆಯವರೆಗೆ ಹೋಗಿ ಅನಂತರ ತಮ್ಮ ಮನೆಗೆ ಬಂದರು. ಮನೆಗೆ ಬಂದ ನಂತರ ಪತ್ತೇದಾರಿಯು ತಮ್ಮನೊಡನೆ 'ನ್ಯೂ ಮೊಡೆಲ್ ಬೇಂಕಿ'ನಿಂದ ಕಳವಾದುದಕ್ಕೂ ಜಾರ್ಜರಿಂದ ಆಭರಣಗಳು ಮಾಯವಾದುದಕ್ಕೂ ಏನಾದರೂ ಸಂಬಂಧವಿರಬಹುದೇ? ಎಂದು ಕೇಳಿದನು. ಆ ಸಹೋದರರಿಬ್ಬರೂ ಈ ರೀತಿಯಲ್ಲಿ ಮಾತನಾಡಿದರು.

ರಾಮದಾಸಃ—ಅಣ್ಣನವರೆ! ಜಾರ್ಜರು ಸಿನೆಮಾಕ್ಕೆ ಹೋಗುವಾಗ 'ನ್ಯೂ ಮೊಡೆಲ್ ಬೇಂಕಿ'ನಿಂದ ಐದು ಸಾವಿರ ರೂಪಾಯಿ ಪಡೆದುಕೊಂಡು ಹೋಗಿದ್ದರಷ್ಟೆ! ಆ ವಿಷಯ ಚೋರನೋರ್ವನಿಗೆ ಗೊತ್ತಾಗಿ ಅವನವರನ್ನನುಸರಿಸಿ ಹೋಗಿರಬಹುದು; ಮತ್ತು ಸಿನೆಮಾದಲ್ಲಿ ಜಾರ್ಜರು ಏಕಾಗ್ರತೆಯಿಂದ ಚಿತ್ರವನ್ನು ನೋಡುತ್ತಿರುವಾಗ, ಅವರ ಹತ್ತಿರದಿಂದ ಹಣವನ್ನೂ ಸಿಲಿಯಳ ಶರೀರದಿಂದ ಒಡವೆಗಳನ್ನೂ ಅಪಹರಿಸಿಕೊಂಡು, ಮೆಲ್ಲನೆ ಅಲ್ಲಿಂದ ಜಾರಿರಬಹುದು.

ಕರಮುಚಂಡ—ನಿನ್ನ ಊಹೆಯು ನಿಜವಿರಬಹುದು; ಆದರೆ ಜಾರ್ಜರು ಬೇಂಕಿನಿಂದ ಹಣ ತೆಗೆದುಕೊಂಡಿರುವರೆಂದು ಚೋರನಿಗೆಂತು ತಿಳಿಯಿತು?

ರಾಮದಾಸಃ— ಆ ಚೋರನು ಜಾರ್ಜರು ಬೇಂಕಿನಿಂದ ಹಣ ಪಡೆದಿರುವುದನ್ನು ನೋಡಿರಬಹುದು; ಇಲ್ಲವಾದರೆ, ಬೇಂಕಿನ ನೌಕರರಾರಾದರೂ ಅವನಿಗೀ ಸಂಗತಿಯನ್ನು ತಿಳಿಸಿರಬಹುದು.

ಕರಮುಚಂಡಃ—ಹಾಗಾದರೆ ನಾವೀಗ ಬೇಂಕಿನ ನೌಕರರ ಮೇಲೆ ಕಣ್ಣಿಟ್ಟು ಅವರ ಚಲನವಲನಗಳನ್ನು ಪರೀಕ್ಷಿಸುತ್ತಿರಬೇಕಲ್ಲವೆ! ನನಗೀಗ ಅಗತ್ಯದ ಕೆಲಸವಿರುವದರಿಂದ ಬೇರೆ ಕಡೆಗೆ ಹೋಗಬೇಕಾಗಿದೆ. ನೀನು ಭಿಕ್ಷುಕನ ವೇಷದಿಂದ ಈ ರಾತ್ರಿ ಬೇಂಕಿನ ಸಮೀಪ ತಿರುಗಾಡುತ್ತಿರು; ಆದರೆ ಎಚ್ಚರಿಕೆಯಿರಲಿ! ದುಷ್ಟರಿಗೆಲ್ಲಿಯಾದರೂ ನಿನ್ನ ಗುರುತು ಸಿಕ್ಕಿದರೆ

ಕೋಪಗೊಂಡಿದ್ದಾನೆ. ಆದ್ದರಿಂದ ನೀವೆಲ್ಲಾ ಕಣ್ಣಾಗಿ ಮಾಡಿಕೊಂಡು ಎಚ್ಚರದಿಂದ ಇರಿ, ಎಂದನು.

---

# ಶಿಲಿಯಾಳ ಅಪಹರಣ

ವಾಚಕ ಮಹಾಶಯ! ಈಗ ಸಾಧಾರಣ ರಾತ್ರಿ ಹನ್ನೊಂದು ತಾಸಾಗ ಬಹುದು ಮಾರ್ಗದ ಬದಿಯಲ್ಲಿರುವ ಪೆಟ್ರೋಲ್ ಎಲೆಕ್ಟ್ರಿಕ್ ಲೈಟ್‌ಗಳಲ್ಲಿ ನಂದಿ ಸಲ್ಪಟ್ಟಿದ್ದರೂ ಕೆಲವು ಮಾತ್ರ ಅಲ್ಲಲ್ಲಿ ದೂರದೂರದಲ್ಲಿ ಪ್ರಕಾಶಿಸುತ್ತಿದ್ದವು. ಕಪ್ಪು ಪೋಷಾಕುಗಳನ್ನು ಧರಿಸಿಕೊಂಡು ಅಲ್ಲಿ ಬರುತ್ತಿರುವ ವ್ಯಕ್ತಿಗಳು ಆದಾರಾಗಿರಬಹುದು? ಮುಖವು ಸಂಪೂರ್ಣ ಮುಚ್ಚುತ್ತದೆಯೋ ಎಂದು ಕಾಣುವಷ್ಟು ದೊಡ್ಡ ಮುಂಡಾಸು ಕಟ್ಟಿದ್ದಾರಲ್ಲವೆ? ಅವರನ್ನು ನೋಡು ವಾಗ, ತಮ್ಮನ್ನು ಯಾರೂ ಗುರುತು ಹಚ್ಚಬಾರದೆಂದು ಈ ವೇಷ ಧರಿಸಿ ದ್ದಾರೆಂದು ವಿದಿತವಾಗುತ್ತದಷ್ಟೆ? ಇರಲಿ. ಈ ಎರಡು ವ್ಯಕ್ತಿಗಳು ಏನೋ ದುರುದ್ದೇಶದಿಂದ ನಡೆಯುತ್ತಾ ಇರುವರೆಂದು ಊಹಿಸಬಹುದು. ಸರಿ. ಅವರು ಜಾರ್ಜ್‌ರ ಕಂಪೌಂಡಿನ ಮೇಲೆ ಏರಿದರಲ್ಲವೆ? ಅಯ್ಯೋ! ಈ ಪಾ- ಪಾವಿಗಳು ಏನು ಅನರ್ಥ ಮಾಡುತ್ತಾರೆಯೋ? ನಾವು ಎಚ್ಚರಿಕೆಯಿಂದ ಅವರನ್ನು ಹಿಂಬಾಲಿಸುವಾ.

ಕಪ್ಪು ಡ್ರೆಸ್ ಧರಿಸಿದ ಆ ಎರಡು ಕ್ರೂರ ವ್ಯಕ್ತಿಗಳು ಕಂಪೌಂಡನ್ನು ಹಾರಿ ಒಳಗೆ ಅಂಗಳಕ್ಕೆ ಬಂದರು. ಒಬ್ಬನು ಅದಾವುದೋ ಒಂದು ಸೀಸೆಯ ಬಾಯಿ ತೆರೆದು ಕೈಯಲ್ಲಿ ಹಿಡಿದುಕೊಂಡನು. ಅಷ್ಟರಲ್ಲಿ ಜಾರ್ಜ್‌ರ ಸೇವಕನಾದ ವಿಕ್ಟರನಿಗೆ ಎಚ್ಚರವಾಗಲು, ಅವನು ಏಳಲು ಪ್ರಯತ್ನಿಸುತ್ತಿದ್ದುದನ್ನು ಕಂಡು ಮತ್ತೊಬ್ಬನು ಫಕ್ಕನೆ ಹೋಗಿ ಅವನ ಬಾಯಿಗೆ ವಸ್ತ್ರದ ಮುದ್ದೆಯನ್ನು ತುರುಕಿ ಕೈಯಲ್ಲಿರುವ ಹಗ್ಗದ ತುಂಡಿನಿಂದ ಕೈಗಳನ್ನು ಹಿಂದಕ್ಕೆ ಕಟ್ಟಿದನು ಅನಂತರ ಅವರಿಬ್ಬರೂ ಏನೂ ಶಬ್ದ ಮಾಡದೆ ಮೆಲ್ಲನೆ ಮಾಳಿ ಗೆಗೆ ಹೋದರು. ಟೀ ಪಾರ್ಟಿಯಲ್ಲಿ ಲೋಬೋನು ಅದಾವುದೋ ಮಾದಕ ಪದಾರ್ಥವನ್ನು ವೈನ್‌ನಲ್ಲಿ ಬೆರೆಸಿ ಕೊಟ್ಟುದು ವಾಚಕರಿಗೆ ನೆನಪಿರಬಹುದು, ಜಾರ್ಜ್‌ರೀಗ ಸುಖನಿದ್ರೆಯಲ್ಲಿದ್ದರು. ಆಗುಂತುಕ ವ್ಯಕ್ತಿಗಳಲ್ಲೊಬ್ಬನು ಕಿಟಿ ಕಿಯ ಬಾಗಿಲು ತೆರೆದು, ಸರಳುಗಳನ್ನು ಬಗ್ಗಿಸಿ ಒಳನುಗ್ಗಿದನು. ಅವನ

ಕೈಯಲ್ಲಿ ಬಾಯಿ ತೆರೆದ ದ್ರವ ತುಂಬಿದ್ದ ಸೀಸೆಯಿದ್ದಿತು. ಸಿಲಿಯಾಳು ಅದೊಂದು ಕೋಣೆಯಲ್ಲಿ ನಿದ್ರಿಸಿದ್ದಳು. ದಸ್ಯುವು ತನ್ನ ಕೈಯಲ್ಲಿದ್ದ ದ್ರವವನ್ನು ಅವಳ ಹಣೆಗೆ ಸುರಿಸಿ ಒರೆಸಿದನು. ಆನಂತರ ಒಳಗಿನಿಂದ ಬಾಗಿಲಿನ ಚಿಲಕವನ್ನು ತೆಗೆಯಲು, ಹೊರಗಿದ್ದವನು ಆ ಕೋಣೆಯೊಳಗೆ ಬಂದನು. ಅವರೊಳಗೆ ಸಿಲಿಯಾಳು ಸ್ಮೃತಿ ತಪ್ಪಿ ಬಿದ್ದಿದ್ದಳು. ಅನಂತರ ಆ ದುಷ್ಟರಿಬ್ಬರೂ ಸಿಲಿಯಾಳನ್ನು ಎತ್ತಿಕೊಂಡು ಹೊರ ಹೊರಟು ಆ ಕಾರಿರುಳಿನಲ್ಲಿ ಮಾಯವಾದರು!

ಸಾಯಂಕಾಲ ಏಳು ತಾಸಾಗಲು ರಾಮದಾಸನು ಬೇಗನೆ ಊಟ ತೀರಿಸಿ ಒಬ್ಬ ಭಿಕ್ಷುಕನ ವೇಷಧರಿಸಿ ಮನೆಯಿಂದ ಹೊರಹೊರಟನು. ಅವನ ಹರಕು ಮುರುಕು ಅಂಗಿಯನ್ನೂ ಟೊಪ್ಪಿಯನ್ನೂ ಮತ್ತವನ ಮಲಿನವಾದ ದೇಹವನ್ನೂ ಕಂಡು ಜನರು ಅವನನ್ನು ಗುರುತಿಸಲಾರದೆ ಇವನೊಬ್ಬ ಅನಾಥ ಭಿಕ್ಷುಕನೆಂದೇ ನೆನೆದರು. ಭಿಕ್ಷುಕನು ಬೀದಿಯಲ್ಲೆಲ್ಲ ಭಿಕ್ಷೆ ಬೇಡುತ್ತಾ ಹೋಗುತ್ತಿರಲು, ಕೆಲವರು ಅವನನ್ನು ಗಮನಿಸಿ ಅಟ್ಟುತ್ತಿದ್ದರು. ಕೆಲವು ಜನರು ಪಾಪ ಊಟಕ್ಕಿಲ್ಲದೆ ಬಡವನು ಭಿಕ್ಷೆ ಬೇಡುತ್ತಿರುವನೆಂದು ತಿಳಿದರೂ ತಮ್ಮಲ್ಲಿ ದಾನಮಾಡಲು ಏನೂ ಇಲ್ಲದುದಕ್ಕಾಗಿ ದುಃಖಿಸುತ್ತಿದ್ದರು. ಸಜ್ಜನರಾಗಿದ್ದು ಸ್ವಲ್ಪ ಅನುಕೂಲವಿದ್ದವರು ಅವನಿಗೆ ಸ್ವಲ್ಪ ಹಣ ಕೊಡುತ್ತಿದ್ದರು. ಮುಂಗೋಪಿಯೂ ಕ್ರೂರಿಯೂ ಜಿಪುಣನೂ ಆದವನೊಬ್ಬನ ಅಂಗಡಿಗೆ ಹೋಗಿ ಇವನು ಭಿಕ್ಷೆ ಕೇಳಲು, ಅವನು ಕಸಬರಿಕೆಯನ್ನು ತಂದು ಕೃತಕ ಭಿಕ್ಷುಕನಾದ ರಾಮದಾಸನಿಗೆ ಹೊಡೆಯಲು ಬರಲು, ದಮ್ಮಯ್ಯ ಬಿಟ್ಟುಬಿಡಿರಿ, ಎಂದು ಅಳುತ್ತಾ ರಾಮದಾಸನು ಪೆಟ್ಟನ್ನು ತಪ್ಪಿಸಿಕೊಂಡು ಹೋದನು. ಕಡೆಗೆ ಅವನು ನ್ಯೂ ಮೊಡೆಲ್ ಬೇಂಕಿನ ಸಮೀಪ ಬಂದನು. ಅಲ್ಲಿಯೇ ಎದುರುಗಡೆಯಲ್ಲಿರುವ ಬಾಳೆಹಣ್ಣಿನ ಅಂಗಡಿಯಲ್ಲಿ ಅವನು ಹಸಿವಾಗುತ್ತದೆ. ಕ್ಷುಧಾ ಪರಿಹಾರಕ್ಕಾಗಿ ಏನಾದರೂ ಕೊಡಿ ಎನ್ನಲು, ಆ ಅಂಗಡಿಯ ಯಜಮಾನನು ಮನ ಕರಗಿ ಕೆಲವು ಬಾಳೆಹಣ್ಣುಗಳನ್ನವನಿಗೆ ಕೊಟ್ಟನು. ಬಾಳೆಹಣ್ಣುಗಳನ್ನು ತಿಂದನಂತರ ಭಿಕ್ಷುಕನು ಆ ಅಂಗಡಿಯ ಸಣ್ಣ ಜಗುಲಿಯಲ್ಲಿರುವ ಮುರುಕು ಬೆಂಚೊಂದರಲ್ಲಿ ಮಲಗಿ ನಿದ್ರಿಸಿದನು. ಅವನು ಹತ್ತು ಹದಿನೈದು ನಿಮಿಷಗಳಲ್ಲಿ ಗೊರಕೆ ಹೊಡೆದು ನಿದ್ರಿಸುತ್ತಿರುವುದನ್ನು ಕಂಡ ಅಂಗಡಿಯವನು ಇವನು ಬಳಲಿ ಬೆಂಡಾಗಿರುವನು, ಪಾಪ ನಿದ್ರಿಸಲಿ, ಎಂದು

ಆಲೋಚಿಸಿದನು, ಆದರೆ ಭಿಕ್ಷುವೇಷಧಾರಿಯಾದ ರಾಮದಾಸನು ನಿದ್ರೆ ಬಂದವನಂತೆ ನಟಿಸಿದ್ದನಲ್ಲದೆ ನಿಜವಾಗಿ ಅವನಿಗೆ ನಿದ್ರೆ ಬಂದಿರಲಿಲ್ಲ. ಸಾಧಾರಣ ರಾತ್ರಿ ಹನ್ನೆರಡು ಗಂಟೆಗೆ ಒಂದು ಕಾರು ಬಹು ರಭಸವಾಗಿ ಆ ಅಂಗಡಿ ಯೆದುರು ಹೋಗುತ್ತಿದ್ದುದನ್ನು ಭಿಕ್ಷುಕವೇಷಧಾರಿಯಾದ ರಾಮದಾಸನು ಕಂಡನು.

೦ ೦ ೦ ೦

ಮಾರುದಿವಸ ಬೆಳಿಗ್ಗೆ ಜಾರರು ಎಚ್ಚರಗೊಂಡರು. ಅವರು ಕಡಿಮೆ ಯೆಂದರೆ ನಾಲ್ಕಾರು ಬಾರಿ ನಿದ್ರೆಯಿಂದ ಎಚ್ಚರಪಡುತ್ತಿದ್ದರೂ ಈ ದಿನ ಬೆಳಗಾಗುವ ಮೊದಲು ಒಂದು ಸಲವೂ ಎಚ್ಚರವಾಗದಿದ್ದುದರಿಂದ ಅವರು ಆಶ್ಚರ್ಯಪಟ್ಟರು ಪಕ್ಕದ ಮಂಚದಲ್ಲಿ ಸಿಲಿಯಾಳು ಇರಲಿಲ್ಲ ಬಾಗಿಲ ತೆರೆದಿರುವುದನ್ನು ಕಂಡು, ಸಿಲಿಯಾಳು ಬಾಗಿಲು ತೆರೆದು ಕೆಳಗೆ ಹೋಗಿರಬಹುದು ಎಂದು ತಿಳಿದು, ಮಾಳಿಗೆಯಿಂದ ಕೆಳಗಿಳಿದು ಬಂದರು. ಆಗ ಜಗುಲಿಯಲ್ಲಿ ಕೈಗಳನ್ನು ಬಂಧಿಸಲ್ಪಟ್ಟ ವಿಶ್ವರನನ್ನು ನೋಡಿ ಏನು ಗಲಾಟೆಯಾಯಿತು? ಎಂದು ಕೇಳಿ ಅವನ ಕೈಗಳನ್ನು ಬಿಚ್ಚಿದರು ಅನಂತರ ವಿಶ್ವರನು ದುಷ್ಟರು ತನ್ನ ಬಾಯಿಗೆ ತುರುಕಿದ ಬಟ್ಟೆಯನ್ನು ತೆಗೆದು ಕೊಳ್ಳುತ್ತಾ, ನಡೆದ ಸಂಗತಿಯನ್ನು ಹೇಳಿದನಲ್ಲದೆ ಸಿಲಿಯಾಳನ್ನು ದುರುಳರು ಕದ್ದೊಯ್ದರು ಎಂದು ಹೇಳಿದನು. ಪ್ರಾಣ ಪ್ರಿಯೆಯು ಅಪಹರಿಸಲ್ಪಟ್ಟ ಕೇಳಿದೊಡನೆ ಅವರು ಚಿಂತೆಗೊಳಗಾದರು. ವಿಪತ್ತಿನ ಮೇಲೆ ವಿಪತ್ತು ಬಂದರೆ ಮಾನವರು ಸಹಜವಾಗಿಯೇ ಜರ್ಜರಿತರಾಗುತ್ತಾರಲ್ಲವೆ! ಜಾರರ ಕಣ್ಣಿಗೆ ಅಂಧಃಕಾರ ಕವಿದಂತಾಯ್ತು. ಸರ್ವನಾಶ ಸರ್ವನಾಶ ಎಂದು ಅರಚುತ್ತಾ ತಲೆತಿರುಗಿ ಪ್ರಜ್ಞೆಯಿಲ್ಲದೆ ನೆಲಕ್ಕೆ ಬೀಳುತ್ತಿರಲು ವಿಶ್ವರನು ಕೆಳಗೆ ಬೀಳದಂತೆ ಅವರ ದೇಹವನ್ನು ಬೇಗಾವರೂ ಹಿಡಿದು, ಮೆಲ್ಲನೆ ಜಗುಲಿಯಲ್ಲಿ ಮಲಗಿಸಿದನು. ಜಾರರ ಆರ್ತಧ್ವನಿಯನ್ನು ಕೇಳಿ ಅಡಿಗೆಯವನೂ ಓಡಿ ಬಂದು ಅವರು ಸ್ಮೃತಿ ತಪ್ಪಿ ಬಿದ್ದಿರುವುದನ್ನು ಕಂಡು ಬೇಗನೆ ಹೋಗಿ ತಣ್ಣೀರು ತಂದು ಅವರ ಮುಖಕ್ಕೆ ಚಿಮುಕಿಸಿ ಬಟ್ಟೆಯಿಂದ ಗಾಳಿ ಹಾಕಿದನು. ಸ್ವಲ್ಪ ಸಮಯದಲ್ಲಿ ಜಾರರು ಸ್ವಲ್ಪ ಎಚ್ಚತ್ತು, ನಾನೀಗ ಎಲ್ಲಿರುವೆನು? ಎಂದು ಕೇಳಿದರು. ಆಗ ವಿಶ್ವರನು 'ಒಡೆಯರೆ! ತಾವು ತಮ್ಮ ಮನೆಯಲ್ಲಿಯೇ ಇರುವಿರಿ' ಎಂದನು. ನನ್ನ ಪ್ರಿಯ........ಪತ್ನಿ........ಸಿಲಿಯಾಳು........ಎಲ್ಲಿರುವಳು? ಎಂದವರು

ಮೆಲ್ಲನೆ ಪ್ರಶ್ನಿಸಲು, ಅಡಿಗೆಯವನು ಮೆಲ್ಲನೆ ನಡೆದ ಸಂಗತಿಯೇನು? ಎಂದು ವಿಶ್ವರನೊಡನೆ ಕೇಳಲವನು ನೀಚ ದಸ್ಯುಗಳು ನನ್ನನ್ನು ಬಂಧಿಸಿ ಒಡತಿಯನ್ನು ಅಪಹರಿಸಿಕೊಂಡು ಹೋದರು, ಎಂದು ಮೆಲ್ಲನೆ ಹೇಳಿದನು. ಜಾರ್ಜರ ಪ್ರಶ್ನೆಗೆ ಇಬ್ಬರೂ ಮೌನದಿಂದಿದ್ದರು ಅಷ್ಟರಲ್ಲಿ ಅವರಿಗೆ ಸಂಪೂರ್ಣ ಎಚ್ಚರಿಕೆಯಾಯಿತು. ಅನಂತರ ಜಾರ್ಜರು ಕೂಡಲೇ ಸುಪ್ರಸಿದ್ಧ ಪತ್ತೆದಾರಿಗಳಾದ ಕರಮಚಂದರಿಗೆ ಫೋನ ಮಾಡಿದರು. ಸ್ವಲ್ಪ ಸಮಯದಲ್ಲಿ ಪತ್ತೆದಾರಿಯು ಫೋನ್‌ನಲ್ಲಿ ವಿಷಯವೇನು? ಎಂದು ಕೇಳಿದಾಗ ಅವರು ನನ್ನ ಪ್ರಿಯಪತ್ನಿ ಸಿಲಿಯಳನ್ನು ನಿನ್ನೆ ರಾತ್ರಿ ಯಾರೋ ಕದ್ದೊಯ್ದಿದ್ದಾರೆ. ತಾವು ಈಗ ಅಗತ್ಯ ಇಲ್ಲಿಗೆ ಬರಬೇಕಾಗಿ ಪ್ರಾರ್ಥಿಸುತ್ತೇನೆ, ಎಂದು ಹೇಳಿದರು. ಕರಮಚಂದನು ಜಾರ್ಜರ ಮನೆಗೆ ಬರುವಾಗ! ಸಾಧಾರಣ ಬೆಳಗ್ಗೆ ಎಂಟು ಗಂಟೆಯಾಗಿರಬಹುದು.

ಕರಮಚಂದನು ಜಾರ್ಜರನ್ನು ಕಂಡು ಅನಂತರ ನಿಮ್ಮ ಪ್ರಿಯಪತ್ನಿಯ ಶಯನ ಮಂದಿರವನ್ನು ಒಂದು ಸಲ ಪರೀಕ್ಷಿಸಬೇಕಾಗಿದೆ; ಆತಂಕವಿಲ್ಲವಷ್ಟೆ? ಎಂದನು. ಛೆ! ಏನೂ ಆತಂಕವಿಲ್ಲ. ಹೇಗಾದರೂ ನಮ್ಮನ್ನು ಈ ವಿಪತ್ಸಾಗರದಿಂದ ಉದ್ಧರಿಸಿರಿ, ಎಂದು ಜಾರ್ಜರು ಹೇಳಿದರು. ಅನಂತರ ಅವರಿಬ್ಬರೂ ಸೋಪಾನಗಳನ್ನೇರಿ ಮಾಳಿಗೆಗೆ ಹೆಸೀದರು. ಶಯನ ಮಂದಿರದ ಬಾಗಿಲು ತೆರೆದೇ ಇದ್ದಿತು. ಪತ್ತೆದಾರಿಯು ಜಾರ್ಜರೊಡನೆ ಕೋಣೆಯೊಳಗೆ ಹೋಗಿ ಸುತ್ತಲೂ ತನ್ನ ಸೂಕ್ಷ್ಮದೃಷ್ಟಿಯನ್ನು ಬೀರಿದನು. ಆಗ ಅವರಿಗೆ ಕಿಟಕಿಯ ಸರಳುಗಳು ಬಗ್ಗಿರುವುದು ಕಂಡಿತು. ಆದರಿಂದಲಾಗಿ ಕರಮಚಂದನು ಈ ರೀತಿ ತಿಳಕೊಂಡನು:-ದಸ್ಯುಗಳಲ್ಲೊಬ್ಬನು ಕಿಟಕಿಯ ಸರಳುಗಳನ್ನು ಬಗ್ಗಿಸಿ ಒಳನುಗ್ಗಿ ಅನಂತರ ಒಳಗಿನಿಂದ ಬಾಗಿಲಿನ ಚಿಲಕವನ್ನು ತೆಗೆದು ಬಾಗಿಲು ತೆರೆದು ತನ್ನ ಸಂಗಡಿಗನೋರ್ವನನ್ನು ಒಳಗೆ ಬರಮಾಡಿಕೊಂಡಿರಬಹುದು; ಮತ್ತು ಬಾಗಿರುವ ಸರಳುಗಳೆಡೆಯಿಂದ ಒಳಗೆ ಬಂದಿದ್ದವನು ಸ್ಥೂಲವಾಗಿರದೆ ಕೃಶನಾಗಿದ್ದಿರಬಹುದು. ಅನಂತರ ಕರಮಚಂದನು ಆ ಕೋಣೆಯಲ್ಲಿ ಮತ್ತೂ ಪರೀಕ್ಷಿಸುತ್ತಿರಲು, ಅವರಲ್ಲಿ ಒಂದು ಸಣ್ಣ ಕಾಗದದ ತುಂಡು ಬಿದ್ದುಕೊಂಡಿರುವುದನ್ನು ಕಂಡನು. ಅದರಲ್ಲಿ 'ಚೋರ ಸಾರ್ವಭೌಮ' ಎಂದಿದ್ದಿತು. ಸಿಲಿಯಳ ಮಂಚದಲ್ಲಿ ಒಂದು ಸೀಸೆ ಅಡ್ಡ ಬಿದ್ದುಕೊಂಡಿರುವುದನ್ನು ಕಂಡು ಕರಮಚಂದನು ಆ ಸೀಸೆಯನ್ನು ಪಕ್ಕನೆ ತೆಗೆದು ಅದರ ಬಾಯಿಗೆ ಕಾಗದದ

ತುಂಡನ್ನು ಮುಚ್ಚಿ ತನ್ನ ಕೋಟಿನ ಒಳಕಿಸೆಯಲ್ಲಿಟ್ಟನು. ಅನಂತರವನು ನಿಕ್ಷರನೆಲ್ಲಿಯಾದರೂ ವಂಚಕರ ಒಳಸಂಚಿಗೆ ಸೇರಿರುವನೋ? ಎಂದು ಸಂಶಯಪಟ್ಟು ಅವನನ್ನು ಗದರಿಸಿದನು; ಆದರೆ ಏನೂ ಪ್ರಯೋಜನವಾಗದಿರಲು, ನಿಕ್ಷರನು ನಿರಪರಾಧಿಯೆಂದು ಮನಗಂಡು ಅವನನ್ನು ಬಿಟ್ಟು ಜಾರ್ರೊಡನೆ 'ನಾನು ಆದಷ್ಟು ಬೇಗನೆ ನಿಮ್ಮ ಪ್ರಿಯಪಕ್ಷಿಯನ್ನು ಪತ್ತೆ ಮಾಡಿ ಕರೆತರುವೆನು. ನೀವು ಧೈರ್ಯದಿಂದಿರಿ' ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಕರಮಚಂದನು ಅಲ್ಲಿಂದ ಯಶವಂತಸಿಂಹನಲ್ಲಿಗೆ ಹೋಗಿ ಜಾರ್ರ ಮನೆಯಲ್ಲಿ ನಿನ್ನೆ ನಡೆದ ಅನಾಹುತವನ್ನು ತಿಳಿಸಿದನು. ಯಶವಂತನು ಇದನ್ನು ಕೇಳಿ ಭಯಗೊಂಡು ಎಂತಹ ಭಯಂಕರರಪ್ಪಾ ಈ ಬದ್ಮಾಷರು! ಎಂದು ನುಡಿದನು. ಕರಮಚಂದನು ಅವನೊಡನೆ ಯಾವನೋ ನೀಚನೊಬ್ಬನು ಚೋರಸಾರ್ವಭೌಮನೆಂದು ಹೆಸರಿಟ್ಟುಕೊಂಡು ತನ್ನ ಕಿಂಕರರಿಂದ ಅತ್ಯಾಚಾರಗಳನ್ನು ಮಾಡಿಸುತ್ತಿದ್ದಾನೆ ಎಂದನು ಅನಂತರ ಪತ್ತೇದಾರಿಯು ಅಲ್ಲಿಂದ ತನ್ನ ಮನೆಗೆ ತೆರಳಿದನು. ರಾಮದಾಸನು ನಿನ್ನೆ ರಾತ್ರಿ "ನ್ಯೂ ಮೊಡೆಲ್ ಬೇಂಕಿ" ನ ಸಮೀಪಕ್ಕೆ ಛದ್ಮವೇಷದಿಂದ ಹೋದುದನ್ನು ವಾಚಕರು ಮರೆತಿರಲಿಕ್ಕಿಲ್ಲ. ಬೆಳಿಗ್ಗೆ ಕರಮಚಂದನು ಜಾರ್ರ ಮನೆಗೆ ಹೊರಟು ಹೋಗುವಾಗ ಅವನು ತನ್ನ ಮನೆಗೆ ತಲುಪಿರಲಿಲ್ಲ. ಅಣ್ಣನು ಜಾರ್ರ ಮನೆಗೆ ಹೋಗಿ ಸ್ವಲ್ಪಸಮಯ ಕಳೆದಾಗ ಅವನು ಮನೆಗೆ ಬಂದನು. ಸಹೋದರನು ಜಾರ್ರಲ್ಲಿಗೆ ಹೋಗಿರುವನೆಂದು ತಿಳಿದು, ಅವನು ಬಹಳ ಆತುರದಿಂದ ಅವನ ದಾರಿ ಕಾಯುತ್ತಾ ಕುಳಿತನು. ಕರಮಚಂದನು ಮನೆಗೆ ಬಂದು ತಮ್ಮನನ್ನು ಕಂಡು:—ತಮ್ಮಾ, ನಿನ್ನೆ ನಿನಗೆ ಬೇಂಕಿನ ಒಳಿ ಮಸ್ಕರ ಸುಳಿವೇನಾದರೂ ದೊರೆಕಿತೋ? ಎಂದು ಕೇಳಿದಾಗ ರಾಮದಾಸನು ಹೀಗೆಂದನು:—

ರಾಮದಾಸ:—ನಾನು ಭಿಕ್ಷುಕ ವೇಷದಿಂದ ಬೀದಿಗಳಲ್ಲಿ ತಿರುಗಾಡುತ್ತಾ ಕಡೆಗೆ ಬೇಂಕಿನೆದುರಿನಲ್ಲಿರುವ ಅಂಗಡಿಗೆ ಹೋದೆನು. ಅನಂತರ ಅಲ್ಲಿ ಮಲಗಿಕೊಂಡು ನಿದ್ರೆ ಬಂದವನಂತೆ ನಟಿಸಿದೆನು; ಆದರೆ ನನಗೆ ನಿದ್ರೆ ಬಂದಿರಲಿಲ್ಲ. ಸಾಧಾರಣ ರಾತ್ರಿ ಹನ್ನೊಂದೂವರೆ ತಾಸಿಗೆ ಕಾರೊಂದು ಬಹಳ ರಭಸವಾಗಿ ಎದುರಿನ ಮಾರ್ಗದಲ್ಲಿ ಹೊರಟು ಹೋಯಿತು.

ಕರಮಚಂದ:— ಕಾರಿನ ನಂಬ್ರವೆಷ್ಟು?

ರಾಮದಾಸ:— ಆ ಕಾರಿನ ಮೇಲೆ ನಂಬರ ಬೋರ್ಡ ಇರಲಿಲ್ಲ.

ಕರಮಚಂದ:— ಹಾಗಾದರೆ ಅದು ಆ ನೀಚರ ಕಾರೇ ಆಗಿರಬೇಕು. ನಂಬರಿನ ಹಲಗೆಯನ್ನಿಟ್ಟರೆ ಯಾರಾದರೂ ತಮ್ಮನ್ನು ಪತ್ತೆ ಹಚ್ಚಬಹುದೆಂದು ಆ ಚತುರ ಚೋರರು ಈ ರೀತಿ ನಂಬರಬೋರ್ಡನ್ನು ಇಡದೆ ಕಾರನ್ನು ರಭಸದಿಂದೋಡಿಸಿರಬೇಕು. ಇರಲಿ. ಆ ಕಾರು ಯಾವ ತರದ್ದು?

ರಾಮದಾಸ:— ಬಿಳಿ ಬಣ್ಣದ ಫೋರ್ಡ ಕಾರ್.

ಕರಮಚಂದ:— ಆ ಕಾರು ಯಾವ ದಿಕ್ಕಿಗೆ ಹೋಯಿತು, ಎಂಬುದನ್ನು ನೀನು ಊಹಿಸಿದೆಯಾ? ಅದರಲ್ಲಿ ಜನರೆಷ್ಟಿದ್ದರು?

ರಾಮದಾಸ:— ಆ ಕಾರು ಬೇಂಕಿನಿಂದ ಸ್ವಲ್ಪ ಮುಂದೆ ಹೋಗಿ ಈಶಾನ್ಯ ದಿಕ್ಕಿಗೆ ಹೊರಳಿ ಅಲ್ಲಿಂದ ತಿರುಗುವ ಮಾರ್ಗದಲ್ಲಿ ಹೋಯಿತು. ಕಾರಿನಲ್ಲಿ ಎಷ್ಟು ಜನರಿದ್ದರೆಂಬುದು ಅದು ರಭಸವಾಗಿ ಹೋಗುತ್ತಿದ್ದುದರಿಂದ ತಿಳಿಯಲಿಲ್ಲ. ಅದಿರಲಿ. ನೀವು ಜಾರರಲ್ಲಿಗೆ ಹೋದುದೇಕೆ?

ಆಗ ಕರಮಚಂದ:— ನಿನ್ನೆ ರಾತ್ರಿ ಸಿಲಿಯಳು ದುರುಳರಿಂದ ಅಪಹರಿಸಲ್ಪಟ್ಟದ್ದನ್ನೂ ಮತ್ತು ಆ ಕೋಣೆಯಲ್ಲಿ ಪರೀಕ್ಷಿಸುತ್ತಿದ್ದಾಗ ಒಂದು ಕಾಗದ ತುಂಡು ಸಿಕ್ಕಿತೆಂದೂ ಅದರಲ್ಲಿ "ಚೋರ ಸಾರ್ವಭೌಮ" ಎಂದಿದ್ದಿತೆಂದೂ ಹೇಳಿದನಲ್ಲದೆ ಆ ದುಷ್ಟರು ಆ ರಮಣಿಯನ್ನು ಈ ದ್ರಾವಕದಿಂದ ಸ್ಮೃತಿ ತಪ್ಪಿಸಿ ಕದ್ದೊಯ್ದಿರುವರೆಂದು ಹೇಳಿ ತನ್ನ ಕಿಸೆಯಿಂದ ಜಾರರ ಶಯನಮಂದಿರಲ್ಲಿ ಸಿಕ್ಕಿದ ಸೀಸೆಯನ್ನು ತೆಗೆದು ತೋರಿಸಿದನು.

---

# ರಾತ್ರಿಯಲ್ಲಿ

ಕರಮಚಂದನು, ಈ ದಿನ ರಾತ್ರಿ ಊಟಮಾಡಿದೊಡನೆ ರಾಮದಾಸನನ್ನು ಕರೆದು, ನೀನು ಈ ದಿನ 'ನ್ಯೂಮೋಡೆಲ್‌ಬೇಂಕ್'ನಿಂದ ಈಶಾನ್ಯ ದಿಕ್ಕಿನಲ್ಲಿರುವ ವಿಶ್ರಾಂತಿಭವನಕ್ಕೆ ಹೋಗಬೇಕಾಗಿದೆ. ಅಲ್ಲಿ ಹೆಚ್ಚಾಗಿ ದಸ್ಯು ಜನರೇ ಇರುತ್ತಾರೆಂದು ನಮ್ಮ ಮಿತ್ರನಾದ ಯಶವಂತಸಿಂಹನವರು ಹೇಳಿದರು. ನಾನು ವೈರಾಗಿಯ ವೇಷವನ್ನು ಧರಿಸಿಕೊಂಡು ಬೇರೆ ಕಡೆಗೆ

ಹೋಗುತ್ತೇನೆ ಎಂದನು. ಪತ್ತೆದಾರಿ ಸಹೋದರರು ಮಾತನಾಡುತ್ತಿದ್ದಾಗ ಸೇವಕನಾದ ಲಿಂಗಪ್ಪನು ಬಂದು ಒಂದು ಪತ್ರವನ್ನು ಕರಮಚಂದನ ಕೈಯಲ್ಲಿ ಕೊಟ್ಟನು. ಆ ಪತ್ರದಲ್ಲಿ ಈ ರೀತಿಯಿತ್ತು:—

ಕರಮಚಂದ! ನಿನ್ನ ಬುದ್ಧಿ ಸಾಮರ್ಥ್ಯವು ಪ್ರಶಂಸಿಸತಕ್ಕುದೇ! ಆದರೆ ನೀನು ನನ್ನ ಎದುರು ನಿಂತು ಬಾಳಲಾರೆ. ನಿನ್ನ ಕುಶಾಗ್ರ ಬುದ್ಧಿಯ ಪ್ರಯೋಜನವು ನನ್ನ ವಿಚಾರದಲ್ಲಿ ಮಾತ್ರ ನಿಶ್ಚಯವಾಗಿಯೂ ಫಲಿಸಲಿಕ್ಕಿಲ್ಲ. ನಿನಗಿನ್ನೂ ಪ್ರಪಂಚದಲ್ಲಿ ಮರ್ಯಾದೆಯಿಂದ ಜೀವನವನ್ನು ನಡೆಸಬೇಕೆಂದು ಇಚ್ಛೆಯಿದ್ದರೆ, ನನ್ನ ಗೋಜಿಗೆ ಬರಬೇಡ. ನನ್ನ ಗೋಜಿಗೆ ಬಂದೆಯಾದರೆ ನಿನ್ನನ್ನು ಯಮನ ಅತಿಥಿಯಾಗಿ ಕಳುಹಿಸುವೆನು. ಅನಂತರ ನಿನ್ನ ಪತ್ತೆದಾರಿ ಕೆಲಸವನ್ನು ನೀನು ಪರಲೋಕದಲ್ಲಿ ಮಾಡಬೇಕಾದೀತು ಆದ್ದರಿಂದ ದುಡುಕಬೇಡ!! ಚೆನ್ನಾಗಿ ವಿಚಾರಿಸು! ಎಚ್ಚರಿಕೆ!!! 'ಚೋರ ಸಾರ್ವಭೌಮ'ನೆಂದರೆ ಇಡೀ ನಗರವಾಸಿಗಳೇ ಗಡಗಡ ಎಂದು ನಡುಗುತ್ತಿರುವಾಗ ನಿನ್ನಂಥವರು ನನಗೆ ಸರಿಸಾಟಿಯೆ! ನನ್ನ ಗೋಜಿಗೆ ಬಂದರೆ ಜೋಕೆ!!! ಇನ್ನೂ ನೀನು ಹಟಮಾರಿತನವನ್ನು ಬಿಡದೆ ಮುಂದುವರಿಸಿ ಬಂದೆಯಾದರೆ ಈ ಚೋರ ಸಾರ್ವಭೌಮನು ನಿನ್ನನ್ನು ಎಲ್ಲಿ ಹೋದರೂ ಬಿಡದೆ, 'ಬೆನ್ನಹತ್ತಿದ ಬೇತಾಳ'ನಂತೆ ಅಟ್ಟಿಕೊಂಡು ಬರುವನು.

ಇತಿ ನಿನ್ನ ಪರಿಚಿತ

ಸರ್ವ ತಂತ್ರ ಸ್ವತಂತ್ರನಾದ

ಚೋರ ಸಾರ್ವಭೌಮ.

ಈ ಪತ್ರವನ್ನು ನಿನಗೆ ಯಾರು ಎಲ್ಲಿ ಕೊಟ್ಟರು? ಎಂದು ಕರಮಚಂದನು ಲಿಂಗಪ್ಪನೊಡನೆ ಕೇಳಿದಾಗ, ಅವನು ಒಬ್ಬ ಕೃಶನಾದ ಮತ್ತು ಕಪ್ಪಾದ ಪುರುಷನೋರ್ವನು ಬೀದಿಯಲ್ಲಿ ಸೈಕಲ್ಲಿನಲ್ಲಿ ಹೋಗುತ್ತಿದ್ದನು. ನನ್ನನ್ನು ಕಂಡು ಅವನು ಈ ಪತ್ರವನ್ನು ನನ್ನೊಡನೆ ಕೊಟ್ಟು, ಇದನ್ನು ಕರಮಚಂದರಿಗೆ ಕೊಡು. ನನಗೆ ಅವಸರದ ಕೆಲಸವಿದೆಯೆಂದು ಹೇಳಿ ಹೋದನು, ಎಂದಂದನು. ಕರಮಚಂದನು ಆ ಪತ್ರವನ್ನು ರಾಮದಾಸನಿಗೆ ತೋರಿಸಿದನು. ರಾಮದಾಸನು ಸಹೋದರನೊಡನೆ ಈ ಚೋರ ಸಾರ್ವಭೌಮನೆಂಬವನು ಜಾಣಾಕ್ಷನೇ ಆಗಿರಬೇಕು, ಎಂದನು. ಅನಂತರ ಆ ಇಬ್ಬರೂ ತಮ್ಮ ತಮ್ಮ ಕೋಣೆಗೆ ಭಸ್ಮಲೇಪ ಧರಿಸಲು ಹೋದರು.

ರಾಮದಾಸನು ಅತೀ ಸುಂದರಿಯಾದ ಹಿಂದೂ ಯುವತಿಯಂತೆ ಉತ್ತಮವಾದ ರೇಶ್ಮೆ ಸೀರೆಯನ್ನುಟ್ಟನು. ಜಡೆ ಹೆಣೆದು ತಲೆಯಲ್ಲಿ ಮಲ್ಲಿಗೆ ಹೂವನ್ನು ಮುಡಿದನು. ಮುಖಕ್ಕೆ ಪರಿಮಳ ಮಿಶ್ರಿತವಾದ ಪೌಡರ್‌ನ್ನು ಹಚ್ಚಿ, ಹಣೆಗೆ ತಿಲಕವನ್ನಿಟ್ಟು ಕಿವಿಗೆ ಲೋಲಕಗಳನ್ನು ತೊಟ್ಟು, ಕುತ್ತಿಗೆಗೊಂದು ಹಾರವನ್ನು ಹಾಕಿಕೊಂಡನು. ಕೈಯಲ್ಲಿ ಒಂದು ಚೀಗವನ್ನು ಹಿಡಿದುಕೊಂಡು ತನ್ನ ಕೋಣೆಯಿಂದ ಹೊರಬಂದು ಜಗುಲಿಯಲ್ಲಿ ನಿಂತುಕೊಂಡನು. ಕರಮುಚಂದನು ಬೈರಾಗಿಯಂತೆ ವೇಷ ಧರಿಸಿ ಕೋಣೆಯಿಂದ ಹೊರಬಂದು ನೋಡುವಾಗ ಯಾರೋ ತರುಣಿಯೋರ್ವಳು ಜಗುಲಿಯಲ್ಲಿ ನಿಂತುಕೊಂಡಿರುವುದನ್ನು ಕಂಡನು. ಛದ್ಮವೇಷ ಧರಿಸಿದ ರಾಮದಾಸನನ್ನು ಅವನು ನಿಜವಾಗಿಯೇ ತರುಣಿಯೆಂದು ತಿಳಿದು, ಅಮ್ಮಾ ಈ ರಾತ್ರಿ ವೇಳೆಯಲ್ಲಿ ಇಲ್ಲಿಗೆ ಬರಲು ಕಾರಣವೇನು? ಎಂದು ಕೇಳಿದನು. ಆಗ ರಾಮದಾಸನು ಗಹಗಹಿಸಿ ನಕ್ಕನು. ಆಗ ಕರಮುಚಂದನಿಗೆ ಅಚ್ಚರಿಯುಂಟಾಯಿತು. ರಾಮದಾಸನು ಇಷ್ಟು ಬೇಗನೆ ವೇಷ ಬದಲಾಯಿಸಿ ಬಂದಿರಬಹುದೆಂದವನು ತಿಳಿಯಲಿಲ್ಲ. ಅವನು ತಮ್ಮನ ಛದ್ಮವೇಷವನ್ನು ನಾಜೂಕಾಗಿ ಧರಿಸುವ ಚತುರತೆಗೆ ಸಂತೋಷಪಟ್ಟನು. ಅವರಿಬ್ಬರೂ ಮನೆಯಿಂದ ಹೊರಟರು.

ಯುವತಿಯ ವೇಷವನ್ನು ಧರಿಸಿದ ರಾಮದಾಸನು ಮೆಲ್ಲಮೆಲ್ಲನೆ ನಡೆಯುತ್ತಾ ನ್ಯೂಮೋಡೆಲ್ ಬೇಂಕಿನ ಈಶಾನ್ಯ ದಿಕ್ಕಿನಲ್ಲಿರುವ ವಿಶ್ರಾಂತಿ ಭವನದ ಕಡೆಗೆ ಸಾಗಿದನು. ಅವನು ವಿಶ್ರಾಂತಿ ಭವನದ ಹತ್ತಿರ ತಲುಪುವಾಗ ಸಾಧಾರಣ ರಾತ್ರಿ ಎಂಟೂವರೆ ತಾಸಾಗಿರಬಹುದು. ಅವನು ಮೇನೇಜರ್ ಮಾಧವನ ಆಫೀಸ್ ಕೋಣೆಗೆ ಬಂದು, ಮೃದು ಸ್ವರದಲ್ಲಿ 'ನನಗೆ ಈವತ್ತಿಗೊಂದು ರೂಮ್ ಬಾಡಿಗೆಗೆ ಬೇಕಾಗಿದೆಯೆ'ಂದನು. ಅಪ್ಸರೆಯನ್ನು ಸೌಂದರ್ಯದಲ್ಲಿ ಧಿಃಕರಿಸುವಂತಹ ನವಯುವತಿಯು ಏಕಾಕಿಯಾಗಿ ರಾತ್ರಿ ಬಂದು ರೂಂ ಬಾಡಿಗೆಗೆ ಕೇಳುವದೆಂದರೇನು? ಇವಳು ಮಾನವಿಯಾಗಿರಲಿಕ್ಕಿಲ್ಲ ಬಹುಶಃ ಅಪ್ಸರೆಯಾಗಿರಬಹುದು; ಅಥವಾ ಸೌಂದರ್ಯವೇ ಮೂರ್ತಿಮತ್ತಾಗಿ ಬಂದ ಆ ರತಿಯೇ ಇವಳಾಗಿರಲೂಬಹುದು. ಇಲ್ಲವಾದರೆ ಇದು ಪಿಶಾಚಿಗಳ ಕಾಟವಾಗಿರಬೇಕೆಂದು ತಿಳಿದು ಸುಕುಮಾರಿಯಾದ ಆ ನವ ತರುಣೀಮಣಿಯನ್ನೇ ಎವೆಯಿಕ್ಕದೆ ನೋಡಿ

ಆವಳ ರೂಪಾತಿಶಯುವನ್ನು ಕಂಡು ಆಶ್ಚರ್ಯಚಕಿತನಾದನು. ಆಗ ತರುಣಿಯು ತನ್ನ ಕಣ್ಣಿನ ಓರೆ ನೋಟವನ್ನು ಆಚೀಚೆ ಬೀರಲು, ಆವಳ ವರ್ತನೆಯನ್ನು ಕಂಡು ಮಾಧವನು ಅಚ್ಚರಿಗೊಂಡನು. ರೂಂ ಬೇಕೆಂದು ಕೇಳಿದ ತರುಣಿಗೆ ಉತ್ತರವನ್ನೇ ಈಯಲಿಲ್ಲ. ಆಗ ಆ ಸ್ತ್ರೀ ವೇಷಧಾರಿ ಯಾದ ರಾಮದಾಸನು ಪುನಃ ನನಗೆ ರೂಂ ಬೇಕಿತ್ತು, ಎಂದು ಕೇಳಿದನು. ಆಗ ಮಾಧವನು ಎಚ್ಚತ್ತು ಸೇವಕನನ್ನು ಕರೆದು, ಈಕೆಗೆ ಹತ್ತನೆಯ ನಂಬರದ ಕೋಣೆಯನ್ನು ಕೊಡು ಎಂದು ಹೇಳಿದನು. ರಮಣಿಯು ಬಾಡಿಗೆಯೆಷ್ಟೆಂದು ಕೇಳಿದಳು. ಅವನು ಎರಡು ರೂಪಾಯಿ ಎಂದಾಗ ಅಷ್ಟನ್ನು ಕೊಟ್ಟು ರಸೀದಿ ಪಡೆದುಕೊಂಡು, ಸೇವಕನು ತೋರಿಸಿದ ಹತ್ತನೆಯ ನಂಬರದ ಕೋಣೆಗೆ ಹೋದಳು.

ವಾಚಕ ಮಹಾಶಯರೆ! ತರುಣಿಯು ಮಾಧವನ ಹತ್ತಿರ ಮಾತ ನಾಡುತ್ತಿದ್ದಾಗ ಆ ಕೋಣೆಯಲ್ಲಿ ಬೇರೆ ಇಬ್ಬರು ಕುಳಿತುಕೊಂಡಿದ್ದರು. ಸ್ತ್ರೀ ವೇಷಧಾರಿಯಾದ ರಾಮದಾಸನು ಅವರನ್ನು ನೋಡಿದ್ದರೂ ಅವನು ಆ ಕಡೆಗೆ ನೋಡಲಿಲ್ಲವೆಂಬಂತೆ ನಟಿಸಿದ್ದನು. ಅವರು ಈ ತರುಣಿಯ ಸೌಂದರ್ಯವನ್ನು ಕಂಡು ಮೋಹಪಟ್ಟು ಅವಳನ್ನೇ ದಿಟ್ಟಿಸಿ ನೋಡು ತ್ತಿದ್ದರು. ಒಬ್ಬನು ಕೃಶನಾಗಿದ್ದು ಸ್ವಲ್ಪ ಕಪ್ಪಾಗಿದ್ದನು. ಅವನೇ ಜೊಸೆಫ್‌ನಾಗಿದ್ದನು. ಮತ್ತೊಬ್ಬನು. ದಾಂಢಿಗನು ಲೊಬೋನ ಬಲಗೈ ಬಂಟನಾದ ಪಿಟ್ಟನೇ ಆಗಿದ್ದನು ಅವರು ಯಾರೆಂಬುದು ರಾಮದಾಸನಿಗೆ ತಿಳಿಯಲಿಲ್ಲ.

ಯುವತಿಯು ತನ್ನ ಕೋಣೆಯಲ್ಲಿ ಮಲಗಿಕೊಂಡಳು. ಸಾಧಾರಣ ಎಲ್ಲರೂ ನಿದ್ರಿಸಿದ ನಂತರ ರಾತ್ರಿ ಹತ್ತುಗಂಟೆಗೆ ಯಾರೋ ಹೊರಜಗುಲಿ ಯಲ್ಲಿ ಮಾತನಾಡುತ್ತಿದ್ದುದು ರಾಮದಾಸನಿಗೆ ಕೇಳಿಸಿತು. ಅವನಿಗಾಗ ನಿದ್ರೆ ಬರಲಿಲ್ಲ. ಸ್ತ್ರೀ ವೇಷಧಾರಿಯಾದ ತನ್ನನ್ನು ಬದ್‌ಮಾಷರು ಮೋಹಿಸಿ, ಈಗ ಬಾಗಿಲನ್ನೊಡೆದು ಕೋಣೆಯೊಳಗೆ ಬರುವರೆಂದು ಆತ ತಿಳಿದನು. ಆ ಆತತಾಯಿಗಳಿಗೆ ಮಂಕುಬೂದಿ ಹಚ್ಚಬೇಕೆಂದು ಬಗೆದು ಆತನು ತನ್ನ ಸ್ತ್ರೀ ವೇಷವನ್ನು ಬಿಚ್ಚಿ ತೆಗೆದು, ಬೇಗ್‌ನಲ್ಲಿದ್ದ ತಾನು ಮನೆಯಿಂದ ಬರುವಾಗ ಇಟ್ಟಿದ್ದ ಮುಸಲ್ಮಾನ ವೇಷಕ್ಕೆ ಬೇಕಾದ ಉಡು ಪನ್ನು ತೆಗೆದು, ತಲೆಗೊಂದು ತುರುಕರ ಟೊಪ್ಪಿಗೆಯನ್ನು ತೊಟ್ಟುಕೊಂಡು,

ಮುಸಲ್ಮಾನರು ಉಡುವ 'ಲುಂಗಿ'ಯನ್ನುಟ್ಟು ಒಂದು ಕೋಟನ್ನು ಹಾಕಿಕೊಂಡು ಕೃತಕ ಮೀಸೆಯನ್ನು ಧರಿಸಿಕೊಂಡು ಮಂಚದಲ್ಲಿ ನಿದ್ರೆ ಬಂದವನಂತೆ ಮಲಗಿಕೊಂಡನು. ಅವನು ವೇಷ ಬದಲಾಯಿಸುತ್ತಿದ್ದುದಾಗ ಸ್ವಲ್ಪ ಸಹ ಶಬ್ದವನ್ನುಂಟುಮಾಡಲಿಲ್ಲ. ಹೊರಜಗಲಿಯಲ್ಲಿದ್ದ ನೀಚರು ತರುಣಿಯು ನಿದ್ರಿಸಿರಬಹುದೆಂದು ತಿಳಿದು, ಪರಾಂಬರಿಸಿ ನೋಡಿ ಮೆಲ್ಲನೆ ಕಿಟಕಿಯ ಬಾಗಿಲನ್ನು ದೂಡಿದರು. ಅನಂತರ ರಂಧ್ರವನ್ನು ಸ್ವಲ್ಪ ದೊಡ್ಡದು ಮಾಡಿ ಕಿಟಕಿಯ ಬಾಗಿಲಿನ ಹತ್ತಿರ ಹಿಡಿದು ನೋಡಿದಾಗ ಒಳಗಿನ ದೃಶ್ಯವನ್ನು ಕಂಡು ಅವರು ಭ್ರಮೆಗೊಂಡರು. ಆಗ ಇಲ್ಲಿಗೆ ಬಂದವಳು ಅಪ್ಸರೆಯಂತಹ ತರುಣಿ; ಆದರೆ ಈಗ ನೋಡುವಾಗ ಮಂಚದಲ್ಲಿ ಮುಸಲ್ಮಾನ ಪುರುಷನು ಕಾಣಿಸುತ್ತಾನಲ್ಲವೆ! ಇದು ಭೂತ ಪಿಶಾಚಿಗಳ ಆಟವೇ ಆಗಿರಬೇಕು. ಇನ್ನು ಇಲ್ಲಿ ನಿಂತರೆ, ಈ ಭೂತಕ್ಕೆ ಎಚ್ಚರಿಕೆಯಾದರೆ ನಮ್ಮ ಅವಸಾನವಾದೀತು, ಎಂದು ಬೆದರಿ, ಬೇಗನೆ ಅಲ್ಲಿಂದ ಕಾಲ್ದೆಗೆದರು.

ದಸ್ಯುಗಳು ಹೊರಟು ಹೋದರು ಎಂಬುದು ನಿಶ್ಚಯವಾದ ನಂತರ ರಾಮದಾಸನೆದ್ದು ಮೆಲ್ಲನೆ ಬಾಗಿಲು ತೆರೆದು, ಯಾರಾದರೂ ತನ್ನನ್ನು ನೋಡುತ್ತಿದ್ದಾರೆಯೋ ಎಂದು ಮೆಲ್ಲನೆ ಸುತ್ತಲೂ ಈಕ್ಷಿಸಿದನು. ಯಾರೂ ತನ್ನನ್ನು ನೋಡುತ್ತಿಲ್ಲವೆಂಬುದು ಖಚಿತವಾದ ನಂತರ ಅವನು ತನ್ನ ಕೋಣೆಯ ಬಾಗಿಲಿಗೆ ಬೀಗವನ್ನು ಹಾಕಿ ಮೆಲ್ಲನೆ ಆ ಜಗುಲಿಯಲ್ಲಿ ಮೂಡಣ ದಿಕ್ಕಿಗೆ ಹೋದಾಗ ಅಲ್ಲಿ ಒಂದು ಕೋಣೆ ಕಾಣಿಸಿತು. ಅವನು ತನ್ನ ಟೋರ್ಚ್‌ಲೈಟನ್ನು ಬೆಳಗಿಸಿ ಆ ಕೋಣೆಯಲ್ಲಿ ಏನಿರುವುದೆಂದು ಅರಸಿದನು. ಅಲ್ಲೊಂದು ಮಂಚವಿದ್ದಿತು. ರಾಮದಾಸನು ಸುತ್ತಲೂ ತನ್ನ ಸೂಕ್ಷ್ಮ ದೃಷ್ಟಿಯನ್ನು ಪಸರಿಸಿ ನೋಡಿದನು. ಅನಂತರವನು ಮಂಚದಡಿಯಲ್ಲಿ ಏನಿರುವದೆಂದು ಕುತೂಹಲದಿಂದ ನೋಡಿದನು. ಅಲ್ಲಿ ಅವನಿಗೇನೂ ಕಾಣಿಸಲಿಲ್ಲ. ಅನಂತರವನು ಮಂಚವನ್ನಲ್ಲಾಡಿಸಿ ಸ್ವಲ್ಪ ಮುಂದಕ್ಕೆ ದೂಡಿದನು. ಆಗ ಮೊದಲು ಮಂಚದ ಕಾಲಿನಲ್ಲಿ ಒಂದು ಸಣ್ಣ ಕೊಂಡಿ ಇರುವುದು ಕಾಣಿಸಿತು. ಅವನು ಕೊಂಡಿಯನ್ನೆತ್ತಿದಾಗ ಒಬ್ಬ ಮನುಷ್ಯನು ಕೆಳಗಿಳಿದು ಹೋಗುವಷ್ಟು ದೊಡ್ಡ ದ್ವಾರ ಕಾಣಿಸಿತು. ಅವನಾ ದ್ವಾರದಲ್ಲಿ ಕೆಳಗೆ ನೋಡಲು ಸೋಪಾನ ಪಂಕ್ತಿಗಳನ್ನು ಕಂಡನು.

ಆವನು ಇದರಲ್ಲೇನೋ ರಹಸ್ಯವಿದೆ ಎಂದು ತಿಳಿದನು, ಆದರೆ ನೆಲದಡಿಯಲ್ಲಿನ ಮಾಳಿಗೆಗೆ ಹೋಗುವ ಸೋಪಾನಗಳಲ್ಲಿ ಇಳಿದು ಹೋಗಲು, ರಾಮದಾಸನು ಆಲೋಚಿಸುತ್ತಿದ್ದಾಗ ನೆಲದಡಿಯಿಂದ ಏನೋ ಶಬ್ದವಾಗಲು, ದುರುಳರಾರೋ ನೆಲಮಾಳಿಗೆಯಲ್ಲಿ ಇರಬಹುದು, ಎಂದು ಗ್ರಹಿಸಿ. ರಾಮದಾಸನು ಆ ಕೊಂಡಿಯನ್ನು ಮುಂಚಿನ ಸ್ಥಾನಕ್ಕೆ ತಿರುಗಿಸಿ ಮಂಚವನ್ನು ಮೊದಲಿದ್ದಲ್ಲಿ ಇಟ್ಟು ತನ್ನ ಕೋಣೆಗೆ ಹೋಗಿ ಮಲಗಿಕೊಂಡನು.

ಪ್ರಾತಃಕಾಲ ಎಲ್ಲರೂ ಏಳುವವಕ್ಕಿಂತ ಮೊದಲು ಎದ್ದು ತನ್ನ ಚೀಗವನ್ನು ಹಿಡಿದುಕೊಂಡು ಹೊರಟು ಹೋದನು. ಬೆಳಗಾದ ನಂತರ ಆತತಾಯಿಗಳು ರಾಮದಾಸನಿದ್ದ ಕೋಣೆಯ ಹತ್ತಿರ ಬಂದು ಮೆಲ್ಲನೆ ಹೆದರುತ್ತಾ ನೋಡಲು, ಬಾಗಿಲು ತೆರೆದಿರುವುದನ್ನು ಕಂಡು ಭೂತವು ಪರಾರಿಯಾಯಿತೆಂದು ತಿಳಿದು ಹಿಗ್ಗಿದರು. ಕೂಡಲೆ ಅವರು ಮಾಧವನ ಹತ್ತಿರ ಹೋಗಿ, ನಿನ್ನೆ ರಾತ್ರಿ ಬಂದವಳು ಮನುಷ್ಯಳಲ್ಲ, ಡಾಕಿನಿ ಎಂದರು. ಆಗ ಮಾಧವನು ಆವರ ಮಾತನ್ನು ಕೇಳಿ ಆಶ್ಚರ್ಯಪಟ್ಟನು. ಆಗವರು ನಾವು ರಾತ್ರಿ ಅವಳ ಕೋಣೆಯ ಕಿಟಕಿಯ ಬಾಗಿಲನ್ನು ತೆರೆದು, ಲಾಂದ್ರ ಹಿಡಿದು ನೋಡಿದಾಗ ಮಂಚದಲ್ಲಿ ಸುರಸುಂದರಿಯ ಬದಲು ಕ್ರೂರ ಮುಸಲ್ಮಾನನಿದ್ದನು. ಇಲ್ಲಿಗೆ ಮೊದಲು ಆ ಡಾಕಿನಿಯು ಸುಂದರಿಯಂತೆ ಬಂದು, ಅನಂತರ ಮುಸಲ್ಮಾನ ವೇಷವನ್ನು ಧರಿಸಿ, ಈಗ ಮಾಯವಾಗಿ ಹೋಯಿತು. ಮಾಧವನಾಗ ಭೂತವು ನಮಗೇನೂ ಕೇಡನ್ನುಂಟುಮಾಡಲಿಲ್ಲವಷ್ಟೆ! ಎಂದು ಸಂತೋಷಪಟ್ಟನು. ಪಾಪ! ಆ ಪಾಪಿಗಳಿಗೇನುಗೊತ್ತು, ರಾಮದಾಸನೇ ವೇಷಪಲ್ಲಟಿಸಿಕೊಂಡು ಬಂದು ಮಂಕು ಬೂದಿ ಹಚ್ಚಿದನೆಂದು ?

೦ ೦ ೦ ೦

ವಾಚಕರೆ! ಪತ್ತೆದಾರಿಯ ಸಹ ರಾಮದಾಸನು ಮನೆಯಿಂದ ಛದ್ಮವೇಷ ಧರಿಸಿ ಹೊರಟಾಗ ಬೈರಾಗಿಯ ಉಡುಪನ್ನು ತೊಟ್ಟುಕೊಂಡು ಬೀದಿಗಳಿದಿದ್ದನೆಂಬದು ನೆನಪಿದೆಯಷ್ಟೆ! ಬೈರಾಗಿಯು ಶಿವಸ್ತೋತ್ರವನ್ನು ಹಾಡುತ್ತಾ ಬೀದಿಯಲ್ಲಿ ಮುಂದುವರಿದು ಹೋಗಿ ಜಾರ್ಜರ ಮನೆಯ ಹತ್ತಿರದವರೆಗೆ ಹೋಗಿ ಗೇಟಿನಹತ್ತಿರ ಸ್ವಲ್ಪ ಹೊತ್ತು ನಿಂತು, ಅನಂತರ ವೈದಾನ್ ರೋಡಿನಲ್ಲಿ ಮುಂದುವರಿದನು. ದಾರಿಯಲ್ಲಿ ಹೆಚ್ಚು ಜನರು ಕಾಣಸಿಕ್ಕ

ಲಿಲ್ಲ. ಕೆಲವರು ದಾರಿಗರು ಮಾರ್ಗದಲ್ಲಿ ಹೋಗುತ್ತಿದ್ದರೂ ಬೈರಾಗಿಯು ಕಡೆಗೆ ಲಕ್ಷ್ಯಗೊಡಲಿಲ್ಲ. ಬೈರಾಗಿಯು ಹಂಪನಕಟ್ಟೆಯನ್ನು ದಾಟಿ ಮೈದಾನಿನ ಬಳಿ ನಾಲ್ಕು ಮಾರ್ಗ ಸೇರುವಲ್ಲಿಗೆ ಬಂದು ಸುತ್ತಲೂ ತನ್ನ ದೃಷ್ಟಿ ಬೀರಿದನು. ಅಷ್ಟರಲ್ಲಿ ಆದೊಂದು ವ್ಯಕ್ತಿಯು ಮೈದಾನಿನ ಮೈನ್‌ರೋಡ್‌ನಲ್ಲಿ ಇದಿರು ಬರುತ್ತಿದ್ದುದನ್ನು ಬೈರಾಗಿಯು ಕಂಡನು. ಆ ವ್ಯಕ್ತಿಯು ಶುಭ್ರವಾದ ಬಿಳೀ ಉಡುಪನ್ನು ಧರಿಸಿದ್ದನು. ತಲೆಗೊಂದು ರುಮಾಲನ್ನು ಸುತ್ತಿದ್ದನು. ವಿದ್ಯುತ್ ಪ್ರಕಾಶದಲ್ಲಿ ಅವನ ಮುಖವು ಬೈರಾಗಿಗೆ ಕಂಡಿತು. ಇವನು ಕೃತಕ ಗಡ್ಡ ಮೀಸೆಗಳನ್ನು ಧರಿಸಿರುವನೆಂದು ಸೂಕ್ಷ್ಮದಿಂದ ನೋಡಿ ತಿಳಿದುಕೊಂಡನು. ಕೃತಕ ವೇಷವನ್ನು ಧರಿಸಿ ಹೋಗಬೇಕಾದರೆ, ಇವನು ಒಂದೋ ಪತ್ತೇದಾರಿಯಾಗಿರಬೇಕು. ಇದು ಸಂಭವವಾಗಿ ತೋರುವುದಿಲ್ಲವಾದುದರಿಂದ, ಇವನು ದಸ್ಯುಗಳ ಸಂಗಡದವನಿರಬೇಕು, ಎಂದು ಬೈರಾಗಿಯು ತರ್ಕಿಸಿದನು. ಬೈರಾಗಿಯನ್ನು ಆ ವ್ಯಕ್ತಿಯು ನೋಡಲಿಲ್ಲ.

ಕೃತಕ ಗಡ್ಡ ಮೀಸೆಗಳನ್ನು ಧರಿಸಿದ ವ್ಯಕ್ತಿಯು ಮುಂದುವರಿಯುತ್ತಾ ಹೋಗುತ್ತಿದ್ದುದನ್ನು ಕಂಡು, ಬೈರಾಗಿಯು ಆ ವ್ಯಕ್ತಿಗೆ ಸಂಶಯ ಬಾರದಂತೆ ಅವನನ್ನನುಸರಿಸಿದನು. ಮುಂದೆ ಹೋಗುತ್ತಿದ್ದ ವ್ಯಕ್ತಿಯು ಸ್ವಲ್ಪ ದೂರ ಹೋಗಿ, ವೈಜ್ಞಾನಿಕನಾದ ಲೋಬೋನ ಮನೆಯ ವರೆಗೆ ಹೋದನು. ಅಲ್ಲಿ ಆ ವ್ಯಕ್ತಿಯು ನಿಂತುಕೊಂಡಿದ್ದುದನ್ನು ಕಂಡು, ಬೈರಾಗಿಯು ನೆರಳು ಮರದ ಮರೆಯಲ್ಲಿ ಅಡಗಿ ನಿಂತು, ಇನ್ನು ಆ ವ್ಯಕ್ತಿಯು ಏನು ಮಾಡುತ್ತಿದೆಯೆಂದು ಕುತೂಹಲದಿಂದ ನೋಡಲು ಪ್ರಾರಂಭಿಸಿದನು. ಮುಂದೆ ನಿಂತಿರುವ ವ್ಯಕ್ತಿಯು, ಸುತ್ತಲೂ ನೋಡಿ ಯಾರೂ ತನ್ನನ್ನು ನೋಡುತ್ತಿದ್ದಿಲ್ಲವೆಂದು ಖಚಿತಪಡಿಸಿಕೊಂಡು, ಲೋಬೋನ ಮನೆಯ ಅಂಗಳಕ್ಕೆ ಹೋದನು. ಆಗ ಬೈರಾಗಿಯು ಈ ನೀಚನು ವಿಜ್ಞಾನಿಯ ಮನೆಯಿಂದ ಕಳವು ಮಾಡಲು ಹೋಗುತ್ತಾನೆಯೋ ಎಂದು ಶಂಕಿಸಿದನು. ಮೆಲ್ಲನೆ ಬೈರಾಗಿಯು ಮುಂದಿದ್ದ ವ್ಯಕ್ತಿಗೆ ಗೋಚರಿಸಿದಂತೆ ಉದ್ಯಾನಕ್ಕೆ ಬಂದನು. ಆಗಂತುಕ ವ್ಯಕ್ತಿಯು ಮುಂದೇನು ಮಾಡುತ್ತಾನೆಂದು ತಿಳಿಯಲು ಅವನು ಆತುರಪಟ್ಟನು. ಅನಂತರವನು ಆ ವ್ಯಕ್ತಿಗೆ ಕಾಣದಂತೆ ಉದ್ಯಾನದಲ್ಲಿಯ 'ಅಶೋಕಪುಷ್ಪ'ದ ಮರದ ಹಿಂದಿನಿಂದ ಅಡಗಿ ನಿಂತುಕೊಂಡನು.

ಆಗಂತುಕ ವ್ಯಕ್ತಿಯು ಮುಂದೇನೋ ಮಾಡಲು ಉಪಕ್ರಮಿಸುತ್ತಲಿದ್ದನು, ಆದರೆ ದೈವವಶಾತ್ ಬೈರಾಗಿಯ ಕಾಲು ತರಗೆಲೆಗಳಿಗೆ ತಾಗಿ 'ಪರ ಪರ' ಶಬ್ದವಾಗಲು ಅವನು ತನ್ನ ಕಾಕದೃಷ್ಟಿಯನ್ನು ಅಶೋಕ ಮರದ ಕಡೆಗೆ ಬೀರಲು, ಅಲ್ಲಾರೋ ಅಡಗಿ ನಿಂತಿರುವುದನ್ನು ಕಂಡನು. ತನ್ನನ್ನಾರೋ ಅನುಸರಿಸಿ ಬಂದಿರುವರೆಂದು ಸಂಶಯಗೊಂಡು, ಏನೂ ಮಾತನಾಡದೆ ಅಲ್ಲಿಂದ ಬಂದ ದಾರಿಯಲ್ಲಿಯೇ ಹಿಂದಿರುಗಿ ಹೋದನು. ಅದನ್ನು ಕಂಡು ಬೈರಾಗಿಯು, ಇವನು ಕಳ್ಳನಾಗಿರಬಹುದು. ಮನೆಯವರಿಗೆ ಎಚ್ಚರವಿದೆ ಯೆಂದು ತಿಳಿದ ಈ ಬದ್‌ಮಾಷನು ಹಿಂದಕ್ಕೆ ಹೋಗುತ್ತಿರುವನೆಂದು ತಿಳಿದು, ಅನಂತರ ಅವನನ್ನನುಸರಿಸಿ ಹೋದನು. ಅಪರಿಚಿತ ವ್ಯಕ್ತಿಯು ಮಾರ್ಗಕ್ಕೆ ಬಂದು ಮುಂದೆ ಹೋಗುತ್ತಿರಲು, ಬೈರಾಗಿಯು ಹಿಂದಿನಿಂದ ಅವನನ್ನನುಸರಿಸಿ ಹೋದನು. ಹಿಂದಿನಿಂದಾರೋ ತನ್ನನ್ನನುಸರಿಸಿ ಬರುತ್ತಿ ರುವರೆಂದು ತಿಳಿದ ಆ ಧೂರ್ತನು ಬರುತ್ತಿರುವರಾರೆಂದು ತಿಳಿಯಲು ನಿಂತು ಕೊಂಡನು. ಆಗ ಬೈರಾಗಿಯು ಮೆಲ್ಲನೆ ಬರುತ್ತಿದ್ದುದನ್ನು ಕಂಡು, ಮುಂದಿನಿಂದ ಇದ್ದ ವ್ಯಕ್ತಿಯು, ಕಠೋರ ಸ್ವರದಿಂದ 'ನೀನು ನನ್ನನ್ನು ಬೆನ್ನಟ್ಟಿ ಬರುತ್ತಿರುವುದು ಯಾಕಾಗಿ' ಎಂದನು. ಅದಕ್ಕಾ ಬೈರಾಗಿಯು ಎದೆಗುಂದದೆ, ನನಗೆ ನಿನ್ನ ಸಂಪೂರ್ಣ ಚರಿತ್ರೆಯನ್ನು ತಿಳಿಯಬೇಕಾಗಿದೆ. ಬೇಗನೆ ನಿನ್ನ ನಿಜ ಚರಿತ್ರೆಯನ್ನು ಸಂಪೂರ್ಣವಾಗಿ ಹೇಳು, ಎಂದನು. ಆಗ ಆ ವ್ಯಕ್ತಿಯು ಎಲೆ! ಬೈರಾಗಿಯೆ! ನಿನಗೇಕೆ ನನ್ನ ಗೊಡವೆ? ನನ್ನ ಚರಿತ್ರೆಯನ್ನು ಕೇಳುವವನು ನೀನಾರು? ಎಂದು ದರ್ಪದ ಧ್ವನಿಯಲ್ಲಿ ಸಿಡಿಲಿನಂತೆ ನುಡಿದನು. ಆಗ ಬೈರಾಗಿಯು ಒಂದು ಕಾರ್ಡನ್ನು ಆ ವ್ಯಕ್ತಿಯ ಕೈಗೆ ಕೊಟ್ಟನು. ಆಗ ಆ ವ್ಯಕ್ತಿಯು ಟಾರ್ಚ್‌ಲೈಟ್‌ನ್ನುರಿಸಿ ನೋಡಿ ದಾಗ ದಪ್ಪ ದಪ್ಪ ಅಕ್ಷರಗಳಲ್ಲಿ "ಪತ್ತೆದಾರಿ ಕರಮಚಂದ" ಎಂದಿದ್ದಿತು. ಅದನ್ನು ನೋಡಿದ ಕೂಡಲೆ ಆ ವ್ಯಕ್ತಿಯ ಜೀವವೇ ಹಾರಿಹೋದಂತಾ ಯಿತು. ಆಗಾ ವ್ಯಕ್ತಿಯು ಇನ್ನು ನನ್ನ ಜೀವದಾಶೆಯೇ ಇಲ್ಲವೆಂದು ತಿಳಿದು, ಪಿಸ್ತೂಲನ್ನು ತೆಗೆದು 'ಒಳ್ಳೆಯ ಮಾತಿನಿಂದ ನನ್ನ ಗೊಡವೆ ಬಿಟ್ಟು ಹೊರಟುಹೋಗು. ಇಲ್ಲದಿದ್ದರೆ ಈಗಲೇ ನಿನ್ನನ್ನು ಯಮಪುರಿಗಟ್ಟುವೆನು' ಎಂದು ಹೇಳಿ ಪಿಸ್ತೂಲನ್ನು ಕರಮಚಂದನ ಹಣೆಗೆ ಸರಿಯಾಗಿ ಹಿಡಿದನು. ಆಗ ಕರಮಚಂದನು ಹೆದರಿದಂತೆ ನಟಿಸಿ, ಮಹಾರಾಯನೆ! ನಿನ್ನ ಸುದ್ದಿಗೆ

ನಾನು ಬರುವುದಿಲ್ಲವಪ್ಪ! ಎಂದು ಹೇಳಿ ಥಕ್ಕನೆ ಕಸುವಿನಿಂದ ಅವನ ಮೈಮೇಲೆ ಹಾರಿ ಪಿಸ್ತೂಲನ್ನು ಎಳೆದು, ಎಲೆ! ದುರುಳನೆ ನೀನು ವೈಜ್ಞಾನಿಕನಾದ ಲೋಬೋವಿನ ಮನೆಗೆ ಹೋಗಿ, ಯಾವ ನೀಚ ಕೆಲಸ ಮಾಡಲು ಉದ್ಯುಕ್ತನಾಗಿ, ಕೃತಕಾರ್ಯನಾಗದೆ ಹಿಂದೆ ಬಂದಿರುವಿ? ಎಂದು ಹೇಳಿ ಅವನ ಕತ್ತನ್ನು ಬಲವಾಗಿ ಹಿಡಿದುಕೊಂಡನು. ಆ ಅಪರಿಚಿತ ವ್ಯಕ್ತಿಯು ಏನೂ ಉತ್ತರ ಕೊಡಲಿಲ್ಲ. ಆಗ ಕರಮುಚಂದನು ಮತ್ತೂ ಬಲವಾಗಿ ಕತ್ತನ್ನು ಹಿಚುಕಲು, ಆಗಾ ವ್ಯಕ್ತಿಯು ನೀನು ನನ್ನ ಕತ್ತನ್ನು ಬಿಟ್ಟಿಯಾದರೆ, ವಿಷಯವನ್ನು ತಿಳಿಸುವೆನೆಂದನು. ಕರಮುಚಂದನು ಅವನ ಕತ್ತನ್ನು ಬಿಡದೆ, ಅವನ ಅಂಗಿಯ ಕಿಸೆಯಲ್ಲೇನಾದರೂ ಇದೆಯೋ ಎಂದು ಹುಡುಕಿದನು. ಆಗ ಅವನಿಗೆ ಒಂದು ಪತ್ರ ಸಿಕ್ಕಿತು. ಪತ್ರವನ್ನು ಪತ್ತೆದಾರಿಯು ತೆಗೆದುಕೊಳ್ಳುತ್ತಿರಲಾ ವ್ಯಕ್ತಿಯು ಹೇಗೋ ಫರಾರಿಯಾದನು.

ಂ ಂ ಂ ●

ಬೈರಾಗಿ ವೇಷಧಾರಿಯಾದ ಕರಮುಚಂದನು ಅವನ ಮನೆಗೆ ತಲುಪಿದಾಗ ಸಾಧಾರಣ ರಾತ್ರಿ ಹನ್ನೆರಡು ಗಂಟೆಯಾಗಿರಬಹುದು. ಆಗ ನಿದ್ರೆಯು ಬಾಧಿಸುತ್ತಿದ್ದುದರಿಂದ ಅವನು ದಸ್ಯುವಿನಿಂದ ಬಲಾತ್ಕಾರವಾಗಿ ಅಪಹರಿಸಿದ ಪತ್ರವನ್ನು ಓದಿನೋಡದೆ ಡ್ರವರನಲ್ಲಿಟ್ಟು ನಿದ್ರಿಸಿದನು. ಬೆಳಗ್ಗೆ ರಾಮುದಾಸನು ಸಹೋದರನ ಕೋಣೆಯ ಹತ್ತಿರ ಬಂದು ಕರೆದಾಗಲೇ ಅವನಿಗೆ ಎಚ್ಚರವಾದುದು. ಅವನು ತಮ್ಮನೊಡನೆ ನಡೆದ ಸಂಗತಿಯನ್ನು ತಿಳಿಸಿದನು. ಅನಂತರವನು ಆ ಪತ್ರವನ್ನು ಡ್ರವರಿನಿಂದ ತೆಗೆದು ಬಿಡಿಸಿನೋಡಿದಾಗ ಅವನಿಗುಂಟಾದ ಆಶ್ಚರ್ಯವನ್ನೇನೆನ್ನಲಿ!.! ಆ ಪತ್ರದಲ್ಲಿದ್ದ ಯಾವ ಅಕ್ಷರಗಳೂ ಕಾಣಿಸುತ್ತಿರಲಿಲ್ಲ 'ಚೋರಸಾರ್ವಭೌಮ'ಎಂಬ ಸಹಿ ಮಾತ್ರವಿದ್ದಿತು. ಆ ಪತ್ರವನ್ನು ಕರಮುಚಂದನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಲು, ಮೊದಲು ಏನೋ ಬರೆದು, ಅನಂತರ ಈ ಪತ್ರವು ಯಾರ ಕೈಗಾದರೂ ಸಿಕ್ಕಿದರೆ, ಇದರಲ್ಲಿರುವ ವಿಷಯವು ತಿಳಿಯದಂತೆ ಮಾಡಲು ಯಾವುದೋ ಒಂದು ದ್ರವವನ್ನು ಅದರ ಮೇಲೆ ಹಚ್ಚಿರುವವೆಂದು ಊಹಿಸಿದನು. ಪತ್ತೆದಾರಿಯು ವಿಜ್ಞಾನವನ್ನು ಚನ್ನಾಗಿ ಅಭ್ಯಸಿಸಿದ್ದನು. ಕಾಲೇಜಿನಲ್ಲಿ ಕಲಿಯುತಿದ್ದುದಾಗ ಪ್ರೊಫೆಸರ್‌ರೊಬ್ಬರು ಕಾಗದದಲ್ಲಿ ಬರೆದು, ಅನಂತರ ಒಂದುತರದ ದ್ರಾವಕವನ್ನದರಮೇಲೆ ಸವ

ರಿಸಿ, ವಿದ್ಯಾರ್ಥಿಗಳಿಗೆ ತೋರಿಸಿದ್ದರು. ಆದರೆ ಆಗ ಅಕ್ಷರಗಳು ಕಾಣಿ ಸಲಿಲ್ಲ. ಪುನಃ ಅವರು ಬೇರೊಂದು ತರದ ದ್ರವವನ್ನು ಆದರ ಮೇಲೆ ಸವರಿ ಸಲು, ಮೊದಲಿದ್ದ ಅಕ್ಷರಗಳು ಕಾಣಿಸಿದುವು; ಆದರೆ ಪುನಃ ಸವರಿದ ದ್ರವವಾವುದೆಂಬದು ಕರಮಚಂದನಿಗೆ ಗೊತ್ತಿರದಿದ್ದುದರಿಂದ ಅವನೀಗ ಪೇಚಿಗೊಳಗಾದನು.

# ಸಿಕ್ಕ ತುಂಟ ಫರಾರಿಯಾದ

ಈ ದಿನ ಮಧ್ಯಾಹ್ನನಂತರ ಪತ್ತೆದಾರಿ ಕರಮಚಂದ ಎಕ್ಸ್ಪ್ರೆಸ್ ಟ್ರೈನಿನಲ್ಲಿ, ಈ ದಿನ ಅವನ ದೂರದ ಸಂಬಂಧಿಕನಲ್ಲಿ ಜರಗಲಿಕ್ಕಿರುವ ವಿವಾಹಕ್ಕಾಗಿ ಕಾಸರಗೋಡಿಗೆ ಹೋಗಿದ್ದನು. ಸಾಯಂಕಾಲ ಏಳು ಗಂಟೆಗೆ ರಾಮದಾಸನು ಊಟ ತೀರಿಸಿದನು.

ವಾಚಕ ಮಹಾಶಯರೆ! ಸಾಧಾರಣ ರಾತ್ರಿ ಏಳೂವರೆಕ್ಕಾಲು ಗಂಟೆಗೆ ಹುಚ್ಚನೊಬ್ಬನು ಪೋಲೀಸ್ ಸ್ಟೇಶನ್ನಿನ ಬಳಿ ಸಂಚರಿಸುತಿದ್ದನು. ಆ ಹುಚ್ಚನು ಒಂದು ಪಾಯಿಜಾಮನ್ನು ಧರಿಸಿಕೊಂಡಿದ್ದು, ಮಲಿನವಾದ, ಅಲ್ಲಲ್ಲಿ ಹರಿದುಹೋದ ಅಂಗಿಯನ್ನು ತೊಟ್ಟುಕೊಂಡು ಏನೇನೋ ಹೇಳುತ್ತಾ ಅಲೆಯುತ್ತಿದ್ದನು. ಸಣ್ಣಮಕ್ಕಳು ಆ ಹುಚ್ಚನನ್ನು ಕಂಡು ಬೆದರಿ ಓಡಿಹೋದರು. ಸ್ವಲ್ಪ ದೊಡ್ಡ ಹುಡುಗರು ಅವನ ಸುತ್ತಲೂ ಮುತ್ತಿ ಪರಿಹಾಸ್ಯಮಾಡುತಿದ್ದರು. ಕೆಲವರಂತೂ ಕಲ್ಲೆಸೆಯಲು ಪ್ರಾರಂಭಿಸಿ ದರು. ಹುಚ್ಚನು ಹುಡುಗರು ಕಲ್ಲೆಸೆಯುತ್ತಿರಲು ತಪ್ಪಿಸಿಕೊಂಡು ಬಾಯಿಗೆ ಬಂದಂತೆ ಬೈಯುತ್ತ, ಕುಣಿದು ಹಾರಾಡುತ್ತಿದ್ದನು. ಕೆಲವು ಸಲ ಅಳುತ್ತಲೂ ಇನ್ನು ಕೆಲವು ಸಲ ನಗುತ್ತಲೂ ಇದ್ದ ಆ ಹುಚ್ಚನನ್ನು ಕಂಡ ಕೆಲವು ಪೋಲಿ ಹುಡುಗರು ಅವನನ್ನು ಹಿಂಸಿಸಲಾರಂಭಿಸಿದರು. ಸಭ್ಯಗೃಹಸ್ಥರು ಹುಚ್ಚ ನಿಗೆ ಉಪದ್ರವ ಕೊಡುತಿದ್ದ ಬಾಲಕರನ್ನು ಗದರಿಸಿ ಕಳುಹಿಸುತ್ತಿರಲು, ಈ ಹುಚ್ಚನು ಅವರನ್ನು ಬೈಯಲಾರಂಭಿಸಿದನು. ಅನಂತರ ಹುಚ್ಚನು ಕೇಕೇಹಾಕುತ್ತಾ, ಕುಣಿಯುತ್ತ ಪೋಲೀಸ್ ಸ್ಟೇಷನ್ನಿನ ಜಗುಲಿಯ ಹತ್ತಿರ ಬಂದನು. ಆಗ ಅಲ್ಲಿ ಕಾವಲಿದ್ದ ಗಸ್ತಿನವರು ಹುಚ್ಚನೊಡನೆ ಇಲ್ಲಿ ನಿಲ್ಲಿಂದ ಹೋಗು, ಎಂದು ಬೆದರಿಸಿದರು, ಆದರೆ ಅವರ ಪೊಳ್ಳು ಬೆದರಿಕೆಯನ್ನ

ವನು ಗಣನೆಗೆ ತರಲಿಲ್ಲ. ಆಗ ಗಸ್ತಿನವನು ಅವನಿಗೆ ಹೊಡೆಯಲು ಬೆತ್ತವನ್ನೆತ್ತಿದನು. ಹುಚ್ಚನಾಗ ನಿಜವಾಗಿ ಬೆದರಿದವನಂತಾಗಿ ನನ್ನನ್ನು ಬಿಟ್ಟು ಬಿಡಿರಿ, ನಿಮ್ಮ ಸುಪರಿಡೆಂಟರು ಸಾಯಲಿ ಎಂದನು. ಆಗ ಪೋಲೀಸರು ಅವನನ್ನು ಜೋರುಮಾಡಿ, ನೀನು ಸುಪರಿಡೆಂಟರನ್ನು ಬೈದರೆ ಅವರು ನಿನ್ನ ಚರ್ಮ ಸುಲಿದು ನಿನ್ನ ಕೈಯಲ್ಲಿಯೇ ಕೊಟ್ಟಾರು, ಎಂದರು. ಹುಚ್ಚನು ಮತ್ತೂ ಏನೇನೋ ಹೇಳುತ್ತಿರಲು, ಪೋಲೀಸರು ಅವನನ್ನು ಹಿಡಿದು ಸುಪರಿಡೆಂಟ್ ಯಶವಂತ ಸಿಂಹನ ಬಳಿಗೆ ಕರೆದುಕೊಂಡು ಹೋದರು.

ಯಶವಂತಸಿಂಹನು ಹುಚ್ಚನೊಬ್ಬನನ್ನು ಪೋಲೀಸರು ಹಿಡಿದು ತಂದುದನ್ನು ಕಂಡು, ಅವರೊಡನೆ ನೀವೀತನನ್ನು ಬಂಧಿಸಲು ಕಾರಣವೇನೆಂದು ಕೇಳಿದನು. ಆಗ ಪೋಲೀಸರು ಇವನು ನಿಮ್ಮನ್ನು ಏನೇನೋ ಹೇಳಿ ಬೈದನು; ಅಲ್ಲದೆ ಸಣ್ಣಮಕ್ಕಳನ್ನೆಲ್ಲ ಹೆದರಿಸಿ ಅವರಿಗೆ ಹೊಡೆಯಲು ಹೋದಾಗ ನಾವಿವನನ್ನು ಬಂಧಿಸಿದೆವು, ಎಂದರು ಯಶವಂತನು ಹುಚ್ಚನೊಡನೆ, ನೀನು ಮಾಡಿದ ಅಪರಾಧಕ್ಕಾಗಿ, ಈ ದಿನ ನೀನು ಆ ಕತ್ತಲೆಯ ಕೋಣೆಯಲ್ಲಿರಬೇಕು, ಎಂದನು. ಆಗ ಹುಚ್ಚನು ಕಳವಳಗೊಂಡು, ಅನಂತರ ನಾನು ಯಾರೆಂದು ಗ್ರಹಿಸಿದ್ದೀರಿ? ಎಂದು ದೊಡ್ಡಸ್ವರದಿಂದ ಕೇಳಿದನು. ಆಗ ಯಶವಂತನು, ನೀನೊಬ್ಬ ಹುಚ್ಚನೆಂದನು. ಆಗ ಆ ಮರುಳನು ಸುಮ್ಮನೆ ಬಾಯಿಗೆ ಬಂದಂತೆ ಹೇಳಿದರೆ ಜೋಕೆ! ಎಂದು ಬೊಬ್ಬಿಟ್ಟನು. ಯಶವಂತನಿಗೆ ಹುಚ್ಚನ ಚರ್ಯೆಯನ್ನು ಕಂಡು ನಗುಬಂದಿತು. ಹುಚ್ಚನು ಪೋಲೀಸರನ್ನೆಲ್ಲ ಹೊರಕಳುಹಿಸಿರಿ ಎಂದನು. ಸುಪರಿಡೆಂಟನ ಅಪ್ಪಣೆಯಂತೆ ಪೋಲೀಸರು ಆ ಕೋಣೆಯಿಂದ ಹೊರಟುಹೋದರು. ಅನಂತರ ಹುಚ್ಚನು ಯಶವಂತಸಿಂಹನೊಡನೆ, ನನ್ನನ್ನು ಹುಚ್ಚನೆಂದು ಹೇಳುತ್ತಿರುವ ನಿಮಗೇ ಹುಚ್ಚು, ಎಂದು ಹೇಳಿ, ಗಹಗಹಿಸಿ ನಗಹತ್ತಿದನು. ಇಷ್ಟರವರೆಗೆ ಹುಚ್ಚನು ಮಾತನಾಡಿದ ಸ್ವರಕ್ಕೂ, ಈಗ ಮಾತನಾಡಿದ ಸ್ವರಕ್ಕೂ ಬಹಳ ವ್ಯತ್ಯಾಸವಿದ್ದಿತು. ಈಗ ಯಶವಂತಸಿಂಹನಿಗೆ ಹುಚ್ಚನ ಗುರುತು ಹತ್ತಿತು ವಾಚಕರೇ, ಹುಚ್ಚನಾರೆಂದು ಬಲ್ಲಿರಾ? ಅವನೇ ಇವನು, ಅಂದರೆ ಪತ್ತೆದಾರಿ ಸಹೋದರನಾದ ರಾಮದಾಸನೆಂಬದು ಬಲ್ಲಿರಷ್ಟೆ!

ಪೋಲೀಸ್ ಸುಪರಿಂಟೆಂಟ್ ಯಶವಂತಸಿಂಹನಿಗೆ ರಾಮದಾಸನ ಗುರುತು ಹತ್ತಲು, ಅವನು ಆಶ್ಚರ್ಯದಿಂದ ಪತ್ತೇದಾರಿ ಸಹೋದರನೆ! ನೀನು ವೇಷವನ್ನು ಎಷ್ಟು ಚೆನ್ನಾಗಿ ಮಾರ್ಪಡಿಸಿ, ಸ್ವರ ಬದಲಾಯಿಸಿ, ಸ್ವಲ್ಪ ಸಹ ನನಗೆ ಗುರುತು ಹತ್ತದಂತೆ ಮಾಡಿದೆಯಲ್ಲ! ನೀನು ನೈದಾನಿನಲ್ಲಿ, ಪ್ರದರ್ಶನಕಾಲದಲ್ಲಿ ಈ ವೇಷಧರಿಸಿದರೆ, ಪ್ರಥಮ ಬಹುಮಾನವು ನಿನಗೆ ಕಟ್ಟಿಟ್ಟ ಮುಡಿಪು ಎಂಬುದರಲ್ಲಿ ಸಂದೇಹವಿಲ್ಲ. ಅದಿರಲಿ. ಈಗ ಛದ್ಮವೇಷ ಧರಿಸಿಕೊಂಡು ಇಲ್ಲಿಗೆ ಬರಲು ಕಾರಣವೇನು? ಎಂದವನು ಕೇಳಿದಾಗ, ರಾಮದಾಸನು ಅವನೊಡನೆ ಹೀಗೆಂದನು.

ರಾಮದಾಸ:- ಚೋರರು ಆಭರಣಗಳನ್ನು ವಿಕ್ರಯಿಸಲು, ರಾತ್ರಿ ಸರಾಫಕಟ್ಟೆಗೆ ಬರಲಿಕ್ಕೂ ಸಾಕು. ಆಗ ಅವರ ಪತ್ತೆಹಚ್ಚಬಹುದಲ್ಲವೆ!

ಯಶವಂತಸಿಂಹ— ಸರಿ. ಅದೊಳ್ಳೆಯ ಉಪಾಯ:—

ರಾಮದಾಸ— ನೀನೂ ಸಹಾ ನನ್ನೊಡನೆ ಬರಬೇಕಾಗಿದೆ.

ಯ. ಸಿಂಹ— ನಾನೀ ವೇಷದಲ್ಲಿಯೇ ಬಂದರೆ ಎಲ್ಲರಿಗೂ ಸಿಕ್ಕಬಹುದಲ್ಲವೆ! ಛದ್ಮವೇಷ ಧರಿಸಲು ನನಗೆ ಅಭ್ಯಾಸವೇ ಇಲ್ಲ.

ರಾಮದಾಸ— ಅದಕ್ಕೇನು? ನಾನು ನಿನಗೆ ಒಬ್ಬ ಹಳ್ಳಿಯ ಬಡ ರೈತನ ವೇಷವನ್ನು ಹಾಕುತ್ತೇನೆ ಎಂದನು. ಆಗ ಯಶವಂತಸಿಂಹನು ಅದಕ್ಕೊಪ್ಪಿದನು. ಅನಂತರ, ಅವನ ಮನೆ ಹತ್ತಿರವೇ ಇದ್ದುದರಿಂದ ಅಲ್ಲಿಗೆ ಅವನೊಡನೆ ರಾಮದಾಸನೂ ಹೋದನು. ರಾಮದಾಸನು ಬಹಳ ಚಮತ್ಕಾರದಿಂದ ಯಶವಂತಸಿಂಹನಿಗೆ ಹಳ್ಳಿಯ ರೈತನ ಪೋಷಾಕನ್ನು ತೊಡಿಸಿ, ಹೀಗೆ ಹೀಗೆ ವರ್ತಿಸಬೇಕೆಂದನು.

ಸಾಧಾರಣ ರಾತ್ರಿ ಎಂಟೂವರೆ ಗಂಟೆಗೆ ಗಡ್ಡ ಹಣ್ಣಾದ ರೈತನೊಬ್ಬನು ಅಂಗಿ ಧೋತರ ಒಂದು ಮುಂಡಾಸು ತಲೆಗೆ ಕಟ್ಟಿ ಮೈಗೊಂದು ಬಟ್ಟೆಯನ್ನು ಹೊದೆದುಕೊಂಡು, ಹಂಪನಕಟ್ಟೆಯ ಮಾರ್ಗವಾಗಿ ಹೋಗುತ್ತಿದ್ದನು. ಅವನ ಕೈಯಲ್ಲೊಂದು ಬೆತ್ತವೂ, ಗಂಟು ಮೂಟೆಯೂ ಇದ್ದಿತು, ಅವನ ಹಿಂದಿನಿಂದ ಹುಚ್ಚನೋರ್ವನು ಯಾವುದೋ ಒಂದು ಪದವನ್ನು ಹಾಡುತ್ತಾ ಬರುತ್ತಿದ್ದನು. ಸ್ವಲ್ಪ ಸಮಯದಲ್ಲಿ ಹುಚ್ಚನು ಓಡುತ್ತಾ ಬಂದು, ರೈತನ ಗಂಟು ಮೂಟೆಗೆ ಕೈಹಾಕಿದನು. ಆಗ ರೈತನು ಹುಚ್ಚನಿಗೆ ಬೆತ್ತದಿಂದ ಹೊಡೆಯಲು ಹೋದನು. ಹುಚ್ಚನಾಗ ಈ ಘಟಿಂಗನು

ನನಗೆ ಸುಮ್ಮನೆ ಹೊಡೆಯುತಿದ್ದಾನೆ, ಎಂದು ಹೇಳಿ ಅಳಹತ್ತಿದನು. ಆ ದೃಶ್ಯವನ್ನು ದಾರಿಗರು ನೋಡುತಿದ್ದರು. ರೈತನು ತನ್ನಲ್ಲಿರುವ ಬೆತ್ತದಿಂದ ಹುಚ್ಚನಿಗೊಂದೇಟು ಕೊಟ್ಟು ಬೇಗ ಬೇಗನೆ ಮುಂದುವರಿದನು.

ವಾಚಕ ಮಹಾಶಯರೆ! ಆದಾರು ಅಲ್ಲಿ ಬರುತ್ತಿರುವವರು? ಒಬ್ಬ ಸೇವಕನೊಡನೆ ಇರಾಣಿಯುವನೊಬ್ಬನು ಬರುತ್ತಿದ್ದಾನಲ್ಲವೆ! ಹಾ! ಅವನ ಉಡಿಗೆ ತೊಡಿಗೆಗಳ ವೈಯ್ಯಾರವೇನು? ಹೊಳಪಿರುವ ಅವನ 'ಶೂಟ್'ನ್ನು ನೋಡಿದರೆ ನಮಗೆ ವ್ಯಕ್ತವಾಗುವದಿಲ್ಲವೆ, ಇವನೊಬ್ಬ ಆಗರ್ಭ ಶ್ರೀಮಂತ ನೆಂದು? ತಲೆಗೊಂದು ಫೇಟಾವನ್ನು ಸುತ್ತಿದ್ದನು. ಅವನ ಉಡಿಗೆ-ತೊಡಿಗೆ ಗಳನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದರೆ ಸಾಧಾರಣ ಇನ್ನೂರು ರೂಪಾಯಿ ಬೆಲೆಬಾಳುವ ಒಟ್ಟೆ-ಬರೆಗಳು ಅವನ ದೇಹದಲ್ಲಿವೆಯೆಂದು ಯಾರಿಗೂ ತಿಳಿಯುತಿತ್ತು. ಸೇವಕನ ಕೈಯಲ್ಲಿ ಒಂದು ಚೀಲವಿದೆಯಲ್ಲವೆ! ಅದು ಬಹಳ ಭಾರವಿರುವಂತೆ ತೋರುತ್ತದೆ. ಅದರಲ್ಲೇನಿರಬಹುದು? ಇರಾಣಿ ತರುಣನು ಸರಾಫ ಅಂಗಡಿಗೆ ಹೋಗುತಿದ್ದಾನಲ್ಲವೆ! ಏನಾದರೂ ಆಭರಣ ಗಳನ್ನು ತೆಗೆದುಕೊಳ್ಳಲಾಗಿರಬಹುದು. ನೋಡುವಾ. ಇರಾಣಿಯುವನು ಸರಾಫ ಅಂಗಡಿಯ ಮೆಟ್ಟಲುಗಳನ್ನೇರಿದನು. ಸರಾಫನು ಕುರ್ಚಿಯಲ್ಲಿ ಕುಳಿತಿದ್ದನು. ಅಷ್ಟರಲ್ಲಿ ರೈತನೂ ಹುಚ್ಚನೂ ಅಲ್ಲಿಗೆ ತಲುಪಿದರು. ಹುಚ್ಚನ ಸಂಕೇತ ಧ್ವನಿಯನ್ನು ಕೇಳಿ ರೈತನು ನಿಂತನು ಹುಚ್ಚನು ಅಂಗಡಿಯ ಹತ್ತಿರ ಬಂದು ಏನೇನೋ ಹೇಳುತ್ತಿದ್ದನು.

ಇರಾಣಿ ತರುಣನು ಸೇವಕನ ಹತ್ತಿರದಿಂದ ಚೀಲ ತೆಗೆದು, ಸರಾಫ ನೊಡನೆ ನನ್ನ ಹತ್ತಿರ ಕೆಲವು ಆಭರಣಗಳಿವೆ ಇವುಗಳನ್ನು ವಿಕ್ರಯಿಸಲು ನಾನು ಬಂದಿರುತ್ತೇನೆಂದು ಹೇಳಿ, ಚೀಲದಿಂದ ಕೆಲವು ಆಭರಣಗಳನ್ನು ತೆಗೆದು ಮೇಜಿನ ಮೇಲಿಟ್ಟನು. ಸರಾಫನು ಅವುಗಳನ್ನು ಪರೀಕ್ಷಿಸಿ ನೋಡಿ, ರಾತ್ರಿಯಲ್ಲಿ ಆಭರಣಗಳನ್ನು ವಿಕ್ರಯಿಸಲು ಬರಬೇಕಾದರೆ 'ಇದು ಕಳ್ಳಮಾಲು' ಆಗಿರಬೇಕು ಎಂದೂಹಿಸಿ, ಅವನು ಸಾಧಾರಣ ಅವು ಗಳ ಬೆಲೆಯ ಅರ್ಧಾಂಶದಷ್ಟು ಐದು ಸಾವಿರ ರೂಪಾಯಿ ಇವರ ಮೌಲ್ಯ ವಾಗುತ್ತದೆಯೆಂದು ಹೇಳಿ ಇರಾಣಿಯುವನ ಮುಖನೋಡಿದನು. ಆಗ ಆಗಂತುಕನು ಅದು ಬಹಳ ಕಡಿಮೆಯಾಯಿತು. ಎಂಟುಸಾವಿರಕ್ಕಾದರೆ ಕೊಡುವೆನೆಂದನು. ರೈತನು ಇವರ ಸಂಭಾಷಣೆಯನ್ನು ಕೇಳುತ್ತಿದ್ದನು.

ಹುಚ್ಚನಾಗ ಇರಾಣಿಯುವನನ್ನೇ ದಿಟ್ಟಿಸಿ ನೋಡುತಿದ್ದನು. ಅವನಿಗೆ ಈ ವ್ಯಕ್ತಿಯನ್ನೆಲ್ಲಿಯೋ ಕಂಡಂತೆ ನೆನಪಾಯಿತು. ಅವನು ಚೆನ್ನಾಗಿ ಅವನನ್ನೇ ಆಮೂಲಾಗ್ರವಾಗಿ ನೋಡಿದಾಗ, ಇವನನ್ನು ವಿಶ್ರಾಂತಿ ಭವನದಲ್ಲಿ ನೋಡಿರುವನೆಂದವನಿಗೆ ನೆನಪಾಯಿತು. ಅವನು ಈ ವ್ಯಕ್ತಿಯು ಕಳ್ಳನೆಂದು ತಿಳಿದನು. ಹುಚ್ಚನು ನಗೆದಾಡುತ್ತಾ ಕುಣಿಯುತ್ತಾ ಥಕ್ಕನೆ ಸರಾಫನ ಹತ್ತಿರ ಬಂದು:-ಒಡೆಯರೆ! ಇವು ಕಳ್ಳಮಾಲುಗಳು. ಇಲ್ಲದಿದ್ದರೆ, ಹನ್ನೆರಡು ಸಾವಿರ ಕ್ರಯ ಬಾಳುವ ಆಭರಣಗಳನ್ನು ಇವನು ಎಂಟ್ಟು ಸಾವಿರಕ್ಕೆ ಕೊಡುತ್ತಾನೆಯೆ? ಎಂದನು. ಹುಚ್ಚನ ಮಾತುಗಳನ್ನು ಕೇಳಿ ತರುಣನು ಸಿಟ್ಟಿಗೆದ್ದು ಹುಚ್ಚನಿಗೆ ಹೊಡೆಯಲು ಹೋದನು; ಆದರೆ ಸರಾಫನೂ, ರೈತನೂ ಅವನನ್ನು ಸಮಾಧಾನಪಡಿಸಿದರು. ಇರಾಣಿ ತರುಣನಿಗೆ ಈ ಹುಚ್ಚನು ನಿಜವಾದ ಹುಚ್ಚನಲ್ಲ, ವೇಷಧಾರಿಯಾಗಿರಬೇಕು, ಎಂದು ಕಂಡಿತು. ಅವನಿಗೂ ಸರಾಫನಿಗೂ ಬೆಲೆಯಲ್ಲಿ ಚರ್ಚೆ ಬಂದುದರಿಂದ ಆ ತರುಣನು ಸೇವಕನೊಡನೆ ಆಭರಣಗಳನ್ನು ತೆಗೆದುಕೊಂಡು ಹೊರಟನು. ತರುಣನು ಒಮ್ಮೆ ಕ್ರೂರದೃಷ್ಟಿಯನ್ನು ಹುಚ್ಚನೆಡೆಗೆ ಬೀರಿದನು. ರೈತನು ತರುಣನೊಡನೆ:-ಮಹಾಶಯರೆ! ನೀವೀ ಆಭರಣಗಳನ್ನು ಮಾರಲು ಬಂದ ಕಾರಣವೇನು? ಎಂದನು. ಆಗ ಆ ಯುವಕನು, ನಿನ್ನಂಥಹ ಬಡ ರೈತನಿಗೆ ತಿಳಿದು ಆಗಬೇಕಾದುದೇನು? ಎಂದು ಹೇಳಿ ಮುಂದುವರಿದನು.

ಇರಾಣಿಯುವನು ಹೊರಟು ಹೋದ ನಂತರ ಹುಚ್ಚನೂ ರೈತನೂ ಏನೋ ಮೆಲ್ಲನೆ ಮಾತನಾಡಿಕೊಂಡು, ಅವನನ್ನನುಸರಿಸಿ ಹೋದರು. ಇರಾಣಿ ತರುಣನು ಸೇವಕನೊಡನೆ ಹಂಪನಕಟ್ಟೆಯಿಂದ 'ನ್ಯೂಮೋಡೆಲ್ ಬೇಂಕ್'ನ ಮಾರ್ಗದಲ್ಲಿ ಹೋದನು. ರೈತನೂ ಹುಚ್ಚನೂ ಅನುಸರಿಸಿ ಬರುತ್ತಿರುವುದನ್ನವನು ನೋಡಲಿಲ್ಲ. ನ್ಯೂಮೋಡೆಲ್ ಬೇಂಕ್‌ನ ಹತ್ತಿರದಿಂದ ಅನಂತರ ವಿಶ್ರಾಂತಿ ಭವನದ ಕಡೆಗೆ ಆ ಇರಾಣಿ ತರುಣನು ಹೋದನು. ಅವನಾಗ ಏನೋ ಶಬ್ದವಾಗಿ ಹಿಂತಿರುಗಿ ನೋಡಿದಾಗ, ಯಾರೋ ಹಿಂದೆ ಅನುಸರಿಸಿ ಬರುತ್ತಿರುವುದನ್ನು ಕಂಡನು. ತರುಣನು ನಿಂತುದನ್ನು ಕಂಡು ಅವನನ್ನನುಸರಿಸಿ ಬರುತ್ತಿರುವ ರೈತನೂ ಹುಚ್ಚನೂ ನಿಂತರು. ಪತ್ತೆದಾರಿಗಳಾರೋ ತನ್ನನ್ನನುಸರಿಸಿ ಬರುತ್ತಿರುವರೆಂದು ತಿಳಿದು

ಆ ಯುವಕನು ಸೇವಕನೊಡನೆ ಮತ್ತೂ ಮುಂದುವರಿದನು. ಅನಂತರ ಮಾರ್ಗ ತಿರುಗುತ್ತಿರುವ ಸ್ಥಳಕ್ಕೆ ತಲುಪಿದಾಗ ಅವನು ಸೇವಕನೊಡನೆ ಒಂದು ಮರದ ಮರೆಯಲ್ಲಿ ಮೈಮರೆಸಿಕೊಂಡನು. ರೈತನೂ, ಹುಚ್ಚನೂ ಇರಾಣಿ ತರುಣನು ಮುಂದೆ ಹೋಗಿರುವನೆಂದು ತಿಳಿದು ಮಾರ್ಗದಲ್ಲಿ ಹೋಗುತಿದ್ದರು. ಅವನು ಅಡಗಿನಿಂತಿದ್ದ ಸ್ಥಳಕ್ಕೆ ಇವರು ಬಂದಾಗ.ಆ ತರುಣನು ಫಕ್ಕನೆ ಜಿಗಿದು, ಹುಚ್ಚನ ಕುತ್ತಿಗೆಯನ್ನು ಹಿಡಿದನು. ಸೇವಕನು ರೈತನ ದೊಣ್ಣೆಯನ್ನೆಳೆದು ಅವನೊಡನೆ ಉರುಳಾಡಿದನು. ಆಗ ರೈತವೇಷಧಾರಿಯಾದ ಯಶವಂತಸಿಂಹನು ಮಾರ್ಗದ ಬದಿಯಲ್ಲಿರುವ ಜಲ್ಲಿ ಕಲ್ಲಿನ ರಾಶಿಗೆ ಬಿದ್ದನು ತಲೆಗೆ ಪೆಟ್ಟಾಗಿ ರಕ್ತಹರಿಯಲು ಪ್ರಾರಂಭವಾಯಿತು; ಮತ್ತು ಅವನಿಗೆ ಸ್ಮೃತಿತಪ್ಪಿತು. ಇದನ್ನು ಕಂಡು ಹುಚ್ಚನಂತೆ ನಟಿಸುತ್ತಿದ್ದ ರಾಮದಾಸನು ಕೋಪಗೊಂಡು, ತರುಣನ ಹಿಡಿತದಿಂದ ತಪ್ಪಿಸಿಕೊಂಡು ಅವನ ಕೆನ್ನೆಗೆ ಹೊಡೆದನು. ಅಷ್ಟರಲ್ಲಿ ಸೇವಕನು ಓಡಿಬಂದು ರಾಮದಾಸನ ಬೆನ್ನಿಗೊದೆದನು ಆಗ ರಾಮದಾಸನೂ ಬಿದ್ದನು ಬಿದ್ದಲ್ಲಿಂದೆದ್ದು ಅವನು ಆ ದಸ್ಯುಗಳೊಡನೆ ಉರುಳಾಡಿದನು; ಆದರೆ ಅವರು ಇಬ್ಬರು ಇದ್ದುದರಿಂದ ರಾಮದಾಸನು ಸೋತನು. ಅವನನ್ನು ಬಂಧಿಸಿ ನೀಚರು ಅವನ ಕಣ್ಣಿಗೆ ಒಟ್ಟೆಕಟ್ಟಿ ಎಲ್ಲಿಗೋ ಕರೆದುಕೊಂಡು ಹೋದರು. ಯಶವಂತನಿಗಿನ್ನೂ ಪ್ರಜ್ಞೆ ಬಂದಿರಲಿಲ್ಲ. ಆ ನೀಚದ್ವಯರು ಈ ಪುಂಡ ತುಂಟ ಪೋರನು ಸಿಕ್ಕಿದನು ಎಂದು ಸಂತೋಷಪಟ್ಟರು.

○ ○ ● ○ ○

ವಾಚಕರೆ! ಇರಾಣಿಯ ವೇಷದಿಂದ ಬಂದವನು ವೈಜ್ಞಾನಿಕನಾದ ಲೋಬೋನ ಬಲಗೈ ಬಂಟನಾದ ಪಿಟ್ಟನಾಗಿದ್ದನು. ಅವನು ನ್ಯೂಮೋಡೆಲ್ ಬೇಂಕಿನಿಂದ ಅಪಹರಿಸಿದ ಆಭರಣಗಳನ್ನು ವಿಕ್ರಯಿಸ ಲೋಕ್ಸರ ಸರಾಫನ ಅಂಗಡಿಗೆ ಬಂದಿದ್ದನು. ಅವನೊಡನೆ ಸೇವಕನಂತೆ ಬಂದಿದ್ದವನು ವಿಜ್ಞಾನಿಯ ದುಷ್ಟಕೆಲಸಗಳಿಗೆ ಸಹಾಯಕನಾದ ಕೊಯಿಲೊ ಆಗಿದ್ದನು; ಆದರೆ ದುರದೃಷ್ಟದಿಂದ ಅವರು ಬಂದ ಕಾರ್ಯವು ಕೈಗೂಡಲಿಲ್ಲ. ರಾಮದಾಸನನ್ನವರು ಸೆರೆಹಿಡಿದರು. ಅವನನ್ನು ವಿಶ್ರಾಂತಿ ಭವನದ ಮಾಳಿಗೆಯೊಂದರಲ್ಲಿ ಬಂಧಿಸಿಟ್ಟರು ಅನಂತರ ಪಿಟ್ಟನು ವೈಜ್ಞಾನಿಕನ ಮನೆಗೆ ಹೋಗಿ ನಡೆದ ಸಂಗತಿಯನ್ನು ತಿಳಿಸಿದನು. ವಿಜ್ಞಾನಿಯು

ರಾಮುದಾಸನನ್ನು ಯಾರಿಗೂ ತಿಳಿಯದ ಗೂಢಸ್ಥಳದಲ್ಲಿ ಬಂಧಿಸಿದ್ದಿ, ಎಂದನು. ಪಿಟ್ಟನಾಗ ನಾವು ಅವನನ್ನು ವಿಶ್ರಾಂತಿ ಭವನದ ನೆಲಮಾಳಿಗೆಯಲ್ಲಿ ಬಂಧಿಸಿಟ್ಟಿದ್ದೇವೆಯೆಂದನು. ಇಷ್ಟಾಗುವಾಗ ಸಾಧಾರಣ ರಾತ್ರಿ ಹನ್ನೊಂದೂವರೆ ತಾಸಾಗಿರಬಹುದು

೦೦ ೦೦ ೦೦ ೦೦

ರಾಮುದಾಸನನ್ನು ದಸ್ಯುಗಳು ನೆಲಮಾಳಿಗೆಯ ಒಂದು ಕತ್ತಲೆ ಕೋಣೆಯಲ್ಲಿ ಬಂಧಿಸಿದ್ದರು ಅಲ್ಲಿನ ವಾತಾವರಣವು ದುರ್ಗಂಧದಿಂದ ಕೂಡಿದ್ದಿತು. ಸೊಳ್ಳೆಗಳ ಕಾಟವನ್ನು ಹೇಳಿತೀರದು. ಅಂತಹ ಕೋಣೆಯಲ್ಲಿ ರಾಮುದಾಸನು ಚಿಂತಾಕ್ರಾಂತನಾಗಿ ಒಂದು ಸಣ್ಣ ಹರಕು ಚಾಪೆಯಲ್ಲಿ ಕುಳಿತುಕೊಂಡಿದ್ದನು. ಅವನನ್ನು ಅಲ್ಲಿ ಬಂಧಿಸಿ ಇನ್ನೂ ಅರ್ಧ ಗಂಟೆಯಾಗಿರಲಿಲ್ಲ. ತನ್ನ ಇಹಲೋಕದ ಜೀವನವು ಇಲ್ಲಿಗೆ ಕೊನೆಗಂಡಂತೆಯೆ ಎಂದವನು ತಿಳಿದುಕೊಂಡನು. ಈ ದುರ್ಗಂಧಯುಕ್ತವಾದ ಕೋಣೆಯಿಂದ ಹೊರ ಹೋಗಲು ಎಲ್ಲಿಯಾದರೂ ಗುಪ್ತದ್ವಾರವಿದೆಯೋ ಎಂದು ಕಷ್ಟಪಟ್ಟು ಹುಡುಕಿದನು; ಆದರೆ ಹೊರಗಿನಿಂದ ಬೀಗ ಹಾಕಲ್ಪಟ್ಟ ಅತಿ ಬಲವಾದ ಬಾಗಿಲಿನ ಹೊರತು ಬೇರೆ ದಾರಿಯೇ ಆ ಕೊಠಡಿಗೆ ಇರಲಿಲ್ಲ. ಅವನು ಕಟ್ಟಕಡೆಗೆ ಹೇಗಾದರೂ ಪ್ರಯತ್ನಪಟ್ಟು ಬಾಗಿಲನ್ನು ಮುರಿದಾದರೂ ಇಲ್ಲಿಂದ ಹೋಗಬೇಕೆಂದು ಪ್ರತಿಜ್ಞೆಮಾಡಿ ಬಾಗಿಲಿಗೆ ಬಲವಾಗಿ ಒದೆದನಾದರೂ ಅವನ ಕಾಲಿಗೆ ನೋವಾಯಿತಲ್ಲದೆ ಬೇರೇನೂ ಉಪಯೋಗವಾಗಲಿಲ್ಲ ಅವನು ಸಿಟ್ಟಿನಿಂದ ಅತ್ತಿತ್ತ ಜೋರಾಗಿ ನಡೆಯಲುಪಕ್ರಮಿಸಿದನು. ಅಷ್ಟರಲ್ಲಿ ಯಾರೋ ಅಳುತ್ತಿರುವುದು ಅವನಿಗೆ ಕೇಳಿಸಿತು. ಸ್ವರವು ಬಹಳ ಕ್ಷೀಣವಾಗಿದ್ದಿತು; ಮತ್ತು ಹೆಂಗಸಿನ ಸ್ವರದಂತಿತ್ತು. ದುರುಳರೋ ಸ್ತ್ರೀಯನ್ನಾರನ್ನೊ ಬಂಧಿಸಿರಬಹುದು, ಎಂದು ರಾಮುದಾಸನು ತರ್ಕಿಸಿದನು.

ಪುನಃ ರಮಣಿಯೋರ್ವಳ ಆರ್ತಧ್ವನಿಯು ಕೇಳಿಸಿತು ಯಾವ ದಿಕ್ಕಿನಿಂದ ಕೂಗುವ ಶಬ್ದವು ಕೇಳಿಸುತ್ತಿದೆಯೆಂದು ಅವನು ಪರಿಶೀಲಿಸಿದನು. ಆಗ ಅವನಿದ್ದ ಕೋಣೆಯ ಉತ್ತರ ದಿಕ್ಕಿನಿಂದ ಅಳುವ ಶಬ್ದವು ಕೇಳಿಸುತ್ತದೆಯೆಂದವನು ತಿಳಿದುಕೊಂಡನು. ಅಳುತ್ತಿರುವ ಸ್ತ್ರೀಯು ಆರಾಗಿರಬಹುದು? ಎಂದವನು ಚಿಂತಿಸುತ್ತಿರಲು ಅವನಿಗೆ ಆಗ ಏನೋ ನೆನ

ವಾಯಿತು. ಜಾನ್‌ಸಾಹುಕಾರರ ಪತ್ನಿ ಸಿಲಿಯುಳನ್ನು ದಸ್ಯುಗಳಾರೋ ಅಪಹರಿಸಿದ್ದರಷ್ಟೆ! ಹಾಗಾದರವಳನ್ನು ಇಲ್ಲಿಯೇ ಬಂಧಿಸಿರಲೂ ಬಹುದು! ಹೇಗಾದರೂ ಮಾಡಿ ಅಳುತ್ತಿರುವ ರಮಣಿಯಾರೆಂದು ತಿಳಿಯಲು ಅವನು ಕುತೂಹಲಪಟ್ಟನು. ಅನಂತರವನು ಉತ್ತರದಿಕ್ಕಿನ ಗೋಡೆಯಲ್ಲಿ ಏನಾದರೂ ಬಿರುಕುಗಳಿವೆಯೋ? ಎಂದು ಪರೀಕ್ಷಿಸುತ್ತಿರಲು, ದೈವವಶಾತ್ ಒಂದು ಮುಳ್ಳಿನಂತಿರುವುದು ಅವನ ಕೈಗೆ ತಾಕಿತು. ಅವನದನ್ನು ಹಿಂದಕ್ಕೆ ಜಗ್ಗಿದನು; ಆದರೆ ಏನೂ ಪ್ರಯೋಜನವಾಗಲಿಲ್ಲ. ಅನಂತರ ಬದಿಗೆ ನೂಕಿದಾಗ ಅವನು ನಿಂತಿದ್ದ ನೆಲವು ಕುಸಿದು ಕೆಳಗೆ ಬಿದ್ದಂತೆ ಅವನಿಗೆ ಭಾಸವಾಯಿತು. ಆಗವನು ಈ ಮನೆಯಲ್ಲಿ ಸ್ಪ್ರಿಂಗ್‌ಗಳ ಜೋಡಣೆಯಿರಬಹುದಾಗಿದೆಯೆಂದು ತಿಳಿದನು. ಅವನು ಕುಸಿದು ಕೆಳಗೆ ಬಿದ್ದಲ್ಲಿ ಪುನಃ ಅರಸುತ್ತಿರಲು, ಒಂದು ಕೊಂಡಿಯು ಅವನಿಗೆ ಸಿಕ್ಕಿತು. ಅದನ್ನವನು ಬದಿಗೆ ಸರಿಸಿದರೂ ಏನೂ ವ್ಯತ್ಯಾಸವಾಗದಿರಲು ಅದನ್ನವನು ಹಿಂದಕ್ಕೆ ಜಗ್ಗಿದನು. ಆಗ ಅಲ್ಲಿ ಒಂದು ಬಾಗಿಲುಂಟಾಯಿತು. ಅವನಾ ಬಾಗಿಲಿನಲ್ಲಿ ಮುಂದಿನ ಕೋಣೆಗೆ ಹೋಗಿ ಅಲ್ಲಿ ಇರುವ ಕೊಂಡಿಯೊಂದನ್ನೊತ್ತಿದನು. ಆಗ ಬಾಗಿಲು ಮಾಯವಾಗಿ ಮೊದಲಿದ್ದಂತೆ ಗೋಡೆಯುಂಟಾಯಿತು. ಆ ಕೋಣೆಯಲ್ಲೇನಿರುವದೆಂದು ಅವನು ಹುಡುಕುತ್ತಿರಲು, ಮೆಟ್ಟಲುಗಳು ಅವನ ಕೈಗಳಿಗೆ ತಗಲಿದುವು. ಅವನು ಆ ಮೆಟ್ಟಲುಗಳಲ್ಲಿ ಮೇಲೇರಿ ಹೋದಾಗ ಎದುರಿಗೆ ಅಡ್ಡವಾಗಿ ಗೋಡೆ ಸಿಕ್ಕಿತು. ಅಲ್ಲೊಂದು ಆಣಿಯಿದ್ದಿತು. ಅದನ್ನು ದೂಡಿದಾಗ ದ್ವಾರಉಂಟಾಯಿತು. ಅನಂತರವನು ಮೇಲೇರಿ ಬಂದು ಬೇರೊಂದು ಕೋಣೆಗೆ ಬಂದನು. ಅಲ್ಲಿಯ ಆಣಿಯನ್ನೊತ್ತಿದಾಗ ಮೊದಲುಂಟಾದ ದ್ವಾರವು ಮಾಯವಾಯಿತು.

ಆ ಕೋಣೆಯನ್ನು ಕಂಡು ರಾಮದಾಸನು ಚಕಿತನಾದನು. ಆ ಕೋಣೆಯಲ್ಲಿ ಒಂದು ಮಂಚವಿದ್ದಿತು. ಅದರಲ್ಲಿ ಹಂಸತೂಲಿಕಾತಲ್ಪದಿಂದ ಮಾಡಿದ ಹಾಸಿಗೆಯು ಹಾಸಲ್ಪಟ್ಟಿದ್ದಿತು. ಮಂಚದಲ್ಲಿ ಕುಳಿತುಕೊಂಡು ಸುಂದರಾಂಗಿಯಾದ ತರುಣಿಯೋರ್ವಳು ಅವನತ ವದನಳಾಗಿ ರೋದಿಸುತಿದ್ದುದನ್ನು ಕಂಡನು. ಶರತ್ಕಾಲದ ಚಂದ್ರಿಕೆಯಂತೆ ಅಲ್ಲಿ ವಿದ್ಯುತ್ ಪ್ರಕಾಶವಿದ್ದಿತು ಆ ಕೋಣೆಯಲ್ಲಿ ಒಂದು ಬಣ್ಣಬಣ್ಣದ ಬಟ್ಟೆ

ಯಿಂದಾಚ್ಛಾದಿತವಾದ ಮೇಜಿದ್ದಿತು. ಅದರ ಎದುರುಗಡೆಯಲ್ಲಿ ಎರಡು ಕುರ್ಚಿಗಳಿದ್ದುವು. ಗೋಡೆಗಳಲ್ಲಿ ಅನೇಕ ಪಾಶ್ಚಾತ್ಯ ಸುಂದರ ಸ್ತ್ರೀ ಪುರುಷರ ಹಾವಭಾವಗಳು ಮೂಡಿರುವ ಚಿತ್ರಪಠಗಳಿದ್ದುವು ಒಂದು ಕಪಾಟಿನಲ್ಲಿ ಸುಗಂಧ ದ್ರವ್ಯವೂ ವೈನೂ ಇದ್ದಿತು ಮತ್ತೊಂದು ಕಪಾಟಿನಲ್ಲಿ ಅನೇಕ ಪತ್ತೆದಾರಿ ಐತಿಹಾಸಿಕ ಕತೆ ಕಾದಂಬರಿಗಳ ಪುಸ್ತಕಗಳೂ ಮತ್ತು ಪತ್ರಿಕೆಗಳೂ ಇದ್ದುವು. ತರುಣಿಯು ದುಃಖಿತೆಯಾಗಿ ರೋದಿಸುತಿದ್ದುದರಿಂದ ರಾಮದಾಸನು ಬಂದುದು ಅವಳಿಗೆ ಗೊತ್ತಾಗಲಿಲ್ಲ. ಅಲ್ಲಿ ನೆಲದಲ್ಲಿ ಅನೇಕ ಸಿಗರೇಟಿನ ತುಂಡುಗಳು ಬಿದ್ದಿದ್ದುದರಿಂದ ಯಾರೋ ಪುರುಷರು ಈ ಕೋಣೆಗೆ ಬಂದು ಹೋಗಿದ್ದಾರೆ ಎಂದವನು ತಿಳಕೊಂಡನು.

ಅನಂತರ ರಾಮದಾಸನು ತರುಣಿಯ ಹತ್ತಿರ ಹೋಗಿ ನೀವು ಅಳುತ್ತಿರುವುದು ಯಾಕಾಗಿ? ಎಂದು ಪ್ರಶ್ನಿಸಿದನು ಯಾರೋ ದುಷ್ಟರು ತನ್ನ ಬಳಿಗೆ ಬಂದರೆಂದು ಆ ಸುರಸುಂದರಿಯು ಸಿಂಹನನ್ನು ಕಂಡ ಹರಿಣೆಯಂತೆ ಕಂಗೆಟ್ಟಳು. ಮುಖವನ್ನೇ ಮೇಲಕ್ಕೆತ್ತದಿರಲು, ರಾಮದಾಸನು ನೀನು ಭಯಪಡಬೇಕಾದುದಿಲ್ಲ. ನಿನಗೆ ನನ್ನಿಂದ ಏನಾದರೂ ಸಹಾಯ ಬೇಕಾದರೆ ಮಾಡುವೆನು. ನಾನು ದುಷ್ಟರಿಂದ ಈ ದಿನ ಪಕ್ಕದ ಕೋಣೆಯಲ್ಲಿ ಬಂಧಿಸಲ್ಪಟ್ಟವನೆಂದನು. ಆಗಾ ಸುಂದರಿಯು ತಾವಾರು? ಎಂದು ಮೆಲ್ಲನೆ ಕೋಕಿಲ ಕಂಠದಲ್ಲಿ ಕೇಳಿದಳು. ಆಗವನು ನಾನು ಪತ್ತೆದಾರಿ ಕರಮಚಂದನ ತಮ್ಮನಾದ ರಾಮದಾಸನೆಂದು ಹೇಳಿದನು. ಆಗ ತರುಣಿಯು ಭಯದಿಂದ ಬಿಡಲ್ಪಟ್ಟು, ನಿಮ್ಮನ್ನು ದುಷ್ಟರು ಯಾಕಾಗಿ ಬಂಧಿಸಿದರು? ಮತ್ತು ನೀವು ಈ ಕೋಣೆಗೆ ಹೇಗೆ ಬಂದಿರಿ? ಎಂದು ಕೇಳಿದಳು ರಾಮದಾಸನು ನಡೆದ ಸಂಗತಿಯನ್ನೆಲ್ಲ ಅರುಹಿದನು. ತದನಂತರ ಅವನು ನೀನಾರು? ಎಂದು ಕೇಳಿದಾಗ, ಅವಳು ನಾನು ಸಿಲಿಯಾಳೆಂದಳು ರಾಮದಾಸನಾಗ ಜಾನ್‌ರ ಪತ್ನಿಯಾದ ಸಿಲಿಯಾಳೆಂದರೆ ನೀನೇಯೊ?ಎಂದು ಕೇಳಿದಾಗ ಅವಳು ಹೌದೆಂದಳು. ಅನಂತರವನು ನೀನು ಹೇಗೆ ಬಂಧಿಸಲ್ಪಟ್ಟಿರುವಿ? ಎಂದು ಪ್ರಶ್ನಿಸಲು, ಸಿಲಿಯಾಳು ಹೇಳಲಾರಂಭಿಸಿದಳು:— ನಾನು ನನ್ನ ಶಯನಾಗಾರದಲ್ಲಿ ನಿದ್ರಿಸಿದ್ದೆನು. ರಾತ್ರಿ ದುಷ್ಟರಾರೋ ನಮ್ಮ ಮನೆಗೆ ಬಂದರು. ಅವರು ಯಾವ ರೀತಿಯಲ್ಲಿ ನನ್ನ ಕೋಣೆಗೆ ಬಂದರೆಂದು ನನಗೆ ನಿದ್ರೆಬಂದಿದ್ದುದರಿಂದ ತಿಳಿಯಲಿಲ್ಲ. ಫಕ್ಕನೆ ಹಣೆಗೆ ಏನೋ ಬಿದ್ದಂ

ತಾಗಿ ತಣ್ಣಗಾಯಿತು; ಆಗ ನನಗೆ ಸ್ಮೃತಿತಪ್ಪಿರಬೇಕು. ಅನಂತರ ಆ ದುಷ್ಟರು ನನ್ನನ್ನು ಯಾವ ರೀತಿಯಲ್ಲಿ ಇಲ್ಲಿಗೆ ತಂದರೋ ನನಗರಿಯದು, ಎಂದು ಹೇಳಿ ಅಳಲುಪಕ್ರಮಿಸಿದಳು. ರಾಮದಾಸನಾಗ ಸಮಾಧಾನ ಪಡಿಸಿದನು. ಅನಂತರವಳು ಮುಂದುವರಿಸಿದಳು. ನನಗೆ ಎಚ್ಚರವಾದಾಗ ನಾನೀ ಕೋಣೆಯಲ್ಲಿ ಹಾಸಿಗೆಯಲ್ಲಿದ್ದೆನು. ದಾದಿಯೊಬ್ಬಳು ಬೀಸಣಿಗೆ ಯಲ್ಲಿ ಗಾಳಿ ಹಾಕುತಿದ್ದಳು. ನಾನವಳೊಡನೆ ನನ್ನನ್ನು ಇಲ್ಲಿ ಬಂಧಿಸಿಟ್ಟಿ ವರು ಯಾರೆಂದು ಕೇಳಿದೆನು ಆಗವಳು ನಿನ್ನನ್ನು ಬಂಧಿಸಲಿಲ್ಲ. ನೀನಿನ್ನು ನಮ್ಮ ಯಜಮಾನರಾದ ಚೋರ ಸಾರ್ವಭೌಮರ ರಾಣಿಯಾಗಿ ಮೆರೆಯು ತಕ್ಕವಳು; ಮತ್ತು ಏನೇನೋ ಹೇಳಿದಳು. ಆಗ ನನಗೆ ಸಿಟ್ಟು ಬರಲು, ಪುನಃ ಸ್ಮೃತಿತಪ್ಪಿ ಬಿದ್ದೆನು. ಸ್ವಲ್ಪ ಸಮಯದಲ್ಲಿ ಎಚ್ಚರವಾದಾಗ ಆಜಾನುಬಾಹುವಾದ ವ್ಯಕ್ತಿಯೊಬ್ಬನು ಕುರ್ಚಿಯಲ್ಲಿ ಕುಳಿತಿದ್ದು ಸಿಗ ರೇಟ್ ಸೇದುತಿದ್ದನು, ಎಂದಳು.

ಆಗ ರಾಮದಾಸನು ಅದಾರು? ಎಂದು ಕೇಳಲು ಸಿಲಿಯಳು ಅದು ನನಗೆ ಗೊತ್ತಿಲ್ಲ ಆ ವ್ಯಕ್ತಿಯು ವಿಕಟವಾಗಿ ನಕ್ಕನು. ಅವನು ಕೃತಕ ಗಡ್ಡಮೀಸೆಯನ್ನು ಕಟ್ಟಿದ್ದನು. ತಲೆಯಲ್ಲಿ ಹೇಟ್ ಇದ್ದಿತು. ಅವನು ತನ್ನ ಪರಿಚಯವು ಅದಾರಿಗೂ ಹತ್ತಬಾರದೆಂದು ಎಚ್ಚರಿಕೆಯಿಂದಿದ್ದು ಅದಾವುದೋ ಬೇರೆ- ಸ್ವರದಿಂದವನು ಮಾತನಾಡುತ್ತಿರುವನು. ಅವನು ನನ್ನೊಡನೆ ನೀನು ಜಾನ್‌ರೊಟ್ಟಿಗೆ ಇರುವುದು ಬೇಡ; ನನ್ನ ರಾಣಿಯಾಗು. ನಿನಗೆ ನನ್ನ ಸರ್ವಸ್ವವನ್ನು ಅರ್ಪಿಸುವೆನೆಂದನು. ನಾನಾಗ ಎಲೆ! ಮಾನವ ಸ್ವರೂಪಿಯಾದ ಸೈತಾನನೆ! ತೊಲಗಿಲ್ಲಿಂದ ಎಂದು ಗರ್ಜಿಸಿದೆನು. ಆಗ ಆ ವ್ಯಕ್ತಿಯು ಪುನಃ ವಿಕಟವಾಗಿ ನಕ್ಕು ನನ್ನ ಉದ್ದೇಶದಂತೆ ನಾನು ಮಾಡುವೆನು. ನನ್ನ ಮನಸ್ಸಿಗೆ ವಿರೋಧವಾಗಿ ನಡೆದ ಯಾವ ನರ ಹುಳುವೂ ಇಡೀ ವಿಶ್ವದಲ್ಲಿ ಒಂದು ಕ್ಷಣ ಸಹ ಬಾಳಲಾರದು. ನಾನು ನಾಳೆ ಬರುವೆನೆಂದು ಹೇಳಿ ಹೊರಟು ಹೋದನು. ಸ್ವಲ್ಪ ಹೊತ್ತಿನಲ್ಲಿ ಮೊದಲಿದ್ದ ದಾದಿಯು ಪುನಃ ಈ ಕೋಣೆಗೆ ಬಂದಾಗ ನಾನವಳನ್ನು ಕಣ್ಣೆತ್ತಿ ಸಹಾ ನೋಡಲಿಲ್ಲ. ಆಗ ಅವಳು ನಮ್ಮ 'ಚೋರ ಸಾರ್ವಭೌಮ'ರ ಗುಣವು ಬಹಳ ಶ್ಲಾಘನೀಯವಾದುದು. ನೀನವರನ್ನು ವರಿಸು, ಎಂದು ಉಪದೇಶಿಸಲು ಪ್ರಾರಂಭಿಸಿದಳು. ನಾನವಳೊಡನೆ ಆಗ ಎಲೆ! ಪಾಪಿ

ಸ್ತ್ರೀಯೆ! ನನ್ನೆದುರಿನಲ್ಲಿ ಆ ನಿನ್ನ ನೀಚ ಯಜಮಾನನ ವಿಷಯವೆತ್ತಿದರೆ ಎಚ್ಚರಿಕೆ! ನಿನ್ನಂತಹ ನೀಚ ಸ್ತ್ರೀಯರು ಲೋಕದಲ್ಲಿ ಇರಲೇಬಾರದು. ಪರರ ಅನ್ನಕ್ಕಾಗಿ ಬಾಯ್ಬಿಟ್ಟಿರುವ ನಿನ್ನಂತಹ ಹೆಂಗಸರು ನಿಂದಾರ್ಹರು. ತೊಲ ಗಿಲ್ಲಿಂದ, ಎಂದಾಗ ಅವಳು ನನ್ನನ್ನು ಸಿಟ್ಟಿನಿಂದ ದುರದುರನೆ ನೋಡಿ ನಿನಗೆ ಬುದ್ಧಿಗಲಿಸುವೆನೆಂದು ಹೇಳಿ ಹೊರಟು ಹೋದಳು, ಎಂದಳು.

ಈ ದಿನ ಪುನಃ ಆ ನೀಚ ಚೋರ ಸಾರ್ವಭೌಮ ಎಂಬ ಗುಪ್ತನಾಮ ದಿಂದಿರುವ ವಂಚಕನು ಬಂದು ನನ್ನೊಡನೆ ಮಾತನಾಡಲು ಪ್ರಾರಂಭಿಸಿ ದನು. ನಾನವನೊಡನೆ ಮಾತನಾಡಲಿಲ್ಲ. ಆಗವನು ನನ್ನೊಡನೆ ಇನ್ನು ಮೂರು ದಿವಸ ನಿನ್ನನ್ನು ಹೀಗೆಯೇ ಬಿಟ್ಟಿರುತ್ತೇನೆ. ಅನಂತರ ಬಲಾತ್ಕಾರ ವಾಗಿ ನಿನ್ನ ಶರೀರಸುಖವನ್ನನುಭವಿಸುವೆನು; ಇಲ್ಲವಾದರೆ ಚಿತ್ರಹಿಂಸೆಗೆ ಗುರಿಪಡಿಸಿ ನಿನ್ನನ್ನು ನಾಶಪಡಿಸುವೆನು, ಎಂದು ಹೇಳಿ, ಒಂದು ಆಣಿ ಯನ್ನೊತ್ತಿದನು. ಆಗ ಕಂಡ ಭಯಂಕರ ದೃಶ್ಯವನ್ನು ಕಂಡು ನಾನು ಚೀರಿದೆನು, ಎಂದು ಸಿಲಿಯಳು ಹೇಳಿದಾಗ ರಾಮದಾಸನು ಆ ಆಣಿಯೆಲ್ಲಿದೆ? ಎಂದನು. ಅವಳು ಆ ಆಣಿಯನ್ನು ತೋರಿಸಲು, ಅವನಾ ಆಣಿಯನ್ನೊತ್ತಿ ದನು. ಆಗ ಒಂದು ದ್ವಾರ ಉಂಟಾಯಿತು. ಆ ದ್ವಾರದಲ್ಲಿ ಕನ್ನಡಿಯಿತ್ತು. ಕನ್ನಡಿಯಲ್ಲಿ ನೋಡುವಾಗ ಒಳಗಿನ ದೃಶ್ಯವು ಕಾಣಿಸುತಿತ್ತು. ಆ ಕೋಣೆಯಲ್ಲಿ ಒಂದು ಅದ್ಭುತ ಯಂತ್ರವಿದ್ದಿತು. ಅದರ ಒಂದು ಕೊಳವೆ ಯಲ್ಲಿ ರಕ್ತ ಸುರಿದು ಕೆಂಪಾಗಿದ್ದು ಭಯಾನಕವಾಗಿ ತೋರುತಿತ್ತು. ಆಗ ಸಿಲಿಯಳು ಹೇಳಲು ಪ್ರಾರಂಭಿಸಿದಳು. ಆ ನೀಚನು ಈ ಯಂತ್ರವನ್ನು ತೋರಿಸಿ, ತನ್ನ ವೈರಿಗಳನ್ನು ತಾನೀ ಯಂತ್ರಕ್ಕೆ ಆಹುತಿಯಾಗಿ ಮಾಡುವೆ ನೆಂದು ಹೇಳಿ, ಆ ಆಣಿಯನ್ನು ಎಳೆದಾಗ ದ್ವಾರವು ಮಾಯವಾಗಿ ಗೋಡೆ ಯುಂಟಾಯಿತು. ಇದೊಂದು ಪಿಶಾಚಿಗಳ ಮನೆಯಂತೆ ನನಗೆ ಕಾಣುತ್ತದೆ ಎಂದಳು. ಅನಂತರ ಅವಳು ದೈನ್ಯದಿಂದ ಹೇಗಾದರೂ ಮಾಡಿ ನನ್ನನ್ನಿ ಲ್ಲಿಂದ ಕರೆದುಕೊಂಡು ನನ್ನ ಮನೆಗೆ ಮುಟ್ಟಿಸಬೇಕೆಂದು ರಾಮದಾಸ ನೊಡನೆ ಹೇಳಿದಳು. ರಾಮದಾಸನು ಅವಳೊಡನೆ ನಾನು ಯಾವುದಾದ ರೊಂದು ಉಪಾಯವನ್ನು ಆಲೋಚಿಸುತ್ತೇನೆ, ಎಂದು ಹೇಳಿದನು. ಅನಂ ತರವನು ಸಿಲಿಯಳೊಡನೆ ನನಗೀಗ ಒಂದು ಉಪಾಯ ಕಾಣುತ್ತದೆ. ಏನೆಂ ದರೆ, ನಿನಗೆ ಆಹಾರವನ್ನು ಕೊಡಲು ದಾದಿಯರು ಬರುತ್ತಾರಷ್ಟೆ! ಆಗ

ಇಲ್ಲಿಗೆ ಬಂದವಳನ್ನು ನಾನು ಹಿಡಿದು ಅವಳ ಬಾಯಿಗೆ ವಸ್ತ್ರ ತುರುಕು ವೆನು. ನೀನವಳ ಸೆರಗನ್ನು ನಿನ್ನ ಮೇಲೆ ಹೊದೆದುಕೊಂಡು ಅವಳು ಬಂದ ದಾರಿಯಲ್ಲಿ ಹೊರಗೆ ಹೋಗು. ಅನಂತರ ನಾನು ಹೇಗಾದರೂ ಬರುವೆನೆಂದನು ಸಾಧಾರಣ ಬೆಳಿಗ್ಗೆ ಆರುಗಂಟೆಗೆ ದಾದಿಯೊಬ್ಬಳು ಕೈಯಲ್ಲಿ ಏನೋ ಹಿಡಿದುಕೊಂಡು ಆ ಕೋಣೆಗೆ ಬರುತ್ತಿರುವಾಗ ಅವಳ ಕಾಲ ಸಪ್ಪಳ ಕೇಳಿ ರಾಮದಾಸನು ಮಂಚದಡಿಯಲ್ಲಿ ಅಡಗಿದನು.

ದಾದಿಯೋರ್ವಳು ಕೈಯಲ್ಲಿ ಉಪಾಹಾರಕ್ಕೆ ಬೇಕಾದ ತಿಂಡಿಗಳನ್ನು ಹಿಡಿದುಕೊಂಡು ಬಂದು ಗೋಡೆಯಲ್ಲಿ ದ್ವಾರವನ್ನುಂಟುಮಾಡಿ ಸಿಲಿಯು ಇದ್ದ ಕೋಣೆಗೆ ಬಂದು ಆ ತಿಂಡಿಗಳನ್ನು ಮೇಜಿನ ಮೇಲಿಟ್ಟು ಹೊರಡ ಲುದ್ಯುಕ್ತಳಾದಾಗ ರಾಮದಾಸನು ಫಕ್ಕನೆ ಹಾರಿ ಅವಳ ತಲೆಗೂದಲನ್ನು ಹಿಡಿದು ಅವಳ ಬಾಯಿಗೆ ಬಟ್ಟೆ ತುರುಕಿದನು. ಅಕಸ್ಮಾತ್ತಾಗಿ ತನ್ನನ್ನು ಅಪಾಯಕ್ಕೀಡುಮಾಡಿದವರಾರೆಂದು ಆ ಸೇವಕಿಗೆ ಗೊತ್ತಾಗದೆ ತಬ್ಬಿಬ್ಬಾಗಿ ನೋಡುತ್ತಿರಲು ಸಿಲಿಯುಳು ಆ ದಾದಿಯ ಮೈಮೇಲಿದ್ದ ಮಾಸಿದ ಸೀರೆ ಯನ್ನು ತೆಗೆದು ತಾನುಟ್ಟುಕೊಂಡು ಅವಳು ಬಂದದ್ವಾರದಲ್ಲಿ ಹೊರಟು ಹೋದಳು ಅವಳು ಹೋದ ಸ್ವಲ್ಪ ಸಮಯದಲ್ಲಿ ರಾಮದಾಸನು ಸೇವಕಿ ಯನ್ನು ಮಂಚದ ಕಾಲಿಗೆ ತನ್ನಲ್ಲಿರುವ ಬಟ್ಟೆಯಿಂದ ಕಟ್ಟಿಹಾಕಿ, ಸಿಲಿ ಯಳು ಹೋದ ದಾರಿಯಲ್ಲಿ ಹೋದನು. ಆಗ ಸಾಧಾರಣ ಬೆಳಿಗ್ಗೆ ಆರೂ ಮುಕ್ಕಾಲು ಗಂಟೆಯಾಗಿರಬಹುದು. ಸಿಲಿಯುಳು ಸೇವಕಿಯ ಬಟ್ಟೆಯ ನ್ನುಟ್ಟುಕೊಂಡು ಹೋದುದರಿಂದವಳನ್ನಾರೂ ತಡೆಯಲಿಲ್ಲ; ಆದರೆ ರಾಮ ದಾಸನು ಹೊರಟು ಹೋಗುವಾಗ ಹೊಟೆಲ್‌ನ ಸೇವಕನೊಬ್ಬನು ಅವ ನನ್ನು ತಡೆಯಲು, ಅವನು ಅವನ ಕಪಾಳಕ್ಕೇರಿಸಿ ಅಲ್ಲಿಂದ ಬೇಗನೆ ಹೊರಟು ಹೋದನು. ಅನಂತರವನು ಸಿಲಿಯುಳನ್ನು ಅವಳ ಮನೆಯಲ್ಲಿ ಬಿಟ್ಟು ತನ್ನ ಮನೆಗೆ ಬಂದನು.

ರಾಮದಾಸ ಮತ್ತು ಸಿಲಿಯು ಇವರು ಫರಾರಿಯಾದನಂತರ ಸ್ವಲ್ಪ ಹೊತ್ತಿನಲ್ಲಿ ಪಿಟ್ಟನು ರಾಮದಾಸನನ್ನು ಬಂಧಿಸಿದ ಕೋಣೆಗೆ ಬಂದನು. ಅವನು ಅಲ್ಲಿರಲಿಲ್ಲವಾದುದರಿಂದ ಪಿಟ್ಟನು ಸಿಲಿಯುಳ ಕೋಣೆಗೆ ಬಂದನು. ಅಲ್ಲಿ ಸಿಲಿಯುಳಿರುವ ಬದಲಾಗಿ ಸೇವಕಿಯು ಬಾಯಿಗೆ ವಸ್ತ್ರ ತುರುಕಲ್ಪಟ್ಟು ಮೇಜಿನ ಕಾಲಿಗೆ ಕಟ್ಟಲ್ಪಟ್ಟಿದ್ದಳು ಅವನು ಸಂಗತಿಯೇನೆಂದು ಸೇವಕಿ

ಯೊಡನೆ ವಿಚಾರಿಸಿದಾಗ ಅವಳು ನಡೆದ ವಿಷಯವನ್ನು ಹೇಳಿದಳು. ಅನಂತರವವೈಜ್ಞಾನಿಕನಾದ ಲೋಬೋನಲ್ಲಿ ಪೋಗಿ ಸಿಲಿಯಳನ್ನು ರಾಮದಾಸನು ಸೆರೆಯಿಂದ ಹಾರಿಸಿಕೊಂಡು ಹೋದನು, ಎಂದು ಹೇಳಿದನು. ರಾಮದಾಸನಿಗೆ ಸಿಲಿಯಳನ್ನು ಬಂಧಿಸಿದ ಕೋಣೆ ಹೇಗೆ ಗೊತ್ತಾಯಿತು? ಎಂದು ವಿಜ್ಞಾನಿಯು ಕೇಳಿದ. ಪಿಟ್ಟನು ಏನೊಂದುತ್ತರವನ್ನೂ ಕೊಡದಿರಲು ಲೋಬೋನು ಅವನನ್ನು ಚೆನ್ನಾಗಿ ಜರೆದರೂ ಪಿಟ್ಟನು ಪಿಟ್ ಎನ್ನಲಿಲ್ಲ. ಆವನು ದುಃಖಿತನಾಗಿ ವಿಶ್ರಾಂತಿ ಭವನಕ್ಕೆ ಬಂದು ಮಿತ್ರನಾದ ಮಾಧವನೊಡನೆ 'ತುಂಟ ಪೋರನು ಸಿಕ್ಕಿದ್ದನು;ಆದರೆ ಫರಾರಿಯಾದನು' ಎಂದನು.

## ಹೋಟೆಲ್‌ನಲ್ಲಿ

ವಾಚಕರೆ! ಕರಿಮುಚಂದನು ದೂರದ ಸಂಬಂಧಿಕನೋರ್ವನಲ್ಲಿ ಜರಗಲಿಕ್ಕಿರುವ ವಿವಾಹಕ್ಕೆ ಕಾಸರಗೋಡಿಗೆ ಹೋಗಿದ್ದನಷ್ಟೆ! ಅವನು ಈ ದಿನ ಬೆಳಗ್ಗೆ ಪೇಸೆಂಜರ್ ಟ್ರೈನ್‌ನಲ್ಲಿ ಮಂಗಳೂರಿಗೆ ಬಂದನು. ಅವನು ಮನೆಗೆ ತಲಪಿದಾಗ ರಾಮದಾಸನು ಸಹೋದರನ ದಾರಿಕಾಯುತ್ತಾ ಕುಳಿತಿರುವುದನ್ನು ಕಂಡನು. ರಾಮದಾಸನು ಸಹೋದರನೊಡನೆ ತಾನು ವೇಷ ಪಲ್ಲಟಿಸಿ ಹೋದುದು, ದಸ್ಯುಗಳಿಂದ ಬಂಧಿತನಾದುದು ಅನಂತರ ಸಿಲಿಯಳನ್ನು ಬಂದನದಿಂದ ಬಿಡಿಸಿ ಜಾನ್‌ರ ಮನೆಯಲ್ಲಿ ಬಿಟ್ಟುಬಂದ ಸಂಗತಿಯನ್ನೆಲ್ಲ ತಿಳಿಸಿದನು. ಅನಂತರ ಯಶವಂತನು ತನ್ನೊಡನೆ ವೇಷಾಂತರದಿಂದ ಬಂದಿದ್ದಾಗ ನೀಚರು ಅವನನ್ನು ಜಲ್ಲಿ ಕಲ್ಲಿನ ರಾಶಿಗೆ ದೂಡಿಹಾಕಿದ್ದರೆಂದೂ ಅವನು ಸ್ಮೃತಿತಪ್ಪಿ ಬಿದ್ದಿರುವನೆಂದೂ ಹೇಳಿ ಅನಂತರ ತಾನು ಈಗ ಸುಪರಿಡೆಂಟನು ಮನೆಗೆ ಬಂದಿರುವನೋ ಅಥವಾ ಬಿದ್ದಲ್ಲಿಯೇ ಇರುವನೋ ಎಂದು ನೋಡಿ ಬರುತ್ತೇನೆಂದು ಹೇಳಿ ಯಶವಂತಸಿಂಹನ ಮನೆಗೆ ಹೊರಟನು.

ರಾಮದಾಸನು ಯಶವಂತಸಿಂಹನ ಮನೆಗೆ ಬಂದಾಗ ಅವನು ತಲೆಗೆ ಬಟ್ಟೆಕಟ್ಟಿಕೊಂಡು ಆರಾಮ ಕುರ್ಚಿಯಲ್ಲಿ ಕುಳಿತಿದ್ದನು. ಇವನನ್ನು ಕಂಡು ಅವನು ಹರ್ಷದಿಂದ ನಾನು ಸ್ಮೃತಿತಪ್ಪಿ ಬಿದ್ದಬಳಿಕ ಏನು ಅನಾಹುತವಾಯಿತು? ಎಂದು ಕೇಳಿದನು ಆಗ ರಾಮದಾಸನು ಅದನ್ನು ಅ

ಮೇಲೆ ಹೇಳುವೆನಂತೆ ಮೊದಲು ನೀನು ಅಲ್ಲಿಂದ ಎಷ್ಟು ಸಮಯ ಕಳೆದು ಪ್ರಜ್ಞೆ ಬಂದು ಹೇಗೆ ಇಲ್ಲಿಗೆ ಬಂದಿರುವಿ? ಎಂದು ಪ್ರಶ್ನಿಸಿದನು. ಯಶವಂತನು, ನಾನು ಪ್ರಜ್ಞೆತಪ್ಪಿ ಬಿದ್ದು ಸ್ವಲ್ಪ ಸಮಯ ಕಳೆಯಲು ಯಾರೋ ಬಂದು ನನ್ನನ್ನು ಎತ್ತಿದರು. ಆಗ ನನಗೆ ಸ್ವಲ್ಪ ಪ್ರಜ್ಞೆ ಬಂದಿದ್ದಿತು. ಬಂದ ವ್ಯಕ್ತಿಯು ನನ್ನ ತಲೆಯಲ್ಲಿ ಹರಿಯುತ್ತಿರುವ ರಕ್ತವನ್ನೊರಸಿ, ತಲೆಗೆ ಬಟ್ಟೆಗಟ್ಟಿ ನೀವಾರು? ಎಂದು ಪ್ರಶ್ನಿಸಿದನು. ಆಗ ನಾನು ನನ್ನನ್ನು ಉಪಚರಿಸಿದ ವ್ಯಕ್ತಿಯ ಹತ್ತಿರ ನಾನು ಪೋಲೀಸ್ ಸುಪರಿಡೆಂಟ್. ನನ್ನನ್ನು ನೀಚರು ಈ ಜಲ್ಲಿಕಲ್ಲಿನ ರಾಶಿಗೆ ಕೆಡವಿ ಎತ್ತಲೋ ಹೋದರು ಎಂದೆನು. ಆಗ ಆ ವ್ಯಕ್ತಿಯು ಏನು? ನೀವು ಯಶವಂತ ಸಿಂಹನವರೆ! ನೀವು ಛದ್ಮವೇಷದಿಂದ ಇದ್ದುದರಿಂದ ನನಗೆ ಗುರತು ಹತ್ತಲಿಲ್ಲವೆಂದನು. ನಾನವನೊಡನೆ ನೀನಾರೆಂದು ಕೇಳಲು, ಅವನು ತಾನು ಗಸ್ತಿನವನೆಂದನು. ಅನಂತರವನು ನನ್ನನ್ನು ಇಲ್ಲಿ ತಂದು ಬಿಟ್ಟನು; ಎಂದು ಹೇಳಿದನು. ಅನಂತರವನು ನಿನ್ನ ವಿಷಯವನ್ನು ಹೇಳು, ಎಂದಾಗ ರಾಮದಾಸನು ಆ ಮೇಲೆ ದಸ್ಯುಗಳು ತನ್ನನ್ನು ಬಂಧಿಸಿ ಕತ್ತಲೆ ಕೋಣೆಯಲ್ಲಿಟ್ಟಿದನ್ನೂ, ಅಲ್ಲಿ ಸ್ಪ್ರಿಂಗ್‌ಗಳನ್ನೊತ್ತುವಾಗ ಕಂಡ ನಾನಾ ದೃಶ್ಯಗಳನ್ನೂ ಹೇಳಿ ಕಡೆಗೆ ಶಿಲಿಯಳನ್ನು ಉಪಾಯದಿಂದ ಬಂಧನದಿಂದ ಕರೆದುಕೊಂಡು ಬಂದ ವಿಷಯವನ್ನು ಹೇಳಿದನು ಆಗ ಯಶವಂತನು ದೈವವಶಾತ್ ಏನೂ ಅಪಾಯ ಉಂಟಾಗದೆ ಬಂದುದು ನಮ್ಮ ಪುಣ್ಯವೆಂದೂ ಅಲ್ಲದೆ ಶಿಲಿಯಳನ್ನೂ ಕಾಪಾಡಿದಂತಾಯಿತೆಂದೂ ಹೇಳಿದನು. ಅನಂತರ ರಾಮದಾಸನು ಅಲ್ಲಿಂದ ಜಾನ್‌ರ ಮನೆಗೆ ಹೋದನು

ಈ ದಿನ ರಾತ್ರಿ ಕರಮಚಂದನು ವಿಶ್ರಾಂತಿಭವನದ ಕಡೆಗೆ ಹೊರಟನು. ಅವನು ತನ್ನ ನಿತ್ಯದ ಉಡುಪಿನಲ್ಲಿಯೇ ಹೋದನು. ವಿಶ್ರಾಂತಿ ಭವನದ ಮೇನೇಜರ್ ಆದ ಮಾಧವನಿಗೆ ಅವನ ಪರಿಚಯವಿರಲಿಲ್ಲ. ಅವನು ಸೀದಾ ಆಫೀಸ್ ರೂಮ್‌ಗೆ ಹೋಗಿ, ನನಗೊಂದು ಸ್ಪೆಷಲ್‌ರೂಂ ಬೇಕೆಂದನು. ಮಾಧವನು ಮಾಳಿಗೆಯಲ್ಲಿನ ನಾಲ್ಕನೆಯ ನಂಬ್ರದ ಕೋಣೆಯನ್ನು ಇವರಿಗೆ ಕೊಡು, ಎಂದು ಸೇವಕನೊಡನೆ ಹೇಳಿದನು. ಕರಮಚಂದನು ರೂಮಿನ ಬಾಡಿಗೆಯೆಷ್ಟೆಂದು ಕೇಳಿದಾಗ ಮಾಧವನು ಮೂರೂವರೆ ರೂಪಾಯಿ ಎಂದನು. ಅದನ್ನು ಕೊಟ್ಟು ಪತ್ತೆದಾರಿಯು

ಕೋಣೆಗೆ ಹೋದನು. ಅವನು ಸಾಯಂಕಾಲ ಏಳೂವರೆ ಗಂಟೆಯಾಗಲು ಹನ್ನೆರಡಾಣೆಕೊಟ್ಟು ಊಟದ ಟಿಕೇಟನ್ನು ಮಾಧವನಿಂದ ಪಡೆದುಕೊಂಡು ಊಟದ ಮಂದಿರಕ್ಕೆ ಹೋದನು. ಊಟಕ್ಕಾಗಿ ಅನೇಕರು ಟೇಬಲ್‌ಗಳ ಎದುರಿನಲ್ಲಿ ಕುಳಿತಿದ್ದರು. ಅವನು ಅವರೊಡನೆ ಕುಳಿತುಕೊಳ್ಳಲು, ಅಡಿಗೆಯವನು ಬಾಳೆಯೆಲೆ ಕೊಟ್ಟು ಪಲ್ಯ ಮೊದಲಾದವುಗಳನ್ನು ಇಕ್ಕಲಾರಂಭಿಸಿದನು

ಅಷ್ಟರಲ್ಲಿ ಅಲ್ಲಿಗೆ ಕೊಯಿಲೋನೂ ಊಟಕ್ಕೆ ಬಂದನು. ಅವನು ಕರಿಮುಖಚಂದನ ಎದುರಿನ ಟೇಬಲ್‌ನ ಹತ್ತಿರ ಊಟಕ್ಕೆ ಕುಳಿತನು. ಕರಿಮುಚಂದನಿಗೆ ಅವನನ್ನು ಕಂಡು ಇವನೇ ಅದೊಂದು ದಿನ ವೈಜ್ಞಾನಿಕನ ಮನೆಗೆ ಕಳವು ಮಾಡಲು ಹೋಗಿ ಕೃತಕಾರ್ಯನಾಗದೆ ಹಿಂದಕ್ಕೆ ಮರಳಿದವನು ಎಂದು ಗೊತ್ತಾಯಿತು. ಕೊಯಿಲೋನಿಗೆ ಅವನನ್ನು ಪತ್ತೆಹಚ್ಚಲಾಗಲಿಲ್ಲ. ಕೊಯಿಲೋನು ಊಟಮಾಡುತ್ತಿದ್ದಾಗ ದಾಂಢಿಗನಾದ ಬೇರೊಬ್ಬ ವ್ಯಕ್ತಿಯು ಬಂದು ಅವನ ಬಳಿ ಕುಳಿತನು. ಅವನನ್ನು ಕಂಡು ರಾಮದಾಸನು ಹೇಳಿದಂತೆ ಇರಾಣಿಯವನಂತೆ ಡ್ರೆಸ್‌ಮಾಡಿ ಆಭರಣಗಳನ್ನು ವಿಕ್ರಯಿಸಲು ಹೋದವನು ಇವನೇ ಆಗಿರಬೇಕು ಎಂದೂಹಿಸಿದನು. ಅವರು ಮಾತನಾಡುತ್ತಿದ್ದಾಗ ಏನಾದರೂ ರಹಸ್ಯವು ಹೊರಬೀಳುತ್ತದೆಯೋ ಎಂದು ಕರಿಮುಚಂದನು ನೋಡುತ್ತಿದ್ದನು. ಊಟವಾದನಂತರ ಎಲ್ಲರೂ ಕೈತೊಳೆದುಕೊಳ್ಳುತ್ತಿರಲು, ಪತ್ತೆದಾರಿಯು ಮೇಲೆ ಹೇಳಿದ ವ್ಯಕ್ತಿಗಳ ಕಡೆಗೆ ಚೆನ್ನಾಗಿ ದೃಷ್ಟಿಯಿಟ್ಟನು. ಅನಂತರ ಕೊಯಿಲೋನು ಮಿಸ್ಟರ್ ಪಿಟ್ಟ್, ನಾವು ಮಾಳಿಗೆಗೆ ಹೋಗುವಾ ಎಂದನು. ಬಳಿಕ ಅವರು ಮಾಳಿಗೆಗೆ ಹೋದರು. ಪತ್ತೆದಾರಿಯು ಮಾಳಿಗೆಗೆ ಹೋಗಿ ನಾಲ್ಕನೆಯ ನಂಬ್ರದ ಕೋಣೆಯಲ್ಲಿ ಕುಳಿತನು. ಮೇಲೆ ಹೇಳಿದ ವ್ಯಕ್ತಿಗಳು ಅದೊಂದು ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡರು. ಅವರು ಏನೋ ಮಾತನಾಡುತ್ತಿರಲು ಕರಿಮುಚಂದನು ಶಬ್ದಮಾಡದೆ ಬಾಗಿಲಿನ ಬಳಿ ನಿಂತು ಅವರ ಸಂಭಾಷಣೆಯನ್ನು ಕೇಳುತ್ತಿದ್ದನು. ಅವರು ಈ ರೀತಿ ಮಾತನಾಡುತ್ತಿದ್ದರು:—

ಒಬ್ಬ—ಮಿ. ಪಿಟ್ಟ್, ನಾನು ಆವತ್ತು ಲೋಬೋನ ಮನೆಗೆ ಕೃತಕ ವೇಷವನ್ನು ಧರಿಸಿಕೊಂಡು ಹೋಗಿದ್ದಾಗ ಬೈರಾಗಿ ವೇಷಧಾರಿಯಾದ

ಕರಮುಚಂದನು ನನ್ನನ್ನನುಸರಿಸಿ ಉದ್ಯಾನದಲ್ಲಿ ಅಡಗಿಸಿಂತಿದ್ದನು; ಆದರೆ ದೈವವಶಾತ್ ಅವನು ಏನೋ ಶಬ್ದಮಾಡಲು ನಾನವನನ್ನು ಕಂಡ್ಕು ಅಲ್ಲಿಂದ ಹಿಂದಿರುಗಿ ಬಂದೆನು. ಆಗವನು ನನ್ನನ್ನನುಸರಿಸಿ ಬಂದು-ಲೋಬೋನ ಮನೆಯಿಂದ ಕಳವು ಮಾಡಲು ಬಂದು ಕೃತಕಾರ್ಯನಾಗದೆ ಹಿಂದಿರುಗುತ್ತೀಯಾ? ಎಂದು ಹೇಳಿ ನನ್ನನ್ನು ಗದರಿಸಿದನು. ನನ್ನನ್ನವನು ಬಲವಾಗಿ ಹಿಡಿದು ನನ್ನ ಕಿಸೆಯಲ್ಲಿದ್ದುದನ್ನು ಅವನು ಅಪಹರಿಸಿದನು. ಆಗ ನಾನು ಹೇಗಾದರೂ ಅವನ ಕೈಯಿಂದ ತಪ್ಪಿಸಿ ಫರಾರಿಯಾದೆನು.

ಪಿಟ್ಟ—ಮಿ. ಕೊಯಿಲೊ, ನಿನ್ನ ಚತುರತೆಯು ಹೊಗಳತಕ್ಕದ್ದೇ. ಆ ಪತ್ರದಲ್ಲೇನಿದ್ದಿತು?

ಕೊಯಿಲೊ—ಸಿಲಿಯುಳನ್ನು ಅಪಹರಿಸಲು ಚೋರ ಸಾರ್ವಭೌಮನು ನಮಗೆ ಕೊಟ್ಟ ಕಾಗದವಾಗಿದ್ದಿತದು; ಆದರೆ ಪತ್ರಬರೆದ ಮೇಲೆ ಅಕ್ಷರಗಳನ್ನು ಕಾಣದಂತೆ ಮಾಡುವ ದ್ರವವನ್ನು ಹಚ್ಚಿದ್ದರಿಂದ ಕರಮುಚಂದನಿಗದನ್ನು ಓದಲಿಕ್ಕೆ ಸಾಧ್ಯವಾಗಲಿಕ್ಕಿಲ್ಲ.

ಪಿಟ್ಟ—ಆದಿರಲಿ. ಅವನ ತಮ್ಮನಾದ ರಾಮದಾಸನನ್ನು ನೋಡಿದ್ದರೂ ಇದುವರೆಗೆ ಅವನನ್ನು ನಾನು ನೋಡಲೇ ಇಲ್ಲವಲ್ಲ!

ಕೊಯಿಲೊ—ಹೋಗಲಯ್ಯ ಬಿಡು. ಆಗ ನಮ್ಮೆದುರಿನಲ್ಲಿ ಕುಳಿತು ಊಟ ಮಾಡುತಿದ್ದವನಾರು?

ಪಿಟ್ಟ—ಅವನು ಪರಸ್ಥಳದ ಸಭ್ಯಗೃಹಸ್ಥನಾಗಿರಬೇಕು. ಆ ರಾಮದಾಸನು ಬಲಿಷ್ಠನು. ಧೂರ್ತನಾದ ಆತನು ತಾನು ಫರಾರಿಯಾದುದಲ್ಲದೆ ಆ ಸಿಲಿಯುಳನ್ನೇ ಹಾರಿಸಿಕೊಂಡು ಹೋದನಲ್ಲ! ಅಬ್ಬಾ! ಇನ್ನು ಆ ಕರಮುಚಂದನು ಎಂತಹ ಧೂರ್ತಶಿಖಾಮಣಿಯೋ?

ಕೊಯಿಲೊ—ಇಂತಹವರೆಲ್ಲ ನಮ್ಮ ಚೋರ ಸಾರ್ವಭೌಮನಿಗೆ ಎಣೆಯೇ! ಇವರ ಸಂಭಾಷಣೆಯಿಂದ ಪತ್ತೆದಾರಿಗೆ ಚೋರ ಸಾರ್ವಭೌಮನೆಂದರೆ ಆರೆಂಬದು ತಿಳಿಯಲಿಲ್ಲ. ಅನಂತರವನು ತನ್ನ ಕೋಣೆಗೆ ಬೀಗ ಹಾಕಿ ಮಾಳಿಗೆಯಿಂದ ಕೆಳಗಿಳಿದು ರಾಮದಾಸನು ಹೇಳಿದ ಹತ್ತನೆಯ ನಂಬ್ರದ ಕೋಣೆಯ ಪಕ್ಕದ ಕೋಣೆಗೆ ಹೋಗಿ ಮಂಚವನ್ನು ಎಳೆದನು. ಅನಂತರ ಕೊಂಡಿಯನ್ನು ತಿರುಗಿಸಿ ಸೋಪಾನಗಳಲ್ಲಿ ಕೆಳಗಿಳಿದು ಹೋದನು. ಅವನು ಕೈಯಲ್ಲಿ ಟೊರ್ಚ ಲೈಟನ್ನು ಮತ್ತು ಬಾರು ಮಾಡಿದ

ಪಿಸ್ತೂಲನ್ನು ಹಿಡಿದುಕೊಂಡು ಕೆಳಗಿಳಿದುಕೊಂಡು ಹೋಗಿ ಒಂದು ಕೋಣೆಗೆ ಹೋದನು.

ಕರಮಚಂದನು ಆ ಕೋಣೆಯಲ್ಲಿ ಲೈಟನ್ನುರಿಸಿ ಸುತ್ತಲೂ ನೋಡಿದನು. ಆಗ ಅವನಿಗೆ ಪೂರ್ವದಿಕ್ಕಿನ ಗೋಡೆಯಲ್ಲಿ ಮೂರು ಕೊಂಡಿಗಳಿರುವುದು ಕಾಣಿಸಿತು. ಒಂದನ್ನು ತಿರುಗಿಸಿದಾಗ ಒಂದು ಗುಹೆಯ ದ್ವಾರವುಂಟಾಯಿತು. ಅವನಾ ದ್ವಾರದಲ್ಲಿ ಸ್ವಲ್ಪ ದೂರ ಹೋದನು. ಸಾಧಾರಣ ಹತ್ತಿಪ್ಪತ್ತು ಗಜ ಹೋಗಲು ಆ ಗುಹೆಯು ಅಂತ್ಯವಾಯಿತು ಆಗವನು ಪುನಃ ಅಲ್ಲೇನಾದರೂ ಕೃತ್ರಿಮ ದಾರಿಗಳಿವೆಯೋ ಎಂದು ಪರೀಕ್ಷಿಸಿದನು; ಆದರೆ ಗುಪ್ತಮಾರ್ಗಗಳ ಏನೂ ಸುಳಿವು ಸಿಗದಿರಲು ಅವನು ಹಿಂದುರುಗಿ ಆ ಕೋಣೆಗೆ ಬಂದನು. ಅನಂತರ ಮಧ್ಯದಲ್ಲಿರುವ ಕೊಂಡಿಯನ್ನು ಅವನು ಒತ್ತಲು ಮತ್ತೊಂದು ಗುಹೆಯ ದ್ವಾರವುಂಟಾಯಿತು. ಯಾವ ಗುಹೆಯಲ್ಲಿ ಹೋಗಬೇಕೆಂದು ಅವನು ಚಿಂತಿಸಿ ಕಡೆಗೆ ಮಧ್ಯದ ಗುಹೆಯಲ್ಲಿ ಹೋಗುವಾಗ ಉಳಿದೆರಡು ಗುಹೆಗಳ ದ್ವಾರಗಳನ್ನು ಮುಚ್ಚಿದನು. ಅವನು ಟೋರ್ಚ ಲೈಟಿನ ಬೆಳಕಿನಲ್ಲಿ ಆ ಗುಹೆಯಲ್ಲಿ ಸುಮಾರು ದೂರ ಹೋದನು. ದಾರಿಯಲ್ಲಿ ಅನೇಕ ಇಲಿ ಹೆಗ್ಗಣಗಳುಂಟು ಮಾಡಿದ ಬಿಲಗಳಿದ್ದುವು. ಸಾಧಾರಣ ಅವನು ಮುಕ್ಕಾಲು ಮೈಲು ದೂರ ಹೋಗಿರಬಹುದು. ಆಗ ಎದುರಿನಲ್ಲಿ ದೊಡ್ಡ ಬಂಡೆಗಲ್ಲುಗಳು ಅವನಿಗೆ ಸಿಕ್ಕಲು ಇನ್ನಿಲ್ಲಿಂದ ಹೇಗೆ ಮುಂದುವರಿಯುವುದೆಂದವನು ಆಲೋಚನಾಮಗ್ನನಾದನು. ಆಗ ಅವನಿಗೆ ಎರಡು ಬಂಡೆಕಲ್ಲುಗಳ ಎಡೆಯಲ್ಲಿ ಸ್ವಲ್ಪ ಖಾಲಿ ಜಾಗವಿರುವುದು ಕಾಣಿಸಲು ಅದರೆಡೆಯಲ್ಲಿ ನುಸುಳಿ ಅವನು ಮುಂದುವರಿದು ಸುತ್ತಲೂ ನೋಡಿದಾಗ ತಾನು ಗುಹೆಯಿಂದ ಹೊರಬಂದು ಕಾಡಿನಲ್ಲಿರುವೆನೆಂದವನಿಗೆ ತಿಳಿಯಿತು. ಆಗವನು ಗಡಿಯಾರವನ್ನು ನೋಡಲು ಸಾಧಾರಣ ರಾತ್ರಿ ಎರಡುಗಂಟೆಯಾಗಿರಬಹುದು. ಇನ್ನು ಪುನಃ ಈಗ ಬಂದ ದಾರಿಯಲ್ಲಿಯೇ ಹಿಂದುರುಗಿ ಹೋಗಿ ಮತ್ತೊಂದು ಕೊಂಡಿಯನ್ನು ತಿರುಗಿಸಿದಾಗ ಉಂಟಾದ ದ್ವಾರದಲ್ಲಿ ಹೋಗಿ ಗುಹೆಯಲ್ಲಿ ಏನಿರುವುದೆಂದು ತಿಳಿಯಲು ಅವನು ತವಕಗೊಂಡರೂ, ಇನ್ನೀಗ ಪುನಃ ಅಲ್ಲಿಗೆ ಹೋದರೆ ದಸ್ಯುಗಳಿಂದ ಅಪಾಯಕ್ಕೆ ಗುರಿಯಾಗಬೇಕಾದೀತೆಂದು ತಿಳಿದು ಆ ಕಾಡಿನಿಂದ ತನ್ನ ಮನೆಗೆ ಹೊರಟನು. ಅವನು ತನ್ನ ಮನೆಗೆ ತಲಪಿದಾಗ

ಸಾಧಾರಣ ರಾತ್ರಿ ಎರಡೂವರೆ ಗಂಟೆಯಾಗಿರಬಹುದು. ಅವನು ಸೇವಕನನ್ನು ಎಚ್ಚರಿಸಿದನು. ಆಗ ರಾಮುದಾಸನೂ ಎಚ್ಚತ್ತು ಹೋಟೆಲ್‌ನಲ್ಲಿ ಏನಾದರೂ ಪತ್ತೆಯಾಯಿತೆ? ಎಂದು ಕೇಳಲು, ಪತ್ತೆದಾರಿಯು ಸಹೋದರನಿಗೆ ನಡೆದ ಸಂಗತಿಗಳನ್ನು ತಿಳಿಸಿ ತನ್ನ ಕೋಣೆಗೆ ಹೋಗಿ ಮಲಗಿಕೊಂಡನು.

ooo ooo ooo ooo

ವಾಚಕರೆ! ರಾತ್ರಿ ಸಾಧಾರಣ ಹನ್ನೆರಡು ಗಂಟೆಯಾದಾಗ ಉದ್ದವಾದ ಕಪ್ಪು ಕೋಟನ್ನು ಧರಿಸಿಕೊಂಡು ತಲೆಯಲ್ಲಿ ಹೇಟ್‌ನ್ನಿಟ್ಟು ಮುಖಕ್ಕೆ ಕಪ್ಪು ಬಣ್ಣವನ್ನು ಹಚ್ಚಿಕೊಂಡು ವೈಜ್ಞಾನಿಕನಾದ ಲೋಬೋನ ಮನೆಯಿಂದ ಒಂದು ವ್ಯಕ್ತಿಯು ಹೊರಟಿತು. ಕೈಯಲ್ಲಿ ಟೋರ್ಚ ಲೈಟ್ ಮತ್ತು ಒಂದು ತೆಳವಾದ ನಾಗರ ಬೆತ್ತವಿತ್ತು ಆ ವ್ಯಕ್ತಿಯ ಹತ್ತಿರ. ಆ ವ್ಯಕ್ತಿಯು ತನ್ನನ್ನಾರಾದರೂ ಕಂಡರೆ ಗುರತು ಹತ್ತಬಾರದೆಂದೇ ಆ ವೇಷವನ್ನು ಧರಿಸಿದ್ದನೆನ್ನಬಹುದು. ಅವನ ಕಾಲಿನಲ್ಲಿದ್ದ ಪಾದರಕ್ಷೆಯು ನಡೆಯುತಿದ್ದಾಗ ಶಬ್ದವನ್ನುಂಟು ಮಾಡುತಿದ್ದಿಲ್ಲ. ಭಯಂಕರನಾದ ಆ ವ್ಯಕ್ತಿಯು ವಿಚಿತ್ರವಾಗಿ ಪೋಷಾಕುಗಳನ್ನು ತೊಟ್ಟುಕೊಂಡಿದ್ದನು. ಗರ್ಭಿಣಿಯರಾರಾದರೂ ಆಗವನನ್ನು ನೋಡಿದ್ದರೆ ಅವರ ಬಸಿರು ಒಸರಾಗಿಹೋಗುತಿತ್ತು! ಈ ಕಾರಿರುಳಿನಲ್ಲಿ ಕೃತ್ರಿಮ ವೇಷದಿಂದ ಹೊರಟವನಾವನು? ಅವನು ಈ ರೀತಿಯಲ್ಲಿ ಯಾವ ದುರುದ್ದೇಶಕ್ಕಾಗಿ ಹೋಗುತ್ತಿರುವನು? ಅಲ್ಲ ಇವನೇನು ರಕ್ಕಸನೆ! ಪುರಾಣಗಳನ್ನು ನೋಡುವಾಗ ರಾಕ್ಷಸರು ಹೆಚ್ಚಾಗಿ ರಾತ್ರಿ ಸಂಚರಿಸುತ್ತಿರುವವರೆಂದು ವ್ಯಕ್ತವಾಗುತ್ತಿದೆ; ಹಾಗಾದರೆ ಇವನೇನು ನಿಶಾಚರನೆ!! ಅಥವಾ ರಾಕ್ಷಸೀ ಹೃದಯದ ಮಾನವನೆ!!!

ಪ್ರಪಂಚದಲ್ಲಿ ಮನುಷ್ಯಜನ್ಮವನ್ನೆತ್ತಿದ ಮೇಲೆ ಮಾನವರ ನಡವಳಿಕೆಯಂತೆ ಪ್ರತಿಯೊಂದು ಜೀವರಾಶಿಯೂ ವರ್ತಿಸಬೇಕಲ್ಲವೆ! ಜನರಿಗೆ ಅನೇಕ ಕಾರ್ಯಕಲಾಪಗಳಿರುತ್ತವೆ ಹೆಚ್ಚಾಗಿ ಜನರು ಉತ್ತಮ ಕಾರ್ಯ ಮತ್ತು ಕೆಟ್ಟಕಾರ್ಯಗಳೆಂಬ ದ್ವಿವಿಧದ ಕರ್ಮಗಳನ್ನು ಮಾಡುತಿದ್ದಾರೆ. ಸದುದ್ದೇಶದಿಂದ ಸತ್ಕಾರ್ಯಗಳನ್ನು, ದುರುದ್ದೇಶದಿಂದ ದುಷ್ಕಾರ್ಯಗಳನ್ನು ಆಚರಿಸುತ್ತಾರೆಂಬುದು ಪ್ರಾಜ್ಞರ ಮತ. ಸದುದ್ದೇಶವನ್ನಿಟ್ಟುಕೊಂಡು ಕೆಲಸ ಮಾಡುತಿದ್ದರೆ ಆಗ ಏನೂ ಮರೆಮೋಸದಿಂದ ವರ್ತಿಸ

ಬೇಕೆಂದಿಲ್ಲ; ಆದರೆ ನೀಚರು ಕೆಟ್ಟಕೆಲಸಗಳನ್ನು ಮಾಡುವಾಗ ಯಾರಿಗೂ ತಿಳಿಯದಂತೆ ರಹಸ್ಯವಾಗಿ ಮಾಡುತಿದ್ದಾರೆ. ಇಂತಹ ನೀಚ ಕೆಲಸಗಳಿಗೆ ರಾತ್ರಿಸಮಯವೆಂದರೆ ಅಮೃತ ಘಳಿಗೆ! ಕೆಲವು ಸಲ ಉತ್ತಮ ಕಾರ್ಯಕ್ಕಾಗಿಯೂ ರಾತ್ರಿ ಕಾಲದಲ್ಲಿ ಸಂಚರಿಸಬೇಕಾಗಿ ಬರುತ್ತದೆಯಾದರೂ ಅದು ಬಹು ವಿರಳ. ಈಗ ಮೇಲೆ ಹೇಳಿದ ವ್ಯಕ್ತಿಯು ಸದುದ್ದೇಶಕ್ಕಾಗಿ ಹೋಗುತ್ತಿರುವುದಾದರೆ ಛದ್ಮವೇಷದಿಂದೇಕೆ ಹೋಗುತ್ತಿರುವನು? ಕುಹಕಿಯಾದ ಆ ವಂಚಕನು ಏನೋ ದುರಾಚಾರ ಮಾಡಲು ಹೋಗುತ್ತಿರಬಹುದು. ಮುಂದೆ ತನ್ನಿಂದ ತಾನಾಗಿಯೇ ಸರ್ವವೂ ವಿದಿತವಾಗಲಿಕ್ಕಿರುವಾಗ ನಾವೇಕೆ ಆ ಊಹಾಪೋಹಗಳಿಗೆ ಬಲಿಬಿದ್ದು ಕಷ್ಟ ಪಡಬೇಕು? ಮೇಲೆ ಹೇಳಿದ ವ್ಯಕ್ತಿಯು ಸುತ್ತಲೂ ತನ್ನ ಕಾಕದೃಷ್ಟಿಯನ್ನು ಬೀರಿ ಅನಂತರ ನ್ಯೂಮೋಡೆಲ್ ಬೇಂಕ್‌ನವರೆಗೆ ಹೋಗಿ ಅಲ್ಲಿಂದ ವಿಶ್ರಾಂತಿ ಭವನಕ್ಕೆ ಹೋದನು. ಅಲ್ಲಿ ಅವನನ್ನಿದಿರು ನೋಡುತ್ತಾ ಈರ್ವರು ಕುಳಿತಿದ್ದರು. ಅವರೇ ಪಿಟ್ಟ ಮತ್ತು ಕೊಯಿಲೋ ಇವರು. ಆಗಂತುಕ ವ್ಯಕ್ತಿಯನ್ನು ಕಂಡು ಅವರು ನಮಸ್ಕರಿಸಿದರು. ಅನಂತರ ಅವರೆಲ್ಲರೂ ಒಟ್ಟಿಗೆ ಹತ್ತನೆಯ ನಂಬ್ರದ ಕೋಣೆಯ ಹತ್ತಿರದ ಕೋಣೆಗೆ ಹೋದರು. ಅನಂತರ ಕೊಯಿಲೋನು ಮುಂದಿನಿಂದ ಹೋದನು ಅಲ್ಲಿನ ದೃಶ್ಯವನ್ನು ಕಂಡವನು ಬೆರಳು ಕಚ್ಚಿದನು. ಪಿಟ್ಟನು ಅವನೊಡನೆ ನೀನು ಗಾಬರಿಪಡಲು ಕಾರಣವೇನೆಂದು ಪ್ರಶ್ನಿಸಿದನು. ಆಗ ಕೊಯಿಲೋನು ಮಂಚದ ಕಡೆಗೆ ಕೈಮಾಡಿ ತೋರಿಸಿದನು. ಪಿಟ್ಟನು ಮಂಚವನ್ನು ನೋಡಿ ಅದಾರೋ ಮೊದಲಿನ ಸ್ಥಾನದಿಂದದನ್ನು ವ್ಯತ್ಯಸ ಮಾಡಿರುವರೆಂದು ತಿಳಿದುಕೊಂಡನು. ಅವನು ಆಗಂತುಕ ವ್ಯಕ್ತಿಯ ಹತ್ತಿರ ಬಂದು ಬದ್‌ಮಾಷನೊಬ್ಬನು ನಮ್ಮ ರಹಸ್ಯವನ್ನು ಪತ್ತೆ ಹಚ್ಚಲು ಬಂದಿರುವಂತೆ ಕಾಣುತ್ತದೆಯೆಂದನು. ಅನಂತರ ಆಗಂತುಕ ವ್ಯಕ್ತಿಯ ಆಜ್ಞೆಯಂತೆ ಅವರು ಮುಂದುವರಿದರು. ಆ ಮೂವರೂ ಕೆಳಗಿಳಿದು ಲಾಂದ್ರವನ್ನು ದೊಡ್ಡದಾಗಿ ಉರಿಸಿ ಸುತ್ತಲೂ ನೋಡಿದರು ಮಧ್ಯದ ಗುಹೆಯ ದ್ವಾರವು ತೆರೆಯಲ್ಪಟ್ಟಿರುವುದನ್ನು ಕಂಡು ಆಗಂತುಕ ವ್ಯಕ್ತಿಯು ಸಿಟ್ಟುಗೊಂಡನು. ಅವನ ಕೋಪಾಗ್ನಿಯಿಂದಲಾಗಿ ಕಣ್ಣುಗಳು ಕೆಂಡದ ಕಿಡಿಯನ್ನು ಕಾರುತಿದ್ದುವು. ಪಿಟ್ಟನು ಭಯಗೊಂಡನು. ಕೊಯಿಲೋನು ಬಾಯಿಬಿಡಲಿಲ್ಲ.

ಆಗಂತುಕ ವ್ಯಕ್ತಿಯು ಸಿಂಹದಂತೆ ಗರ್ಜಿಸುತ್ತಾ 'ಎಲ! ಈ ರೀತಿ ಮಾಡಿದವ ಆ ಕರಮುಚಂದನೇ ಆಗಿರಬೇಕು! ನೀವಿಬ್ಬರೂ ಪಿಸ್ತೂಲನ್ನು ಹಿಡಿದು ಕೊಂಡು ಈಗಲೇ ಈ ಗುಹೆಯಲ್ಲಿ ಓಡಿರಿ. ದಾರಿಯಲ್ಲಿ ಕರಮುಚಂದನು ಸಿಕ್ಕಿದರೆ ಅವನನ್ನು ಕೊಲ್ಲಿರಿ' ಎಂದು ಆಜ್ಞಾಪಿಸಿದನು. ಕೂಡಲೆ ಅವ ರಿಬ್ಬರು ವಾಯುವೇಗದಿಂದ ಆ ಗುಹೆಯೊಳಗೆ ಹೋದರು.

ವಾಚಕರೆ! ಪಿಟ್ಟ ಮತ್ತು ಕೊಯಿಲೋ ಗುಹೆಯೊಳಗೆ ಹೋದ ನಂತರ ಆಗಂತುಕ ವ್ಯಕ್ತಿಯು ಚಿಂತಿಸಿದನು. ಕರಮುಚಂದನು ಇಲ್ಲಿಗೆ ಹೇಗೆ ಬಂದಿರುವನು ಎಂದಾಶ್ಚರ್ಯ ಪಟ್ಟನು. ಆದರೆ ಕರಮುಚಂದನು ಬೇರೆ ಗುಹೆಗಳಲ್ಲಿ ಹೋಗಲಿಲ್ಲವೆಂದು ನಿಶ್ಚಯ ಮಾಡಿ ಸಂತೋಷಪಟ್ಟನು. ಅನಂತರವನು ಮೆಟ್ಟಿಲುಗಳನ್ನೇರಿ ಮೇಲೆ ಹೋಗಿ ಮ್ಯಾನೇಜರ್ ಮಾಧವ ನನ್ನು ಕರೆದನು. ಅವರೊಳಗೆ ಈ ರೀತಿ ಸಂಭಾಷಣೆಯಾಯಿತು:—

ಆಗಂತುಕ—ಮಾಧವನೆ! ಈ ದಿನ ಇಲ್ಲಿಗೆ ಕರಮುಚಂದನು ಬಂದಿರು ವನೆ?

ಮಾಧವ—ಕರಮುಚಂದನ ಪರಿಚಯವು ನನಗಿಲ್ಲವಲ್ಲ!

ಆಗಂತುಕ—ಈ ದಿನ ಇಲ್ಲಿಗೆ ಬಂದ ಹೊಸಬರು ಯಾವ ಯಾವ ಕೋಣೆಯಲ್ಲಿದ್ದಾರೆ? ಮಾಧವನು ರಿಜಿಸ್ಟ್ರಿ ಪುಸ್ತಕವನ್ನು ತೆಗೆದು ಕೆಲವು ಜನರ ಹೆಸರನ್ನೂ ಅವರು ಇಳಕೊಂಡ ಕೋಣೆಯ ನಂಬ್ರವನ್ನೂ ಹೇಳಿ ದನು. ಅನಂತರ ಆಗಂತುಕ ವ್ಯಕ್ತಿಯು ಮಾಧವನೊಡನೆ ಆಯಾಯ ವ್ಯಕ್ತಿಗಳು ತಮ್ಮ ತಮ್ಮ ಕೋಣೆಗಳಲ್ಲಿ ಇದ್ದಾರೆಯೋ ಎಂದು ಪರೀಕ್ಷಿಸಿ ದನು. ಉಳಿದ ಎಲ್ಲಾ ಕೋಣೆಗಳಲ್ಲಿ ಜನರಿದ್ದರು; ಆದರೆ ಹತ್ತನೆಯ ನಂಬ್ರದ ಕೋಣೆಯನ್ನು ಪಡೆದವನು ಅಲ್ಲಿರದೆ ಬಾಗಿಲಿಗೆ ಬೀಗ ಹಾಕಲ್ಪಟ್ಟಿ ದ್ದಿತು. ಮಾಧವನು ಹೇಳಿದ ಆಕಾರಗಳ ಮೇಲಿನಿಂದ ಆ ವ್ಯಕ್ತಿಯೇ ಕರಮುಚಂದನೆಂದು ಆಗಂತುಕ ವ್ಯಕ್ತಿಯು ತರ್ಕಿಸಿದನು. ಸ್ವಲ್ಪ ಹೊತ್ತಿ ನಲ್ಲಿ ಕೊಯಿಲೋನೂ ಪಿಟ್ಟನೂ ನಿರಾಶರಾಗಿ ಹಿಂದಿರುಗಿ ಬಂದರು. ಆಗ ಆಗಂತುಕನು ಅವರೊಡನೆ ಕರಮುಚಂದನನ್ನು ಏನು ಮಾಡಿದಿರಿ? ಎಂದು ಕೇಳಿದನು. ಅದಕ್ಕವರು ನಾವು ಎಷ್ಟು ಹುಡುಕಿದರೂ ಕರಮುಚಂದನು ಗುಹೆಯಲ್ಲಿ ಸಿಗಲಿಲ್ಲವೆಂದರು. ಆಗಂತುಕನು ಗಂಭೀರನಾಗಿ ಹಾಗಾ ದರೆ ಅವನು ಗುಹೆಯಿಂದ ಬಂಡೆಗಲ್ಲುಗಳೆಡೆಯಲ್ಲಿ ನುಸುಳಿ ಹೋಗಿರ

ಬಹುದು. ಆಗಲಿ. ಈ ಪತ್ತೆದಾರಿಯು ಇನ್ನೇನು ಮಾಡುವನೆಂದು ನೋಡುವ. ಇವನಂಥವನು ನನಗೆ ಸರಿಸಾಟಿಯೆ? ಎಂದನು. ಆಗಂತು ಕನೇ ವಿಜ್ಞಾನಿಯಾದ ಲೋಬೋ ಎಂದು ವಾಚಕರು ಊಹಿಸಿರಬಹುದು.

# ಗುಟ್ಟು ರಟ್ಟಾಯಿತು

ಭಾರತದಲ್ಲಿ ಅನೇಕ ಸಾಮಂತ ರಾಜರಿದ್ದಾರೆ. ಕೆಲವರು ಹೆಸರಿಗೆ ಮಾತ್ರ ಇಸ್ಪೇಟಿನ ರಾಜರಂತಿರುವವರು. ಇನ್ನು ಕೆಲವರು ತಮ್ಮ ನಾಡನ್ನು ಆಳಲಾರದೆ ಪರರ ವಶಕ್ಕೊಪ್ಪಿಸಿ ವರ್ಷಾಸನವನ್ನು ತಿಂದು ತೇಗಿಕೊಂಡಿರುವಂತಹ ಅರಸರುಗಳು. ಇಂತಹವರಲ್ಲಿ ಉಡುಪಿಯ ಸಮೀಪ ವಿರುವ ರಾಜವರ್ಮರಾಜನೂ ಒಬ್ಬನು. ಅವನ ಪೂರ್ವಿಕರಾದ ರಾಜರು ಬಹಳ ಶೂರರಾಗಿದ್ದುಕೊಂಡು ಹೆಸರಾಂತ ರಾಜರಾಗಿದ್ದರಂತೆ. ಆದರೀಗ ಅವರ ರಾಜ್ಯವೆಲ್ಲ ಆಂಗ್ಲೇಯರ ಆಡಳಿತಕ್ಕೆ ಒಳಪಟ್ಟಿದೆ; ಆದರೂ ಕಪ್ಪ ಕೊಟ್ಟುಕೊಂಡು ನಾಲ್ಕೈದು ಗ್ರಾಮಗಳನ್ನು ಈ ರಾಜವರ್ಮನು ಆಳು ತಿದ್ದನು ತರುಣನಾದ ಇವನು ಬಹಳ ಉದಾರಿಯಾಗಿದ್ದು ಬಡಬಗ್ಗರಿಗೆ ಸಹಾಯ ಮಾಡುತಿದ್ದನು ಕಾರಣಾಂತರದಿಂದ ಅವನ ಐಶ್ವರ್ಯವು ಕ್ಷಯಿಸುತ್ತಾ ಬಂದಿತು. ಯಾವುದೋ ಒಂದು ಕಾರ್ಯಕ್ಕಾಗಿ ಅವನಿಗೆ ಹತ್ತುಸಾವಿರ ರೂಪಾಯಿ ಅಗತ್ಯಬಿತ್ತು. ಆದರೆ ಅವನ ಹತ್ತಿರವೀಗ ಹಣ ವಿರಲಿಲ್ಲ. ಯಾರ ಹತ್ತಿರದಿಂದಲಾದರೂ ಸಾಲ ತೆಗೆದುಕೊಂಡರೆ ಲೋಕ ದವರು ಈಗ ರಾಜವರ್ಮನು ಆರ್ಥಿಕ ಸ್ಥಿತಿಯಲ್ಲಿ ಕಂಗಾಲಾಗಿರುವನು. ಅವನಲ್ಲೀಗ ಹಣವಿಲ್ಲವೆಂದು ನಗಲಿಕ್ಕಿಲ್ಲವೆ! ಆದ್ಧರಿಂದವನು ಕೆಲವು ಅಮೂಲ್ಯವಾದ ರತ್ನಾಭರಣಗಳನ್ನು ತೆಗೆದುಕೊಂಡು ಮಂಗಳೂರಿಗೆ ಬಂದನು. ರಾಜವರ್ಮನು ನ್ಯೂಮೋಡೆಲ್ ಬೇಂಕಿನ ಪ್ರಖ್ಯಾತಿ ಕೇಳಿ, ಅಲ್ಲಿಗೆ ಹೋಗಿ ಅಲ್ಲಿನ ಮೇನೇಜರ್‌ನೊಡನೆ ಈ ರತ್ನಾಭರಣಗಳನ್ನು ಒತ್ತೆ ಯಿಟ್ಟು ಹತ್ತುಸಾವಿರ ರೂಪಾಯಿ ಕೊಡಬೇಕೆಂದು ಕೇಳಿಕೊಂಡನು. ಮೇನೇಜರನು ಆ ಆಭರಣಗಳನ್ನು ನೋಡಿ ಇವುಗಳನ್ನು ಒತ್ತೆಯಿಟ್ಟು ಹತ್ತುಸಾವಿರ ರೂಪಾಯಿ ಕೊಡಬಹುದೆಂದನು. ಆಗ ರಾಜವರ್ಮನು ರಹಸ್ಯದಲ್ಲಿ ಅವನೊಡನೆ ಹೀಗೆಂದನು. 'ನಾನೊಬ್ಬ ರಾಜಮನೆತನದವನು

ನಾನಿಲ್ಲಿ ಆಭರಣಗಳನ್ನು ಒತ್ತೆಯಿಟ್ಟಿರುವೆನೆಂದು ಜನರಿಗೆ ಗೊತ್ತಾದರೆ ನನ್ನನ್ನು ಪರಿಹಾಸ್ಯಮಾಡುವರು. ಆದ್ದರಿಂದ ಈ ವಿಷಯವು ಅತಿ ಗುಟ್ಟಾಗಿರಲಿ' ಎಂದು ಹೇಳಿದನು. ಮೇನೇಜರ್‌ನು ಅದಕ್ಕೊಪ್ಪಿ ಹತ್ತುಸಾವಿರ ರೂಪಾಯಿಗಳನ್ನು ಕೊಡಲು, ರಾಜವರ್ಮನು ಹೊರಟು ಹೋದನು.



ಮರುದಿವಸ ಪಟ್ಟಣದಲ್ಲೆಲ್ಲ ಗಲಭೆಯೋ ಗಲಭೆ. ಉಡುಪಿಯ ಸಮೀಪವಿರುವ ರಾಜವರ್ಮ ಮಹಾರಾಜನು ಆರ್ಥಿಕ ಸ್ಥಿತಿಯಲ್ಲಿ ಕಂಗೆಟ್ಟು ನ್ಯೂಮೋಡೆಲ್ ಬೇಂಕಿನಲ್ಲಿ ಆಭರಣಗಳನ್ನು ಒತ್ತೆಯಿತ್ತು ಹಣ ಪಡೆದಿರುವನು, ಎಂದು. ಈ ವಾರ್ತೆಯನ್ನು ಕೇಳಿ ಬೇಂಕಿನ ಮೇನೇಜರನು ಆಶ್ಚರ್ಯಗೊಂಡನು. ತಾನು ಯಾರೊಡನೆಯೂ ಈ ರಹಸ್ಯವನ್ನು ಹೇಳದಿರಲು ಗುಟ್ಟು ರಟ್ಟಾದುದು ಹೇಗೆಂದು ತಿಳಿಯದೆ ಅವನು ಚಕಿತನಾದನು. ಕರ್ಣೋಪಕರ್ಣವಾಗಿ ಈ ವಾರ್ತೆಯು ರಾಜವರ್ಮನಿಗೆ ತಲಪಿತು. ಅವನು ಈ ವರ್ತಮಾನವನ್ನು ಬಹಿರಂಗಪಡಿಸಿದವನು ಮೇನೇಜರನೇ ಆಗಿರಬೇಕು ಎಂದು ಊಹಿಸಿ, ಮಂಗಳೂರಿಗೆ ಬಂದು ಮೇನೇಜರನನ್ನು ಕಂಡು ಅವನೊಡನೆ ಹೀಗೆಂದನು:—ನನ್ನೊಡನೆ ಈ ಗುಪ್ತವನ್ನು ಯಾರೊಡನೆಯೂ ಹೇಳುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಈಗ ಗೌಪ್ಯವನ್ನು ಬಹಿರಂಗಪಡಿಸಿದೆಯಲ್ಲವೆ! ನಿನ್ನಂತಹ ವಿಶ್ವಾಸಘಾತಕಿಗಳನ್ನು ನಾನೆಲ್ಲಿಯೂ ನೋಡಲಿಲ್ಲ. ರಾಜವರ್ಮನ ಮಾತನ್ನು ಕೇಳಿ ಮೇನೇಜರನು ಖತಿಗೊಂಡನು. ಅವನು ಅರಸನೊಡನೆ ನಾನೀ ವಿಷಯವನ್ನಾರೊಡನೆಯೂ ಹೇಳಲಿಲ್ಲವೆಂದು ಹೇಳಿದರೂ ರಾಜವರ್ಮನಿಗೆ ನಂಬಿಕೆ ಬರುವುದೆಂತು?

ಇದರಿಂದಲಾಗಿ ಮೇನೇಜರ್‌ನು ವ್ಯಸನಪಟ್ಟನು. ಅವನೀ ರೀತಿ ಚಿಂತಿಸಿದನು. ಕ್ರೂರ ವಿಧಿಯು ನನ್ನನ್ನು ಪೀಡಿಸಹತ್ತಿದೆ. ಮೊದಲನೆಯ ದಾಗೀನೆಗಳ ಕಳವು, ಈಗ ಗುಟ್ಟು ರಟ್ಟಾದುದು ಇನ್ನು ಏನೆಲ್ಲ ಅನರ್ಥ ಪರಂಪರೆಗಳು ಒದಗಲಿಕ್ಕಿವೆಯೋ ಎಂದು ಚಿಂತಿಸಿದನು. ನೀಚರಾರೋ ತನ್ನನ್ನು ಸರ್ವನಾಶ ಮಾಡಲು ಪಣತೊಟ್ಟು ಬದ್ಧಕಂಕಣರಾಗಿರುವರೆಂದು ಬಗೆದನು. ಅವನು ತನ್ನನ್ನು ಕಷ್ಟದಿಂದ ಉದ್ಧರಿಸಬೇಕಾದರೆ ಪತ್ತೆದಾರಿಯೇ ಶಕ್ತನೆಂದೆಣಿಸಿ ಕರಮುಚಂದನಿಗೆ ಫೋನ್ ಮಾಡಿದನು. ಅವನು ಯಾಕಾಗಿ ತನ್ನನ್ನು ಕರೆಯುತ್ತೀರಿ? ಎಂದು ಕೇಳಿದಾಗ ಮೇನೇ

ಜರನು ಒಮ್ಮೆ ತಾವು ನ್ಯೂಮೊಡೆಲ್ ಬೇಂಕಿಗೆ ಈಗಲೇ ಆಗತ್ಯ ದಯ ಮಾಡಿಸಿರೆಂದು ಬೇಡಿಕೊಂಡನು. ಸ್ವಲ್ಪ ಹೊತ್ತಿನಲ್ಲಿ ಕರಮುಚಂದನು ಬೇಂಕಿಗೆ ಬಂದನು. ಆಗ ರಾಜವರ್ಮನೂ ಅಲ್ಲಿಯೇ ಇದ್ದನು. ಮೇನೇಜರನು ನಡೆದ ಸಂಗತಿಯನ್ನು ಪತ್ತೆದಾರಿಗೆ ತಿಳಿಸಿದನು. ಆಗ ಕರಮುಚಂದನು ರಾಜನೊಡನೆ ನಿಮಗಿಲ್ಲಿ ಯಾರಾದರೂ ಶತ್ರುಗಳಿರುವರೇ? ಎಂದು ಕೇಳಲವನು ಇಲ್ಲವೆಂದನು. ಅನಂತರ ಪತ್ತೆದಾರಿಯು ಸುತ್ತಲೂ ನೋಡಿ, ನಿನ್ನೆ ನೀವಿಲ್ಲಿ ಮಾತನಾಡುತಿದ್ದಾಗ ನಿಮ್ಮ ಮಾತುಗಳನ್ನು ಯಾರಾದರೂ ಅಡಗಿನಿಂತು ಕೇಳಿರಬಹುದೆಂದಾಗ, ಮೇನೇಜರನು ಅದು ಅಸಂಭವ. ನಾವು ಬಹಳ ಮೆಲ್ಲನೆ ಮಾತನಾಡಿದ್ದೇವೆಯಂದ. ಆಗ ಈ ವಠಾರದ ಸುತ್ತಲೂ ಯಾರೂ ಇರಲಿಲ್ಲವೆಂದನು. ಅನಂತರ ಕರಮುಚಂದನು ಮೇನೇಜರನೊಡನೆ ನಾನು ಈ ವಿಷಯವಾಗಿ ಆಲೋಚಿಸುವೆನು. ನೀವು ಭಯಪಡಬೇಡಿರಿ, ಎಂದು ಹೇಳಿ ಅಲ್ಲಿಂದ ಹೊರಟು ಹೋದನು. ಅವನು ಮನೆಗೆ ಬಂದು ಈ ಸಂಗತಿಯನ್ನು ತಮ್ಮನೊಡನೆ ಹೇಳಿ ಬಹುಶಃ ಚೋರ ಸಾರ್ವಭೌಮನೇ ಈ ಗುಟ್ಟು ರಟ್ಟುಮಾಡಿರಬಹುದು ಎಂದನು.

ವಾಚಕಮಹಾಶಯರೆ! ಮಧ್ಯಾಹ್ನ ಎರಡುಗಂಟೆಗೆ ಅಂಚೆಯವನು ಬಂದು ಕರಮುಚಂದನಿಗೊಂದು ಪತ್ರವನ್ನು ಕೊಟ್ಟನು. ಅವನಾ ಪತ್ರವನ್ನೊಡೆದು ನೋಡಿದನು. ಅದರಲ್ಲಿ ಈ ರೀತಿಯಿದ್ದಿತು:—

ಪತ್ತೆದಾರಿಯೆ! ನೀನೀಗ ಬಹಳ ಚಿಂತೆಯಲ್ಲಿರಬಹುದಾಗಿ ನಾನು ನಂಬಿರುತ್ತೇನೆ. 'ನ್ಯೂಮೋಡೆಲ್‌ಬೇಂಕ್'ನಲ್ಲಿ ರಾಜವರ್ಮನು ಒತ್ತೆಯಿಟ್ಟ ವಿಷಯವನ್ನು ಬಹಿರಂಗಪಡಿಸಿದವನು ನಾನೇ. ನೀನಿನ್ನು ಹೆಚ್ಚು ಚಿಂತಿಸುವ ಕಾರಣವಿಲ್ಲ. ನನ್ನನ್ನು ನೀನು ಚೆನ್ನಾಗಿ ಅರಿತಿರುತ್ತೀ! ನನ್ನೆದುರು ನಿಂತು ಜಯಿಸುವ ಆಶೆಯನ್ನಿಂದಿನಿಂದಲೇ ಬಿಡು. ಇತಿ.

ನಿನ್ನ ಚಿರಪರಿಚಿತ
'ಚೋರ ಸಾರ್ವಭೌಮ'

ಎಂದು ಪತ್ರದಲ್ಲಿದ್ದಿತು.

ಇದನ್ನು ನೋಡಿ ಕರಮುಚಂದನು ಆಶ್ಚರ್ಯಗೊಂಡನು. ತಾನು ಬೇಂಕಿಗೆ ಹೋದ ವಿಷಯವು ಚೋರರಿಗೆ ಗೊತ್ತಾದುದು ಹೇಗೆ? ಎಂದು

ಅವನಿಗೆ ತಿಳಿಯಲಿಲ್ಲ. ಅನಂತರ ಆ ಪತ್ತೇದಾರಿ ಸಹೋದರರು ಈ ರೀತಿ ಮಾತನಾಡಿಕೊಂಡರು:—

ಕರಮಚಂದ—'ಚೋರ ಸಾರ್ವಭೌಮ'ನೆಂಬ ಗುಪ್ತ ನಾಮದಿಂದ ಅತಿ ಚತುರ ಚೋರನು ಈ ನಗರದಲ್ಲಿ ಅನೇಕ ಅತ್ಯಾಚಾರಗಳನ್ನು ಮಾಡುತಿದ್ದಾನೆ. ಅವನ ಪತ್ತೆಯನ್ನು ತಿಳಿಯದೆ ನಾವಿದ್ದು ಪ್ರಯೋಜನ ವಾದರೂ ಏನು?

ರಾಮದಾಸ—ಸರಿ! ನನ್ನ ಅಭಿಪ್ರಾಯದಂತೆ ಆ ಚತುರಕೋವಿದನು ಒಬ್ಬ ವಿದ್ಯಾವಂತನಾಗಿದ್ದು, ಅವನು ವಿಜ್ಞಾನವನ್ನು ಅಭ್ಯಸಿಸಿರಬೇಕು!

ಕರಮಚಂದ—ಚೋರ ಸಾರ್ವಭೌಮನು ಈಗ ಜನರಿಗೆ ಪರಿಚಯ ವಿಲ್ಲದ ಯಾವುದೋ ಒಂದು ತರದ ವಿಜ್ಞಾನದ ಉಪಕರಣಗಳ ಸಹಾಯ ದಿಂದ ಈ ರೀತಿ ಅತ್ಯಾಚಾರ ಮಾಡುತ್ತಿರಬಹುದು.

ರಾಮದಾಸ—ಆ ಚೋರನ ಕಣ್ಣು ನ್ಯೂಮೋಡೆಲ್ ಬೇಂಕಿನ ಮೇಲೆ ಬಿದ್ದಂತೆ ಕಾಣುತ್ತದೆ; ಆದ್ದರಿಂದ ನಾವು ಇನ್ನು ಆ ಬೇಂಕಿನ ಹತ್ತಿರ ವಿದ್ದು ರಹಸ್ಯವೇನಾದರೂ ದೊರಕುತ್ತದೆಯೋ ನೋಡಬೇಕೆಂದು ಅಂದನು.

*  ÷  §  §  ×  *

ಪಾಠಕ ಮಹಾಶಯರೆ! ಚೋರ ಸಾರ್ವಭೌಮನು ಹೇಗೆ ರಹಸ್ಯವನ್ನು ಬಹಿರಂಗಪಡಿಸಿದನೆಂದು ತಿಳಿಯಲು ನೀವೀಗ ಆತುರಗೊಂಡಿರಬಹುದು. ವಿಶ್ರಾಂತಿ ಭವನದ ದಕ್ಷಿಣದಲ್ಲಿ ಒಂದು ಸರ್ವಸಾಧಾರಣವಾದ ಮನೆಯಿದೆ. ವಿಶ್ರಾಂತಿ ಭವನದಿಂದಲ್ಲಿಗೆ ಒಂದು ಮೈಲು ಆಗಬಹುದು. ಅಲ್ಲಿ ಕೊಯಿ ಲೋನು ವಾಸಿಸುತಿದ್ದನು. ಅವನ ಜೀವನವು ಯಾವರೀತಿಯಲ್ಲಿ ಸಾಗು ತ್ತಿದೆಯೆಂದು ಆ ದಾರಿಗೂ ಗೊತ್ತಿರಲಿಲ್ಲ. ವೈಜ್ಞಾನಿಕನಾದ ಲೋಜೋನು 'ಚೋರ ಸಾರ್ವಭೌಮ'ನೆಂಬ ಗುಪ್ತನಾಮದಿಂದ ಮಾಡುವ ಅತ್ಯಾಚಾರ ದಲ್ಲಿ ಕೊಯಿಲೋನು ಅವನ ಸಹಾಯಕನಾಗಿದ್ದನು. ಅವನ ಮನೆಯು ಸಾಧಾರಣ ದೊಡ್ಡದಾಗಿತ್ತು. ಆ ಕಟ್ಟಡದ ನೆಲಮಾಳಿಗೆಯಲ್ಲಿ ಅದೊಂದು ಭದ್ರವಾದ ಕೋಣೆಯಲ್ಲಿ ಬೆಳಿಗ್ಗೆ ಹತ್ತುಗಂಟೆಯಿಂದ ಮಧ್ಯಾಹ್ನ ಮೂರು ಗಂಟೆಯವರೆಗೆ ಅವನು ಕುಳಿತುಕೊಳ್ಳುತಿದ್ದನು. ಅವನು ಕುಳಿತುಕೊಳ್ಳು ತಿದ್ದ ಕುರ್ಚಿಯ ಎದುರಿನಲ್ಲಿ ವಿಶಾಲವಾದೊಂದು ಮೇಜಿನಲ್ಲಿ ದೊಡ್ಡ

ದೊಂದು ತರದ ಯಂತ್ರವಿತ್ತು. ಅದರ ಮೇಲ್ಭಾದಿಯಲ್ಲಿ ಕನ್ನಡಿಯಿತ್ತು ಕಿವಿಗೆ ಟೆಲಿಫ್ಫೋನ್‌ನ ಗ್ರಾಹಕ ಅಥವಾ ರಿಸೀವರ್‌ನ್ನು ಹಿಡಿದುಕೊಂಡು ಏಕಾಗ್ರತೆಯಿಂದವನು ಆ ಯಂತ್ರದ ಮುಖದಲ್ಲಿರುವ ಕನ್ನಡಿಯನ್ನೇ ನೋಡುತಿದ್ದನು. ವಾಚಕರೆ! ಈ ಟೆಲಿವಿಶನ್ ಯಂತ್ರದಲ್ಲಿ ನ್ಯೂವೋ ಡೆಲ್ ಬೇಂಕ್‌ನಲ್ಲಿದ್ದ ನರ್ತನ ಬೊಂಬೆಯ ಕಣ್ಣುಗಳಿಗೆ ಬಿದ್ದ ಎಲ್ಲಾ ದೃಶ್ಯಗಳೂ ಗೋಚರಿಸುತಿದ್ದುವಲ್ಲದೆ ಅಲ್ಲಿ ಮಾತನಾಡಿದ ವಿಷಯಗಳೆಲ್ಲ ಟೆಲಿಫೋನ್‌ನಲ್ಲಿ ಕೇಳಿಸುತಿದ್ದವು. ರಾಜವರ್ಮನು ಬಂದು ರತ್ನಾಭರಣ ಗಳನ್ನು ಅಡವಿಟ್ಟು ಹೋದ ಸಂಗತಿಯನ್ನು ಆತ ಚೋರ ಸಾರ್ವಭೌಮನಾದ ಲೋಬೋನಿಗೆ ತಿಳಿಸಿದನು. ಲೋಬೋನಾ ಆ ವಿಷಯವನ್ನು ಬಹಿರಂಗ ಪಡಿಸಿದನು. ಅಲ್ಲದೆ ಪತ್ತೆದಾರಿಯು ಮರುದಿವಸ ಬೇಂಕಿಗೆ ಬಂದ ದೃಶ್ಯವೂ ಟೆಲಿವಿಶನ್‌ನಲ್ಲಿ ಕಾಣಿಸಲು ಅವನು ಪತ್ತೆದಾರಿಗೆ ಚೋರ ಸಾರ್ವ ಭೌಮನೆಂಬ ಹೆಸರಿನಿಂದ ಪತ್ರ ಕಳುಹಿಸಿದ್ದನು.

## ವಿಚಿತ್ರ ಕಳವು

ಮಂಗಳೂರಿನಲ್ಲಿ ಹಂಪನಕಟ್ಟೆ ಎಂಬುದು ಅತಿ ಪ್ರಸಿದ್ಧವಾದ ವ್ಯಾಪಾರ ಕೇಂದ್ರ. ಜನಸಂದಣಿಯಿಂದಲೂ ಆಧುನಿಕ ವಾಹನಗಳ ಓಡಾಟ ಗಳಿಂದಲೂ ಪಟ್ಟಣವು ಕಂಗೊಳಿಸುತಿತ್ತು. ವ್ಯಾಪಾರದ ಅಂಗಡಿಗಳು ಒತ್ತೊತ್ತಾಗಿಯೂ, ಅತಿ ಉನ್ನತಗಳಾಗಿಯೂ ಇದ್ದುವು. ಮಂಗಳೂರು ಪಾಶ್ಚಾತ್ಯ ನವನಾಗರೀಕತೆಯನ್ನನುಸರಿಸಿ ಅಭಿವೃದ್ಧಿಗೊಂಡ ಅದೊಂದು ಸುಪ್ರಸಿದ್ಧವಾದ ನಗರ ಅನೇಕ ತರದ ಬೆಲೆಬಾಳುವ ನಾಜೂಕಾದ ಕೈಗಾ ರಿಕೆಯ ಸಾಮಾನುಗಳು ಎಲ್ಲಾ ಅಂಗಡಿಗಳಲ್ಲಿಯೂ ದೊರೆಯುತಿದ್ದುವು. ಇಂಥಾ ಶಹರಿನಲ್ಲಿ ಆದರಲ್ಲಿಯೂ ಹಂಪನಕಟ್ಟೆಯಲ್ಲಿ ವಿಶೇಷವಾಗಿ ಸರಾಫಿ ಅಂಗಡಿಗಳಿದ್ದುವು. ಅನೇಕ ತರದ ಆಧುನಿಕ ಆಭರಣಗಳು ವಜ್ರ ವೈಢೂರ್ಯ ಮುಂತಾದ ಬೆಲೆಬಾಳುವ ನವರತ್ನಗಳೂ ಆ ಸರಾಫಿ ಅಂಗಡಿ ಗಳಲ್ಲಿ ಶೋಭಿಸುತಿದ್ದುವು. ಬೇರೆ ಬೇರೆ ನಗರಗಳಿಂದ ಬಂದ ಪ್ರವಾಸಿ ಗಳು ಮಂಗಳೂರಿನ ಸಂಪತ್ತನ್ನು ಕಂಡು ಬೆರಗಾಗುತಿದ್ದರು. ಅನೇಕ ಬೀದಿಗಳು ಹಂಪನಕಟ್ಟೆಯಲ್ಲಿ ಸಂಧಿಸುತಿದ್ದುವು. ಮಂಗಳೂರಿನಂತಹ

ಸುಪ್ರಸಿದ್ಧ ನಗರಗಳನ್ನು ನಮ್ಮಂಥವರು ವರ್ಣಿಸುವದೆಂದರೆ ಎತ್ತರವಾದ ಮರದಲ್ಲಿರುವ ಹಣ್ಣನ್ನು ಕೊಯ್ಯಲು ಕುಂಟನು ಕೈಯೆತ್ತಿದಂತೆಯೇ ಸರಿ.

ಈ ದಿನ ಮಧ್ಯಾಹ್ನಾನಂತರ ಸಾಧಾರಣ ಸುಮಾರು ಮೂರುಗಂಟೆಗೆ ಫೋರ್ಡ್ ಕಾರೊಂದು ರಭಸವಾಗಿ ಹಂಪನಕಟ್ಟೆಗೆ ಬಂದು ಪ್ರಾಮುಖ್ಯವಾದ ಸರಾಫನ ಅಂಗಡಿಯ ಎದುರಿನಲ್ಲಿ ನಿಂತಿತು. ಆ ಕಾರಿನಿಂದ ತರುಣನೋರ್ವನು ಕೆಳಗಿಳಿದನು. ಅವನನ್ನು ನೋಡಿದರೆ ಇವನೊಬ್ಬ ಅರಸುಕುಮಾರನೋ ಎಂದು ತೋರುತಿತ್ತು. ಅವನ ಉಡಿಗೆತೊಡಿಗೆಗಳು ಅತ್ಯಂತ ಅಮೂಲ್ಯವಾದವುಗಳಾಗಿದ್ದುವು ಅವನು ಕಾರಿನಿಂದಿಳಿದು ಸರಾಫಕಟ್ಟೆಗೇರಿದನು. ಡ್ರೈವರ್‌ನು ಕಾರಿನಲ್ಲಿಯೇ ಇದ್ದನು. ಯಾರೋ ಸಿರಿವಂತರು ತನ್ನ ಅಂಗಡಿಗೆ ಆಗಮಿಸಿರುವರೆಂದು ಸರಾಫನಿಗೆ ಹರ್ಷವಾಯಿತು. ಅವನಾ ತರುಣನನ್ನು ಆದರಿಸಿ ಕುಳಿತುಕೊಳ್ಳಲು ಆಸನ ಕೊಟ್ಟನು. ಅನಂತರ ಆಗಂತುಕ ತರುಣನು ಸರಾಫನೊಡನೆ ನನಗೆ ಕೆಲವು ಆಭರಣಗಳು ಬೇಕಾಗಿವೆಯೆಂದನು. ಅವನಷ್ಟು ಹೇಳಿದುದೇ ತಡ, ಸರಾಫನು ಅನೇಕ ವಿಧದ ಒಡವೆಗಳನ್ನು ತೋರಿಸಲು ಪ್ರಾರಂಭಿಸಿದನು. ಆಗಂತುಕ ತರುಣನು ಆಭರಣಗಳನ್ನು ಕೈಯಲ್ಲಿ ಹಿಡಿದು ಪರೀಕ್ಷಿಸುತಿದ್ದನು. ಅನಂತರ ಅವನು ಒಂದು ಚಿನ್ನದ ಕಪ್, ಬಂಗಾರದ ಉಡಿದಾರ, ಎಂಟುಹತ್ತು ಚಿನ್ನದ ಚೈನ್‌ಗಳು, ಐದಾರು ವಜ್ರದ ಹಾರಗಳು ಅಲ್ಲದೆ, ನಾಲ್ಕೈದು ಜೊತೆ ವಜ್ರದ ಬೆಂಡೋಲೆಗಳು ಕೆಲವು ಅಮೂಲ್ಯ ರತ್ನಗಳನ್ನು ಕೊಂಡುಕೊಳ್ಳಲು ಅಪೇಕ್ಷಿಸಿ ಕ್ರಯ ಕೇಳಿದನು ಸರಾಫನು ಆಭರಣಗಳ ಕ್ರಯ ಲೆಕ್ಕಮಾಡಿ ಇಪ್ಪತ್ತು ಸಾವಿರವೆಂದನು. ಆಗಂತುಕ ತರುಣನು ಆಭರಣಗಳನ್ನು ತೆಗೆದು ಡ್ರೈವರ್‌ನ ಹತ್ತಿರ ಪೆಟ್ಟಿಗೆ ತರಲು ಹೇಳಿ, ಅದರಲ್ಲಿ ಹಾಕಿ ಪೆಟ್ಟಿಗೆಯ ಬಾಗಿಲನ್ನು ಹಾಕಿ ಬೀಗಹಾಕಿ ಯಂ. ಯಸ್. ರಾವ್ ಎಂದು ಸೀಲನ್ನೊತ್ತಿ ಪೆಟ್ಟಿಗೆಯನ್ನು ಡ್ರೈವರನ ಹತ್ತಿರ ಕೊಟ್ಟು ಕಾರಿನಲ್ಲಿಡಹೇಳಿದನು.

ಅನಂತರ ತರುಣನು ಕೋಟಿನ ಕಿಸೆಗೆ ಕೈ ಹಾಕಿ ಹಣದ ಚೀಲವನ್ನು ತೆಗೆದನು ಆದರೆ ಆ ಚೀಲದಲ್ಲಿ ಒಂದು ಸಾವಿರ ರೂಪಾಯಿ ಮಾತ್ರ ಇದ್ದಿತಷ್ಟೆ! ಆಗ ಅವನು ಸರಾಫನೊಡನೆ ಹೀಗೆಂದನು. ನಾನು ಮನೆಯಲ್ಲಿ ಹಣತೆಗೆದಿಟ್ಟಿದ್ದೆನಾದರೂ ತರಲು ಮರೆತುಹೋಯಿತಲ್ಲಾ! ಎಂದು ಹೇಳಿ ಒಂದು ಸಾವಿರ ರೂಪಾಯಿಯನ್ನು ಕೊಟ್ಟು ಡ್ರೈವರ್‌ನೊಡನೆ ಪೆಟ್ಟಿಗೆ ತಾ,

ಎಂದನು ಡ್ರೈವರನು ಕೂಡಲೆ ಸೀಲ್ ಮಾಡಿದ ಪೆಟ್ಟಿಗೆಯನ್ನು ಕಾರಿ ನಿಂದೀಚೆಗೆ ತಂದನು ತರುಣನು ಆ ಪೆಟ್ಟಿಗೆಯನ್ನು ಸರಾಫನ ಹತ್ತಿರ ವಿಟ್ಟು ಈ ಪೆಟ್ಟಿಗೆಯು ಇಲ್ಲೇ ಇರಲಿ. ಡ್ರೈವರನೂ ಇಲ್ಲಿಯೇ ಇರಲಿ, ನಾನು ಬೇಗನೆ ಮನೆಗೆ ಹೋಗಿ ಉಳಿದ ಹಣ ಕೊಟ್ಟು ನಗಗಳನ್ನು ತುಂಬಿ ಸಿದ ಪೆಟ್ಟಿಗೆಯನ್ನು ತೆಗೆದುಕೊಂಡು ಹೋಗುವೆನು ಎಂದನು. ಸರಾಫನು ಅದಕ್ಕೊಪ್ಪಿದನು. ಕೂಡಲೇ ಆಗಂತುಕ ಸಿರಿವಂತ ತರುಣನು ಕಾರನ್ನೇರಿ ರಭಸದಿಂದ ಕಾರನ್ನೋಡಿಸಿದನು. ಸರಾಫನೊಡನೆ ಡ್ರೈವರ್‌ನು ಅಂಗಡಿ ಯಲ್ಲಿ ಕುಳಿತುಕೊಂಡಿದ್ದನು ಸರಾಫನು ಈ ರೀತಿ ಆಲೋಚಿಸಿದನು. 'ಈಗ ಆಗಂತುಕ ತರುಣನು ಕ್ರಯಮಾಡಿದ ಆಭರಣಗಳನ್ನು ಇಲ್ಲಿಯೇ ಪೆಟ್ಟಿಗೆಯಲ್ಲಿಟ್ಟು ಹೋದದ್ದಲ್ಲದೆ ಸಾವಿರ ರೂಪಾಯಿ ಸಹ ಕೊಟ್ಟ ಕಾರಣ ಅವನು ಬೇಗನೆ ಬಾಕಿ ಉಳಿದ ಹಣವನ್ನು ತೆಗೆದುಕೊಂಡು ಬರಬಹುದು'

ಆಗಂತುಕ ತರುಣನು ತಾನು ಕಾಲುಗಂಟೆಯಲ್ಲಿ ತಿರುಗಿ ಬರುವೆ ನೆಂದು ಸರಾಫನೊಡನೆ ಹೇಳಿದ್ದನು; ಆದರೆ ಈಗ ಅರ್ಧಗಂಟೆ ಕಳೆದರೂ ಅವನು ಬರಲಿಲ್ಲ. ಡ್ರೈವರ್‌ನು ಸರಾಫನೊಡನೆ ನಮ್ಮ ಯಜಮಾನರೇಕೆ ಬರಲಿಲ್ಲವೆಂದು ಕೇಳಲು, ಅವನು ಈಗ ಬರಬಹುದೆಂದನು. ತದನಂತರ ಮತ್ತೂ ಅರ್ಧತಾಸು ಕಳೆಯಲು ಡ್ರೈವರ್‌ನು ಹತಾಶನಾದನು. ಅವನು ಸರಾಫನೊಡನೆ ನಮ್ಮ ಯಜಮಾನರಿಗೆ ಹಣ ತರುವಾಗ ಏನಾದರೂ ಅಪಾಯ ಉಂಟಾಗಿದೆಯೋ ಎಂದು ಭಯಗೊಂಡು ಹೇಳಿ, ನಾನೀಗ ಹೋಗಿ ಯಜಮಾನರೆಲ್ಲಿರುವರು? ಎಂದು ವಿಚಾರಿಸಿಕೊಂಡು ಬರುತ್ತೇನೆ. ಪೆಟ್ಟಿಗೆ ಇಲ್ಲೇ ಇರಲಿ, ಎಂದು ಹೇಳಲು, ಸರಾಫನು ಅದಕ್ಕೊಪ್ಪಿ ವಿಷಯ ವೇನೆಂದು ತಿಳಿದು ಬೇಗನೇ ಬಾ ಎನ್ನಲು, ಕೂಡಲೇ ಡ್ರೈವರನು ಅಲ್ಲಿಂದ ಹೊರಟನು.

೦ ೦ ೦ ೦ ೦

ವಾಚಕರೆ! ಡ್ರೈವರ್‌ನು ಹೋಗಿ ಸಾಧಾರಣ ಒಂದು ತಾಸಾಯಿತು. ಆಗಂತುಕ ತರುಣನ ಪತ್ತೆಯಿಲ್ಲ ಆಗ ಸರಾಫನು ಆಶ್ಚರ್ಯಗೊಂಡನು. ಇವರೇನು ಮತಿಹೀನರೆ! ಎಂದು ಚಿಂತಿಸಿದನು. ಯಾರಾದರೂ ಆಭರಣ ಗಳಿಗೆ ಕ್ರಯಮಾಡಿ ಸ್ವಲ್ಪ ಹಣ ಕೊಟ್ಟು ಆಭರಣಗಳನ್ನು ತೆಗೆದುಕೊಂಡು ಹೋಗದೆ ಬೇಗ ಬಂದು ಉಳಿದ ಹಣವನ್ನು ಕೊಟ್ಟು ನಗಗಳನ್ನು ಕೊಂಡೊ

ಂದ ಹೇಳಿ ಹೋಗಿ ಅನಂತರ ಬಾರದೆ ಇದ್ದರೆ ನಿಜವಾಗಿ ಅವರು ...ಲ್ಲರೆ? ಎಂದು ಸರಾಫನು ಆಲೋಚಿಸುತ್ತಿದ್ದನು; ಆದರೆ ಸಾಯಂ ...ದರೂ ಆಗಂತುಕನಾಗಲಿ ಡ್ರೈವರ್‌ನಾಗಲಿ ಬರಲಿಲ್ಲ. ಒಂದು ಅವರಿಗೆ ದಾರಿ ತಪ್ಪಿರಬಹುದೆ! ಎಂದು ಸರಾಫನು ಗ್ರಹಿಸಿದನು ಸಮಯದಲ್ಲಿ ಅವನಿಗೇನೋ ಸಂಶಯ ಉಂಟಾಯಿತು. ಅವನ ಸಂಗತಿಯನ್ನು ಪೋಲೀಸ್ ಸ್ಟೇಷನ್‌ಗೆ ಫೋನ್‌ನಲ್ಲಿ ತಿಳಿಸಿದನು. ...ಲೀ ಸುಪರಿಡೆಂಟ್ ಯಶವಂತಸಿಂಹನು ಪೋಲೀಸ್ ವೇನಿನಲ್ಲಿ ಫಕಟ್ಟೆಗೆ ಆಗಮಿಸಿದನು.

ಯಶವಂತಸಿಂಹನು ಸರಾಫಕಟ್ಟೆಗೆ ತಲಪಿದಾಗ ಸಾಧಾರಣ ಸಾಯಂ ... ಏಳೂವರೆ ಗಂಟೆಯಾಗಿರಬಹುದು. ಅಂಗಡಿಯವನು ನಡೆದ ಸಂಗ ...ನ್ನೆಲ್ಲ ತಿಳಿಸಿದನು. ಅನಂತರ ಯಶವಂತನು ಸರಾಫನೊಡನೆ ಆಭ ...ಗಳಿರುವ ಆ ಪೆಟ್ಟಿಗೆಯೆಲ್ಲಿದೆ? ಎಂದು ಪ್ರಶ್ನಿಸಿದನು ಸರಾಫನು ಸೀಲ್ ...ಡಿರುವ ಪೆಟ್ಟಿಗೆಯನ್ನು ಎತ್ತಿತಂದು ಪೋಲೀಸ್ ಸುಪರಿಡೆಂಟ್ ಯಶ ...ತಸಿಂಹನ ಎದುರಿನಲ್ಲಿಟ್ಟು ಹೀಗೆಂದನು. ಆಗಂತುಕ ತರುಣನು ಆಭ ರಣಗಳಿಗೆ ಕ್ರಯಮಾಡಿ ಒಂದು ಚಿನ್ನದ ಕಪ್ ಬಂಗಾರದ ಉಡಿದಾರ ಎಂಟು ಹತ್ತು ಚಿನ್ನದ ಚೈನ್‌ಗಳು ಐದಾರು ವಜ್ರದ ಹಾರಗಳು ಅಲ್ಲದೆ ನಾಲ್ಕೈದು ಜೊತೆ ವಜ್ರದ ಬೆಂಡೋಲೆಗಳು ಅಮೂಲ್ಯವಾದ ಕೆಲ ರತ್ನ ಗಳು ಇವುಗಳನ್ನು ಕೊಂಡುಕೊಂಡನು. ಅವುಗಳ ಕ್ರಯ ಇಪ್ಪತ್ತು ಸಾವಿರ ರೂಪಾಯಿ ಅವನು ಆ ಒಡವೆಗಳನ್ನೆಲ್ಲ ಪೆಟ್ಟಿಗೆಯಲ್ಲಿ ಹಾಕಿ ಬೀಗ ಹಾಕಿ ಯಂ ಯಸ್. ರಾವ್ ಎಂಬ ಸೀಲನ್ನೊತ್ತಿ ಆ ಪೆಟ್ಟಿಗೆಯನ್ನು ಕಾರಿನಲ್ಲಿಟ್ಟನು. ಅನಂತರ ಹಣದ ಚೀಲವನ್ನು ತೆಗೆದು ನೋಡಲು ಅದ ರಲ್ಲಿ ಒಂದು ಸಾವಿರ ರೂಪಾಯಿ ಮಾತ್ರಯಿರುವುದರಿಂದ ಅವನ್ನು ಕೊಟ್ಟು ನಗಗಳನ್ನು ತುಂಬಿಸಿದ ಪೆಟ್ಟಿಗೆಯನ್ನು ಕಾರಿನಿಂದ ಪುನಃ ತಂದು ನನ್ನೆ ಡೆಗೆ ಕೊಟ್ಟು ಡ್ರೈವರ್‌ನನ್ನು ಇಲ್ಲಿ ನಿಲ್ಲಿಸಿ ಬೇಗನೆ ಉಳಿದ ಹಣವನ್ನು ತರಲು ಕಾರನ್ನೇರಿ ಹೋದನು. ಆಗ ಯಶವಂತನು ಹಾಗಾದರೆ ಈಗ ಆ ಡ್ರೈವರ್‌ನೆಲ್ಲಿ? ಎಂದು ಕುತೂಹಲದಿಂದ ಕೇಳಿದನು.

ಸರಾಫನು ಮುಂದುವರಿಸುತ್ತಾ ಸುಮಾರು ಸಮಯ ಕಳೆದರೂ ಆಗಂ ತುಕ ತರುಣನು ಬರಲಿಲ್ಲ. ಆಗ ಡ್ರೈವರನು ನಾನು ಯಜಮಾನನನ್ನು

ಹುಡುಕಿಕೊಂಡು ಬರುತ್ತೇನೆಂದು ಹೇಳಿ ಹೊರಟು ಹೋದನು. ಆಭರಣ ಗಳ ಪೆಟ್ಟಿಗೆ ಇಲ್ಲೇ ಇದ್ದುದರಿಂದ ನಾನು ಆತಂಕಪಡಿಸಲಿಲ್ಲವೆಂದನು. ಅನಂತರ ಸುಪರಿಡೆಂಟನು ಆ ಪೆಟ್ಟಿಗೆಯನ್ನೆತ್ತಿ ನೋಡಿದನು. ಪೆಟ್ಟಿಗೆಯು ಭಾರವಾಗಿತ್ತು. ಅದರ ಮೇಲಿನ ಸೀಲ್‌ನಲ್ಲಿ ಯಂ. ಯಸ್. ರಾವ್ ಎಂಬ ಸೀಲಿರುವದನ್ನು ಕಂಡು ಯಶವಂತನು ಚಕಿತನಾದನು. ಯಾಕೆಂ ದರೆ ಸರ್ವಸಾಧಾರಣ ಮಂಗಳೂರಿನಲ್ಲಿರುವ ಎಲ್ಲಾ ಶ್ರೀಮಂತರ ಪರಿ ಚಯವೂ ಅವನಿಗಿತ್ತು; ಆದರೆ ಯಂ. ಯಸ್. ರಾವ್ ಎಂಬ ಹೆಸರುಳ್ಳ ವ್ಯಕ್ತಿಯನ್ನು ಅವನು ಕಂಡರಿಯಲೇ ಇಲ್ಲವಾದ್ದರಿಂದ ಇದರಲ್ಲೇನೋ ರಹಸ್ಯವಿದೆಯೆಂದು ತಿಳಿದನು. ಅನಂತರ ಅವನು ಪೆಟ್ಟಿಗೆಯನ್ನೊಡೆದು ಬಾಗಿಲು ತೆರೆದು ನೋಡಿದಾಗ ಅದರಲ್ಲಿ ನಗಗಳಿರುವ ಬದಲು ಸೀಸದ ಗಟ್ಟಿಗಳಿರುವುದನ್ನು ಕಂಡು ಅಚ್ಚರಿಪಟ್ಟನು ಸರಾಫನು ಇದೇನು? ನಾನು, ಸ್ವಪ್ನದಲ್ಲಿರುವೆನೇ ಎಂದು ಕಣ್ಣುಜ್ಜಿಕೊಂಡು ನೋಡಿದನು. ಯಶ ವಂತಸಿಂಹನಿಗಾಗ ಆ ಸೀಸದ ಗಟ್ಟಿಗಳೆಡೆಯಲ್ಲಿ 'ಚೋರ ಸಾರ್ವಭೌಮ' ಎಂದು ಬರೆಯಲ್ಪಟ್ಟ ಕಾಗದ ಕಂಡಿತು ಅವನು ಆಶ್ಚರ್ಯದಿಂದ ಇದೇನು ಇಂದ್ರಜಾಲವೆ! ಎಂದುದ್ಗಾರ ತೆಗೆದನು ಅನಂತರ ಸುಪರಿಡೆಂಟನು ದುಷ್ಟರಾರೋ ಸಿರಿವಂತನ ಪೋಷಾಕುಗಳನ್ನು ಧರಿಸಿಕೊಂಡು ಬಂದು ಆಭ ರಣಗಳನ್ನು ಪಡೆದುಕೊಳ್ಳುವಂತೆ ನಟಿಸಿ ಒಡವೆಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಸೀಲ್ ಮಾಡಿ ಕಡೆಗೆ ಹಣ ಮರೆತುಹೋಯಿತೆಂಬ ನೆವದಿಂದ ಕೈ ಚಮ ತ್ಕಾರದಿಂದ ಅದೇ ರೀತಿಯ ಸೀಲ್ ಮಾಡಿದ ಬೇರೊಂದು ಪೆಟ್ಟಿಗೆಯನ್ನು ಇಲ್ಲಿಟ್ಟು ನಗಗಳನ್ನು ಅಪಹರಿಸಿರಬಹುದು ಎಂದು ತರ್ಕಿಸಿದನು. ಅನಂ ತರ ಅವನು ಸರಾಫನೊಡನೆ ಕಾರಿನ ನಂಬ್ರವೆಷ್ಟು ಎಂದು ಕೇಳಿದಾಗ ಸರಾಫನು ನಾನು ನಂಬ್ರ ನೋಡಲಿಲ್ಲವೆಂದು ದುಃಖದಿಂದ ನುಡಿದನು; ಆದರೆ ಕಾರು ಹಳದಿ ಬಣ್ಣದ್ದಾಗಿತ್ತೆಂದು ನುಡಿದನು. ಆ ಮೇಲೆ ಸುಪರಿ ಡೆಂಟನು ಸರಾಫನೊಡನೆ ಸಿರಿವಂತ ಯುವಕನ ಬಣ್ಣ ಆಕಾರಗಳನ್ನೆಲ್ಲ ಕೇಳಿದನು. ಸರಾಫನು ಆಗಂತುಕ ಯುವಕನು ಬೆಳ್ಳಗಾಗಿಯೂ ತೋರವಾಗಿಯೂ ಉದ್ದವಾಗಿದ್ದನೆಂದನು. ಅವನು ಹೇಳಿದ ಸಂಗತಿ ಯನ್ನೆಲ್ಲ ಯಶವಂತನು ತನ್ನ ಡೈರಿಯಲ್ಲಿ ಬರೆದುಕೊಂಡು ನಾನೀಗ ಈ ಸಂಗತಿಯನ್ನು ಎಲ್ಲಾ ಪೋಲೀಸ್ ಸ್ಟೇಶನ್ನುಗಳಿಗೂ ಫೋನಿನಲ್ಲಿ ತಿಳಿಸಿ ದುಷ್ಟರನ್ನು ಹಿಡಿಹಿಸುವೆನೆಂದು ಹೇಳಿ ಅಲ್ಲಿಂದ ಹೊರಟು ಹೋದನು.

ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನು ಹಂಪನಕಟ್ಟೆಯಿಂದ ಠಾಣೆಗೆ ಬಂದು ಎಲ್ಲಾ ಯಾಮಿಕ ಕೇಂದ್ರಗಳಿಗೂ ಫೋನ್ ಮಾಡಿ ಈ ವಿಚಿತ್ರ ಕಳವನ್ನು ತಿಳಿಸಿದನು ಅನಂತರವನು ಕರಮಚಂದನನ್ನು ಕಾಣಲು ಅವನ ಮನೆಗೆ ತೆರಳಿದನು. ಅವನು ಪತ್ತೇದಾರಿಯ ಮನೆಗೆ ತಲಪಿದಾಗ ರಾತ್ರಿ ಸಾಧಾರಣ ಎಂಟೂವರೆ ತಾಸಾಗಿರಬಹುದು ಯಶವಂತನು ಬರುತ್ತಿರುವುದನ್ನು ಕಂಡು ಕರಮಚಂದನು ಹರ್ಷಚಿತ್ತನಾಗಿ ಸುಪರಿಡೆಂಟರೆ! ಆಗಮಿಸಿರಿ ಎಂದನು. ಯಶವಂತನು ಪ್ರಫುಲ್ಲವದನನಾಗಿ ಕರಮಚಂದನ ಹತ್ತಿರ ಬಂದು ಕುರ್ಚಿಯೊಂದರಲ್ಲಿ ಕುಳಿತನು. ರಾಮದಾಸನಾಗ ಮುಖಮಂಟಪಕ್ಕೆ ಬಂದು ಬೆಂಚಿನಲ್ಲಿ ಕುಳಿತನು. ಕ್ಷೇಮ ಸಮಾಚಾರವನ್ನು ಮಾತನಾಡಿ ಅನಂತರ ಯಶವಂತನು ಪತ್ತೇದಾರಿಯೊಡನೆ ಸರಾಫಕಟ್ಟೆಯಿಂದ ವಿಚಿತ್ರ ರೀತಿಯಲ್ಲಾದ ಕಳವಿನ ವಿಷಯವನ್ನು ವಿವರಿಸಿದನು. ಅಲ್ಲದೆ ಪೆಟ್ಟಿಗೆಯಲ್ಲಿ ಸೀಸದ ಗಟ್ಟಿಗಳೆಡೆಯಲ್ಲಿ 'ಚೋರ ಸಾರ್ವಭೌಮ' ಎಂದು ಬರೆಯಲ್ಪಟ್ಟ ಕಾಗದವಿತ್ತೆಂದೂ ಹೇಳಿದನು. ಪತ್ತೇದಾರಿ ಸಹೋದರರು ಚೋರ ಸಾರ್ವಭೌಮನ ಚಮತ್ಕಾರವನ್ನು ಕೇಳಿ ಆಶ್ಚರ್ಯಗೊಂಡರು. ಯಶವಂತನು ಕರಮಚಂದನೊಡನೆ ನಾವೀಗ ಬೇಗನೆ ಹೋಗಿ ದಸ್ಯುಗಳ ಪತ್ತೆ ಹಚ್ಚದಿದ್ದರೆ ನಮ್ಮ ಮರ್ಯಾದೆಯೇ ಹೋದೀತು ಎಂದನು. ಕರಮಚಂದನು ಮುಗುಳುನಗು ನಗುತ್ತಾ ಸುಪರಿಡೆಂಟರೆ, ಭಯಪಡಬೇಡಿರಿ! ಚೋರ ಸಾರ್ವಭೌಮನೆಂಬ ಗುಪ್ತನಾಮದಿಂದಿರುವ ಆ ಚೋರಮಣಿಯನ್ನು ನಾನು ಹಿಡಿಯದೆ ಎಂದಿಗೂ ಬಿಡೆನು. ಆಕಾಶವೇ ಕಳಚಿ ಬೀಳಲಿ ಅಥವಾ ಸಪ್ತಸಾಗರಗಳೇ ಪ್ರಳಯದೋಪಾದಿಯಲ್ಲಿ ಉಕ್ಕಿ ಅಬ್ಬರಿಸಲಿ, ಭೂಮಂಡಲವೇ ಕುಸಿದು ಬೀಳಲಿ, ಸೂರ್ಯಚಂದ್ರರೇ ನಾಶವಾಗಲಿ ಆದರೂ ಈ ನೀಚರನ್ನು ಕಾಲಸದನಕ್ಕಟ್ಟದೆ ಬಿಡೆನೆಂದು ಗರ್ಜಿಸಿದನು. ಅನಂತರ ಕರಮಚಂದನ ಆದರದ ಒತ್ತಾಯದಂತೆ ಯಶವಂತನು ಅಲ್ಲಿ ಊಟ ಮಾಡಿ ತನ್ನ ಮನೆಗೆ ಹೋದನು.



ವಾಚಕರೆ! ಲೋಬೋನ ಅಪ್ಪಣೆಯಂತೆ ಪಿಬ್ಬನು ಒಬ್ಬ ಸಿರಿವಂತ ತರುಣನಂತೆ ವೇಷ ಪಲ್ಲಟಿಸಿಕೊಂಡು ಸರಾಫ ಅಂಗಡಿಗೆ ಕಾರಿನಲ್ಲಿ ಬಂದಿದ್ದನು. ಡ್ರೈವರ್‌ನಂತೆ ಕೊಡಿಯಲೋನು ಬಂದಿದ್ದನು ಅವರು ತಮ್ಮ

ಕಾರ್ಯಾಲಯದಿಂದ ಹೊರಡುವಾಗಲೇ ತಾವಿನ್ನು ಸರಾಫನಟ್ಟಿ ಯಿಂದ ತೆಗೆಯಬೇಕಾದ ಆಭರಣಗಳ ಭಾರವನ್ನು ಅಂದಾಜು ಮಾಡಿ ಅಷ್ಟು ಭಾರದ ಸೀಸದ ಗಟ್ಟಿಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ಬೀಗ ಹಾಕಿ ಯಂ. ಯಸ್. ರಾವ್ ಎಂಬ ಸೀಲನ್ನೊತ್ತಿ ಕಾರಿನಲ್ಲಿಟ್ಟಿದ್ದರು. ಬೇ ತರದ ಬೇರೊಂದು ಪೆಟ್ಟಿಗೆಯನ್ನು ತಂದಿದ್ದರು ಅನಂತರ ಸರಾಫ ಗೆ ಬಂದು, ಸೀಸಹಾಕಿಟ್ಟ ಪೆಟ್ಟಿಗೆಯಾಕಾರದ ಬೇರೊಂದು ಪೆಟ್ಟಿಗೆಯ ವು ಗಳನ್ನು ಹಾಕಿ ಬೀಗ ಹಾಕಿ ಯಂ. ಯಸ್. ರಾವ್ ಎಂಬ ಸೀಲ ತ್ತಿ ಆ ಪೆಟ್ಟಿಗೆಯನ್ನು ಕಾರಿನಲ್ಲಿಟ್ಟರು. ಅನಂತರ ಹಣ ತರಲು ಹೋದುದರಿಂದ ಹಣ ತರಲು ಹೊರಟಾಗ ಆ ಆಭರಣಗಳಿದ್ದ ಗೆ ಯನ್ನು ಕಾರಿನಿಂದ ತರದೆ ಸೀಸತುಂಬಿರುವ ಪೆಟ್ಟಿಗೆಯನ್ನು ಕ್ತಿ ಯಿಂದ ಸರಾಫನೆದುರಿಟ್ಟರು. ಈ ಚಮತ್ಕಾರವನ್ನು ಆ ಸರಾಫನು ಲಿಲ್ಲ. ಮುಂದೆ ನಡೆದ ವಿಷಯವು ವಾಚಕರಿಗೆ ಸಂಪೂರ್ಣ ತಿ ಯಷ್ಟೆ!

---

# ಆಕಸ್ಮಿಕ ಘಟನೆ

ಈ ದಿನ ರಾತ್ರಿ ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನ ಯಲ್ಲಿ ವಿವಾಹ ಸಮಾರಂಭ. ಅವನ ಪ್ರೀತಿಯ ಮಗಳಾದ ಕುಸು ಳನ್ನು ಕುಂದಾಪುರದಲ್ಲಿ ಪ್ರಸಿದ್ಧ ಡಾಕ್ಟರನಾದ ವಿಶ್ವನಾಥನು ವಿವಾ ವಾಗುವುದೆಂದು ನಿಶ್ಚಯವಾಗಿತ್ತು. ಮದುವೆಯ ಉತ್ಸವವಷ್ಟೆ! ಅಂಗ ದಲ್ಲಿ ಎತ್ತರವಾದ ಚಪ್ಪರ ಹಾಕಿದ್ದರು. ಅಲ್ಲಲ್ಲಿ ರೇಶ್ಮೆ ವಸ್ತ್ರಗಳನ್ನು ಕಂ ಗಳಿಗೆ ಸುತ್ತಿ ಅಲಂಕರಿಸಿದ್ದರು. ತೋರಣಗಳಿಗೆ ಗೊನೆಬಿಟ್ಟ ಬಾಳೆಗಳನ್ನು ಕಟ್ಟಿದ್ದರು. ಮದುವೆಯ ಮಂಟಪವನ್ನು ಏನೆಂದು ವರ್ಣಿಸಲಿ! ಯುಧಿ ಷ್ಠಿರನು ರಾಜಸೂಯ ಯಾಗ ಮಾಡುವ ಸಂದರ್ಭದಲ್ಲಿ ಮಯನಿಂದ ಬಹಳ ಆಶ್ಚರ್ಯಕರವಾಗಿ ನಿರ್ಮಿಸಿದ ಮಂಟಪದಂತಿತ್ತು ಈ ವಿವಾಹ ಮಂಟಪ. ಅಲ್ಲಲ್ಲಿ ಕುರ್ಚಿಗಳನ್ನು ಸಾಲಾಗಿ ಇರಿಸಿದ್ದರು. ಬಣ್ಣಬಣ್ಣದ ವಿದ್ಯುತ್ ದೀಪಗಳು ಪ್ರಕಾಶಿಸುತಿದ್ದಾಗ ನೆಲಕ್ಕೆ ಹಾಸಿದ ರತ್ನಕಂಬಳಿ ಗಳು ಬಹಳ ಮನೋಹರವಾಗಿ ಶೋಭಿಸುತಿದ್ದುವು. ಅಲ್ಲಲ್ಲಿ ಅತ್ತರುಗಳ

ಸೀಸೆಗಳನ್ನಿಟ್ಟಿದ್ದರಲ್ಲದೆ, ಗಂಧ ಪಚ್ಚಕರ್ಪೂರವೇ ಮೊದಲಾದ ಪರಿಮಳ ವಸ್ತುಗಳನ್ನಿಟ್ಟಿದ್ದರು. ಕಸ್ತೂರಿಯ ಸುವಾಸನೆಯು ಸುತ್ತಲೂ ಆವರಿಸಿದ್ದಿತು. ದ್ರಾಕ್ಷಾ ಗೊಂಚಲುಗಳನ್ನೂ ಅನೇಕ ತರದ ಹೂಗಳ ಚೆಂಡುಗಳನ್ನೂ ಚಪ್ಪರದಲ್ಲಿ ನೇತಾಡಿಸಿದ್ದರು.

ಡಾಕ್ಟರ್ ವಿಶ್ವನಾಥನು ಕುಂದಾಪುರದಲ್ಲಿ ಅತ್ಯಂತ ಪ್ರಸಿದ್ಧಪಟ್ಟ ಡಾಕ್ಟರ್ ಆಗಿದ್ದನು. ಅವನು ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಯಂ. ಬಿ. ಬಿ. ಯಸ್ ಕಲಿತು ಅನಂತರ ತನ್ನ ಜನ್ಮಭೂಮಿಯಾದ ಕುಂದಾಪುರಕ್ಕೆ ಬಂದು ವೈದ್ಯಕೀಯ ವೃತ್ತಿಯನ್ನವಲಂಬಿಸಿದ್ದನು. ಅವನು ಗೌರ ವರ್ಣದವನಾಗಿಯೂ ದೃಢಕಾಯನಾಗಿಯೂ ಇದ್ದನಲ್ಲದೆ ತೇಜಸ್ವಿಯಾದ ತರುಣನಾಗಿದ್ದನು ಅವನಿಗೀಗ ಸಾಧಾರಣ ಇಪ್ಪತ್ತಮೂರು ವರ್ಷವಾಗಿರಬಹುದು. ಅವನ ತಂದೆಯು ದೊಡ್ಡ ಜಮೀನ್ದಾರನಾಗಿದ್ದನಲ್ಲದೆ ಊರವರ ವಿಶ್ವಾಸಕ್ಕೆ ಪಾತ್ರನಾದ ಸಭ್ಯ ನಾಗರೀಕ ವ್ಯಕ್ತಿಯಾಗಿದ್ದನು. ಶ್ರೀಮಂತರ ದಿಬ್ಬಣವೆಂದಮೇಲೆ ಕೇಳುವುದೇನು? ಮೋಟಾರು ಕಾರುಗಳು ಕುಂದಾಪುರದಿಂದ ಮಂಗಳೂರಿಗೆ ಇತ್ತಿಂದತ್ತ ಓಡಾಡ ತೊಡಗಿದುವು. ದಿಬ್ಬಣಕ್ಕೆ ಅನೇಕ ಘನಹೊಂದಿದ ವಿದ್ವಾಂಸರೂ ಪ್ರತಿಷ್ಠಿತ ಪುರುಷರೂ ಆಗಮಿಸಿದ್ದರು ಅವರನ್ನೆಲ್ಲ ವಿಶ್ವನಾಥನ ತಂದೆಯು ಆದರಪೂರ್ವಕವಾಗಿ ಸತ್ಕರಿಸಿದ್ದನು.

ವಧುವಾದ ಕುಸುಮಳ ಸೌಂದರ್ಯಾತಿಶಯವನ್ನೇನೆನ್ನಲಿ! ರತಿಯೇ ಭೂಮಿಗಿಳಿದು ಬಂದಳೋ ಎಂದು ಅವಳನ್ನು ಕಾಣುವಾಗ ಎಲ್ಲರೂ ಭ್ರಮಿಸುತಿದ್ದರು ಅಪ್ಸರೆಯಂತಹ ರೂಪಾತಿಶಯದಿಂದಲೂ ಸೀತೆಯಂತಹ ಪ್ರಾತಃಸ್ಮರಣೀಯವಾದ ಗುಣವುಳ್ಳವಳೂ ಆದ ಕುಸುಮಳು ನಿಜವಾಗಿಯೇ ಕೋಮಲ ಕುಸುಮದಂತಿದ್ದಳು. ಕಲ್ಹಾರ ಕುಸುಮದಂತೆ ಅವಳು ಕೋಮಲಾಂಗಿಯಾಗಿದ್ದು ಕೋಗಿಲೆಯಂತಹ ಕಂಠ ಉಳ್ಳವಳಾಗಿದ್ದಳು. ಅವಳು ಮುಗುಳುನಗುತ್ತಿರುವಾಗ ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿರುವಂತೆ ಕಾಣುತ್ತಿತ್ತು. ಕುಸುಮಳು ವಿಶ್ವನಾಥನಿಗೆ ಸಹಧರ್ಮಿಣಿಯಾಗಲು ಯೋಗ್ಯಳಾಗದ್ದಳು ಮೊದಲೇ ಸುರ ಸುಂದರಿಯಾದ ಅವಳು ವಸ್ತ್ರಾಲಂಕಾರಗಳಿಂದಲೂ, ಆಭರಣಗಳಿಂದಲೂ ಅಲಂಕರಿಸಲ್ಪಟ್ಟಾಗ ಮತ್ತೂ ಸುಂದರಳಾಗಿ ರತ್ನಖಚಿತವಾದ ಚಿನ್ನದಂತೆ ಶೋಭಿಸುತಿದ್ದಳು

ಯಶವಂತಸಿಂಹನು ಮಂಗಳೂರಿನಲ್ಲಿ ಪ್ರಸಿದ್ಧಪಟ್ಟವರಿಗೆಲ್ಲ ಆಮಂತ್ರಣವನ್ನಿತ್ತಿದ್ದನು. ಪತ್ರಿದಾರಿಯಾದ ಕರಮಚಂದನು ರಾಮದಾಸಸಿಂಹೊಡಗೂಡಿಗೊಂಡು ವಿವಾಹಕ್ಕೆ ಆಗಮಿಸಿದ್ದನು ವಿಜ್ಞಾನಿಯಾದ ಲೋಬೋನು ಯಶವಂತನ ಆಗ್ರಹಪೂರ್ವಕವಾದ ಆಮಂತ್ರಣವನ್ನು ಸ್ವೀಕರಿಸಿ ಬಂದಿದ್ದನು. ಜಾನ್‌ರು ಸಹ ಆಗಮಿಸಿದ್ದರು. ಅನೇಕ ವ್ಯಾಪಾರಸ್ಥರೂ, ಜಮೀನ್ದಾರರೂ ಅಲ್ಲದೆ ಸರಕಾರಿ ಹುದ್ದೆದಾರರೂ ವಿವಾಹ ಮಹೋತ್ಸವಕ್ಕೆ ಆಗಮಿಸಿದ್ದರು. ಅತಿಥಿಗಳೆಲ್ಲ ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ಉಚಿತಾಸನಗಳನ್ನಲಂಕರಿಸಿದ್ದರು. ಲೋಬೋನು ಕರಮಚಂದನ ಹತ್ತಿರ ಕುಳಿತುಕೊಂಡಿದ್ದು ಲೋಕಾಭಿರಾಮನಾಗಿ ಆಗಿನ ಕಾಲದ ರಾಜಕೀಯ ವಿಷಯವನ್ನು ಚರ್ಚಿಸುತಲಿದ್ದನು. ಯುವಕ ಯುವತಿಯರು ವಿಶೇಷವಾಗಿ ಉಡಿಗೆ-ತೊಡಿಗೆಗಳಿಂದ ತಮ್ಮ ಶರೀರವನ್ನು ಶೃಂಗರಿಸಿದ್ದರು. ರಾಮದಾಸನು ಚಪ್ಪರದ ಹೊರಗಡೆಯಲ್ಲಿ ಯಾರೋ ಒಬ್ಬ ಸ್ನೇಹಿತನೊಡನೆ ಕುಶಾಲು ಮಾತನಾಡುತಿದ್ದನು. ಇನ್ನೂ ದಿಬ್ಬಣ ಬಂದಿರಲಿಲ್ಲ. ಎಲ್ಲರೂ ಮಾರ್ಗದ ಕಡೆಗೆ ದಿಬ್ಬಣವೇನು ಬರಲಿಲ್ಲ? ಎಂದು ಕುತೂಹಲ ದೃಷ್ಟಿಯಿಂದ ನೋಡುತಿದ್ದರು. ಅಷ್ಟರಲ್ಲಿ ಕಾರಿನ ಹೋರ್ನ್‌ಗಳನೇಕ ಕೇಳಿಸಿದುವು. ದಿಬ್ಬಣವು ಕಾರಿನಲ್ಲಿ ಬಂದು ಗೇಟಿನವರೆಗೆ ಬಂದಿತು.

ದಿಬ್ಬಣಿಗರು ಕೈಕಾಲು ತೊಳೆದುಕೊಂಡು ಮನೆಯವರ ವಿನಯದ ಹೇಳಿಕೆಯಂತೆ ಚಪ್ಪರಕ್ಕೆ ಬಂದು ಕುಳಿತರು. ದಿಬ್ಬಣಿಗರಿಗೆ ಕಾಫಿ, ಚಹ ಮತ್ತು ಕೆಲವು ಸಿಹಿ ತಿಂಡಿಗಳನ್ನು ಕೊಟ್ಟ ಮೇಲೆ ಯಶವಂತನು ಬಂದು ಜೊಯಿಸರೊಡನೆ ಇನ್ನು ಸುಮುಹೂರ್ತಕ್ಕೆ ಸಮಯವೆಷ್ಟಿದೆಯೆಂದು ಕೇಳಿದಾಗ ಜ್ಯೋತಿಷ್ಕನು ಇನ್ನು ಸುಮುಹೂರ್ತಕ್ಕೆ ಒಂದುಗಂಟೆಯಿದೆಯೆಂದು ಹೇಳಿದನು. ಪುರೋಹಿತರು ತಮ್ಮ ಕಾರ್ಯವನ್ನು ಮಾಡುತಿದ್ದರು. ಅತಿಥಿಗಳೆಲ್ಲರೂ ಸಮಯಕಳೆಯಲಿಕ್ಕಾಗಿ ಇಸ್ಪೇಟನಾಟವಾಡಲು ಪ್ರಾರಂಭಿಸಿದರು. ಜೊಯಿಸ, ಲೋಬೋ ಮತ್ತು ಕರಮಚಂದರೆಲ್ಲರೂ ಒಟ್ಟಾಗಿ ಕಲೆತು ಬಹಳ ವಿನೋದದಿಂದ ಆಟವಾಡುತಿದ್ದರು.

ಜೊಯಿಸನು ಸುಮುಹೂರ್ತವು ಸಮೀಪಿಸಿತು ಎಂದು ಹೇಳಲು ವಧೂವರರನ್ನು ವಿವಾಹಮಂಟಪಕ್ಕೆ ಕರೆತರಲು ಪುರೋಹಿತರು ಯಶವಂತ

ಸಿಂಹನೊಡನೆ ಹೇಳಿದರು. ವಧೂವರರು ವಿವಾಹ ಮಂಟಪಕ್ಕೆ ಬಂದುದೇ ತಡ, ಅಷ್ಟರಲ್ಲಿ ಆ ಮನೆಯ ಎಲ್ಲಾ ವಿದ್ಯುತ್ ದೀಪಗಳೂ ಆರಿಹೋದುವು. ನೆರೆದ ಜನರೆಲ್ಲ ಆಕಸ್ಮಾತ್ತಾಗಿ ಕತ್ತಲಾಗಲು ಕಾರಣವೇನೆಂದು ತಿಳಿಯದೆ ಕಳವಳಗೊಂಡರು. ಸಣ್ಣ ಮಕ್ಕಳೆಲ್ಲ ಕತ್ತಲೆಯಲ್ಲಿ ಹೆದರಿ ಚೀರುತ್ತಾ ತಮ್ಮ ತಾಯಂದಿರ ಸೆರಗನ್ನು ಹಿಡಿಯುತಿದ್ದರು. ಶಿಶುಗಳ ರೋದನವು ಆ ಇರುಳಿನಲ್ಲಿ ಪ್ರತಿಧ್ವನಿಯನ್ನುಂಟುಮಾಡುತಿತ್ತು. ಎಲ್ಲರೂ ಆಶ್ಚರ್ಯಗೊಂಡರು. ನವನಾಗರೀಕತೆಯಿಂದ ತುಂಬಿತುಳುಕುತ್ತಿರುವ ಈ ಮಂಗಳೂರು ನಗರದಲ್ಲಿ ಆಕಸ್ಮಾತ್ತಾಗಿ ವಿದ್ಯುತ್ ಉಪಕರಣಗಳು ಹಾಳಾಗಿ ಹೋಗಿರಲು ಕಾರಣವಿಲ್ಲ. ಯಾಕೆಂದರೆ ಮುಖ್ಯವಾದ ಉಪಕರಣಗಳೆಲ್ಲ ಹೊಸತಾದುವು ಎಂದರು. ಆಗ ರಾಮದಾಸನು ಗಟ್ಟಿಯಾಗಿ, ಬೇರೆ ಬೀದಿಗಳಲ್ಲೆಲ್ಲ ವಿದ್ಯುತ್ ದೀಪವಾರಲಿಲ್ಲವೆಂದೂ, ಇದೊಂದು ಬೀದಿಯಲ್ಲಿ ಮಾತ್ರ ವಿದ್ಯುತ್ ದೀಪವಾರಿಹೋಗಲು ಕಾರಣವೇನಾಗಿರಬಹುದೆಂದೂ ಒದರಿದನು. ಯಶವಂತನು ಕಳವಳಗೊಂಡು ಸೇವಕರೊಡನೆ ಪೆಟ್ರೋಮೇಕ್ಸ್ ಲೈಟನ್ನು ಹಚ್ಚಿರಿ ಎಂದನು. ಆದರೆ ಪೆಟ್ರೋಮೇಕ್ಸ್ ಲೈಟುಗಳೆಲ್ಲಿ ಇವೆ? ವಿದ್ಯುತ್ ಸರಬರಾಯಿ ಇರುವ ಮುಂದುವರಿದ ನಗರಗಳಲ್ಲಿ ಸರ್ವಸಾಧಾರಣವಾದ ದೀಪಗಳಿರುವುದು ಬಹಳ ವಿರಳವಷ್ಟೆ! ಆದರೂ ಸೇವಕರು ಆಚೀಚೆ ಹುಡುಕಿ ಒಂದೆರಡು ಪೆಟ್ರೋಮೇಕ್ಸ್ ಲೈಟುಗಳನ್ನು ಹುಡುಕಿ ತಂದು ಉರಿಸಿ ಚಪ್ಪರದಲ್ಲಿಟ್ಟರು ಇಷ್ಟಾಗುವಾಗ ವಿದ್ಯುತ್ ದ್ವೀಪವಾರಿ ಸಾಧಾರಣ ಅರ್ಧಗಂಟೆ ಕಳೆದಿರಬಹುದು

ವಾಚಕರೆ! ಆಕಸ್ಮಾತ್ತಾಗಿ ವಿದ್ಯುತ್ ದೀಪಗಳು ಆರಿಹೋಗಲು ಕಾರಣವೇನೆಂದು ನೀವು ತಿಳಿಯಲು ಆತುರಪಟ್ಟಿರಬಹುದು. ವೈಜ್ಞಾನಿಕನಾದ ಲೋಬೋನು ಕುಸುಮಳ ಸೌಂದರ್ಯವನ್ನು ಅದೊಂದು ದಿನ ಮೈದಾನಿನಲ್ಲಿ ಸಾಯಂಕಾಲ ತಿರುಗಾಡುತಿದ್ದಾಗ ಕಂಡು ಭ್ರಮೆಗೊಂಡಿದ್ದನು. ಅವಳನ್ನು ತನಗೆ ಮದುವೆಮಾಡಿಕೊಡೆಂದು ಪ್ರತ್ಯಕ್ಷವಾಗಿ ಯಶವಂತಸಿಂಹನೊಡನೆ ಹೇಳಲು ಅವನಿಗೆ ಸಾಧ್ಯವಿರಲಿಲ್ಲ. ಯಾಕೆಂದರೆ ಲೋಬೋನು ಕ್ರಿಶ್ಚನ್ ಮತಾನುಯಾಯಿಯಾಗಿದ್ದನಲ್ಲದೆ ಯಶವಂತನು ಹಿಂದೂಸಮಾಜದವನಾಗಿದ್ದನು. ಇದರಿಂದಲಾಗಿ ಯಾವುದಾದರೊಂದು ಕುಹಕೋಪಾಯದಿಂದ ಕುಸುಮಳನ್ನು ತನ್ನ ಮಾಯದ ಬಲೆಯಿಂದ

ಪಡೆಯಬೇಕೆಂಬ ದುರಾಲೋಚನೆಯನ್ನು ಮಾಡಿ, ಲೋಬೋನು ಅದ
ಕ್ಕಾಗಿ ಸಮಯ ಕಾಯುತ್ತಿದ್ದನು. ಅದೇ ಸಂದರ್ಭದಲ್ಲಿ ಕುಸುಮಳ ವಿವಾ
ಹವು ಡಾ|| ವಿಶ್ವನಾಥನೊಡನೆ ಜರಗಲಿರುವುದರಿಂದ ವಿವಾಹಕ್ಕೆ ಯಶವಂತ
ಸಿಂಹನಿಂದ ಲೋಬೋನಿಗೆ ಆಮಂತ್ರಣ ಬಂದಿತು. ಆಗ ಇನ್ನು ಸಮಯ
ಕಳೆದರೆ ಬೇಟೆಯು ತಪ್ಪಿಹೋಗಬಹುದೆಂದು ಹೆದರಿ ಅವನೊಂದು ಯುಕ್ತಿ
ಯನ್ನು ಯೋಚಿಸಿದನು. ಲೋಬೋನ ಅಭಿಪ್ರಾಯದಂತೆ ಅವನ ನೀಚ
ಕೆಲಸಗಳಿಗೆ ಸಹಾಯಕರಾಗಿದ್ದ ಜೊಸೆಫ್ ಮತ್ತು ಪಿಟ್ಟ ಇವರು ಕುಸುಮ
ಳನ್ನು ಅಪಹರಿಸಲು ಬದ್ಧಕಂಕಣರಾದರು. ವಿವಾಹದ ಸಮಯದಲ್ಲಿ
ಥಕ್ಕನೆ ವಿದ್ಯುತ್‌ಪ್ರವಾಹವನ್ನು ನಿಲ್ಲಿಸಿದರೆ ಯಾರಿಗಾದರೂ ಲೋಬೋನು
ದುರಾಲೋಚನೆಯಿಂದ ವಿದ್ಯುತ್‌ಪ್ರವಾಹವನ್ನು ನಿಲ್ಲಿಸಿರಬಹುದೆಂದು
ಊಹಿಸಿದರೆ ತನಗೆ ಕೇಡುಂಟಾಗಬಹುದೆಂದು ತಿಳಿದು ರಾಕ್ಷಸ ಹೃದಯದ
ವಿಜ್ಞಾನಿಯು ಪಿಟ್ಟನೊಡನೆ ನೀನು ಸಾಧಾರಣ ರಾತ್ರಿ ಒಂಬತ್ತೂವರೆ
ಗಂಟೆಗೆ ಯಶವಂತಸಿಂಹನಿರುವ ಬೀದಿಯ ಕಡೆಗೆ ಹರಿಯುವ ವಿದ್ಯುತ್
ಪ್ರವಾಹಗಳ ತಂತಿಗಳನ್ನು ತುಂಡರಿಸು. ಅನಂತರ ಯಾರಿಗೂ ತಿಳಿಯ
ದಂತೆ ವಿದ್ಯುತ್‌ದೀಪಗಳು ಆರಿಹೋದಾಗ ಗದ್ದಲದಲ್ಲಿ ಯಾರಿಗೂ ಅರಿಯ
ದಂತೆ ಕುಸುಮಳನ್ನು ಅಪಹರಿಸು ಎಂದನು. ಅದರಂತೆ ಆ ದಿನ ರಾತ್ರಿ ಒಂಭ
ತ್ತೂವರೆ ವಾಸಿಗೆ ಪಿಟ್ಟನು ಆ ಬೀದಿಯ ಕಡೆಯ ತಂತಿಯನ್ನು ಯಾರಿಗೂ
ತಿಳಿಯದಂತೆ ತುಂಡರಿಸಿದನು. ಆಗ ವಿವಾಹದ ಮನೆಯಲ್ಲಿ 'ಗುಲ್ಲು' ಎದ್ದಾಗ
ಜೊಸೆಫ್‌ನೂ ಕೊಯಿಲೊನೂ ಮುಖಕ್ಕೆ ಕರಿಯ ಮುಸುಕನ್ನು ಹಾಕಿ
ಕೊಂಡು ಕ್ಲೋರೋಫಾರ್ಮಿನಿಂದ ಅದ್ದಿ ತೆಗೆದ ಟವೆಲೊಂದನ್ನು ಕಿಸೆಯಿಂದ
ತೆಗೆದು ವಿವಾಹದ ಮಂಟಪದ ಕಡೆಗೆ ಮೆಲ್ಲಮೆಲ್ಲನೆ ಹೋಗಿ ಕತ್ತಲೆಯಲ್ಲಿ
ಯಾದರೂ ಕುಸುಮಳನ್ನು ಗುರುತಿಸಿ, ಅವಳ ಮುಖಕ್ಕೆ ಆ ಟವೆಲನ್ನು
ಹಿಡಿಯಲು ಅವಳು ಮೂರ್ಛೆಗೊಂಡಳು. ಕೂಡಲೇ ಆ ಆತತಾಯಿಗಳು
ಆ ಸುಕುಮಾರಿಯಾದ ಕುಸುಮಳನ್ನು ಕಠಿಣವಾದ ತಮ್ಮ ಕೈಗಳಲ್ಲಿ
ಹಿಡಿದು ಎತ್ತಿಕೊಂಡು ಎತ್ತಲೋ ಹೋದರು.

ಯಶವಂತನ ಹೇಳಿಕೆಯಂತೆ ಸೇವಕರು ಪೆಟ್ರೋಮೇಕ್ಸ್ ಲೈಟ್
ಗಳನ್ನು ಅರಸಿತಂದು ದೀಪಹಚ್ಚಿದಾಗ ಈ ಆಕಸ್ಮಿಕ ಘಟನೆಯು ನಡೆದು
ಹೋಯಿತು. ಆಗ ಪುರೋಹಿತರು ವಧುವೆಲ್ಲಿ? ಎಂದು ಯಶವಂತನೊಡನೆ

ಪ್ರಶ್ನಿಸಿದಾಗ ಅವನು ಕುಸುಮಳು ಇಮುವರೆಗೆ ಇಲ್ಲಿಯೇ ಇದ್ದಳಲ್ಲ? ಎಂದು ತಿರುಗಿ ನೋಡಿದನು; ಆದರೆ ಕುಸುಮಳು ಮಂಟಪದಲ್ಲಿರಲಿಲ್ಲ. ಆಗ ಯಶವಂತನು ವಿದ್ಯುತ್ ದೀಪವು ನಂದಿಹೋದಾಗ ಗಲಾಟೆಯೆಡೆಯಲ್ಲಿ ಎಲ್ಲಿಯಾದರೂ ಮನೆಯೊಳಗೆ ಹೋಗಿರಬಹುದೆಂದು ಒಳಗೆ ಹೋಗಿ ಕುಸುಮಳನ್ನು ಕರೆದನು; ಆದರೆ ಉತ್ತರವಿಲ್ಲ. ಆಗ ಅವನು ಭಯಗೊಂಡು ಮತ್ತೂ ಮತ್ತೂ ಕುಸುಮಳನ್ನು ಕರೆದನು; ಆದರೆ ನಿರುತ್ತರ. ಯಶವಂತನು ಚಿಂತಾಕ್ರಾಂತನಾಗಿ ಹುಚ್ಚನಂತೆ ನನ್ನ ಮಗಳು ಕುಸುಮಳೆಲ್ಲಿ? ಕುಸುಮಳೆಲ್ಲಿ? ಕುಸುಮ........ ಎಂದು ಚೀರಲು ಪ್ರಾರಂಭಿಸಿದನು; ಆದರೆ ಅವನ ಚೀತ್ಕಾರವೇ ಪ್ರತಿಧ್ವನಿಗೊಡುತಿತ್ತಲ್ಲದೆ ಕುಸುಮಳ ಸುಳಿವಿರಲಿಲ್ಲ. ಎಲ್ಲರೂ ವಧುವೆಲ್ಲಿ? ವಧುವೆಲ್ಲಿ? ಎಂದು ಕುತೂಹಲದಿಂದ ಪ್ರಶ್ನಿಸಲಾರಂಭಿಸಿದರು. ಇಷ್ಟರವರೆಗೆ ಸಂತೋಷಸಾಗರದಲ್ಲಿ ತೇಲಾಡುತಿದ್ದ ಅತಿಥಿಗಳೆಲ್ಲ ಈಗ ವಿಪತ್ಸಾಗರದಲ್ಲಿ ಮುಳುಗಿದರು. ನಂದನವನವು ಸ್ಮಶಾನದಂತಾಯಿತು ಯಶವಂತನ ದುಃಖವನ್ನು ಬಣ್ಣಿಸಲಸದಳವು. ಕರಮಚಂದರೇ ಮೊದಲಾದ ವ್ಯಕ್ತಿಗಳು ಎಷ್ಟು ಸಮಾಧಾನ ಮಾಡಿದರೂ ಯಶವಂತನ ರೋದನವು ಕಡಿಮೆಯಾಗಲಿಲ್ಲ. ಪ್ರವಾಹಕ್ಕೆದಿರಾಗಿ ಕಟ್ಟೆಕಟ್ಟಿದರೆ ನೀರು ತುಂಬಿದಾಗ ಅಕಸ್ಮಾತ್ತಾಗಿ ಕಟ್ಟೆಯೊಡೆದು ನೀರು ರಭಸದಿಂದ ಹರಿಯುವಂತೆ ಯಶವಂತನ ಕಣ್ಣೀರು ಹರಿಯಿತು. ಆಗ ಕರಮಚಂದನು ಎದ್ದುನಿಂತು ಗಟ್ಟಿಯಾಗಿ ಹೀಗೆಂದು ಹೇಳಿದನು ಮಹನೀಯರೆ! ಈ ದಿನ ನಮ್ಮ ಸ್ನೇಹಿತರಾದ ಯಶವಂತರ ಪ್ರಿಯ ಪುತ್ರಿಯಾದ ಕುಸುಮಳನ್ನು ನೀಚರಾರೋ ವಿದ್ಯುತ್ ದೀಪವು ಆರಿಹೋದಾಗ ಅಪಹರಿಸಿಕೊಂಡು ಹೋದರೆಂದು ತಿಳಿಯಬೇಕಾಗಿದೆ. ವಿದ್ಯುತ್ ದೀಪವನ್ನು ಆ ನೀಚರೇ ಆರಿಸಿರಬಹುದು ಆದ್ದರಿಂದ ನಾವೀಗ ದುಃಖಿಸಿ ಪ್ರಯೋಜನವಿಲ್ಲ. ದುಷ್ಟರೀಗ ಹೊರಗಡೆಯಲ್ಲಿ ಇರಬಹುದಾದ್ದರಿಂದ ಅವರ ಪತ್ತೆಹಚ್ಚಲು ನಾವೀಗ ಪ್ರಯತ್ನಿಸೋಣವೆಂದನು; ಮತ್ತು ಅವನು ಕೂಡಲೇ ರಾಮದಾಸನೊಡನೆ ಹೊರಟನು. ಆಗ ಬೇರೆ ಬೀದಿಯಲ್ಲಿನ ವಿದ್ಯುತ್ ದೀಪಗಳೆಲ್ಲ ಉರಿಯುತಿದ್ದುವು. ಹಾಗಾದರೆ ಈ ಬೀದಿಯಲ್ಲಿನ ದೀಪಗಳಾರಲು ಕಾರಣವೇನು? ಎಂದು ಕರಮಚಂದನು ಆಲೋಚಿಸುತ್ತಿರಲು, ರಾಮದಾಸನು ಅಣ್ಣನೊಡನೆ ಹಾ ದುಷ್ಟರು ವಿದ್ಯುತ್ ಸರಿಗೆಯನ್ನು ತುಂಡ

ರಿಸಿ ದೀಪವಾರಿಸಿದರು ಎಂದು ಹೇಳಿದನು. ಕರಮುಚಂದನು ವಿದ್ಯುತ್ ದೀಪಗಳ ಸರಿಗೆಯ ಕಡೆಗೆ ದೃಷ್ಟಿ ಹರಿಸಿದನು. ಸರಿಗೆಗಳು ತುಂಡಾಗಿದ್ದುವು. ಅವರು ಅಲ್ಲಿಲ್ಲಿ ಹುಡುಕಿದರೂ ಚೋರರು ಸಿಗಲಿಲ್ಲ. ಎಲ್ಲರೂ ವ್ಯಸನ ಪಟ್ಟರು. ಯಶವಂತಸಿಂಹನ ಸ್ಥಿತಿಯು ಚಿಂತಾಜನಕವಾಗಿದ್ದಿತು. ಕರಮುಚಂದನು ನಾನಿನ್ನು ಕೆಲವೇ ದಿವಸಗಳಲ್ಲಿ ಕುಸುಮಳನ್ನು ಪತ್ತೆಹಚ್ಚಿ ತರುವೆನೆಂದು ಭರವಸೆಕೊಟ್ಟ ಮೇಲೆಯೇ ಯಶವಂತನು ಚೆನ್ನಾಗಿ ಉಸಿರಾಡಲು ಪ್ರಾರಂಭಿಸಿದುದು. ನೆರೆದ ಜನರೆಲ್ಲ ಚಿಂತಿಸುತ್ತಾ ತಮ್ಮ ತಮ್ಮ ಮನೆಗೆ ತೆರಳಿದರು. ಡಾ|| ವಿಶ್ವನಾಥನ ಅವಸ್ಥೆಯನ್ನಂತೂ ಕೇಳುವುದೇಬೇಡ.

೦ ೦ ೦ ೦ ೦

ಮರುದಿವಸ ಪಟ್ಟಣದಲ್ಲೆಲ್ಲ ಗದ್ದಲವೇ ಗದ್ದಲ. ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನ ಮನೆಯಲ್ಲಿ ಅವನ ಮಗಳ ವಿವಾಹ ದಿವಸ ಕುಸುಮಳನ್ನು ಅಂದರೆ ವಧುವನ್ನು ದಸ್ಯುಗಳು ಅಪಹರಿಸಿದರು ಎಂದು ಎಲ್ಲರೂ ಬೊಬ್ಬಿಟ್ಟರು ನಾಗರೀಕರೆಲ್ಲ ಕಳವಳಗೊಂಡರು. ಈ ಮಂಗಳೂರು ಪಟ್ಟಣದಲ್ಲಿ ಇನ್ನು ಸಭ್ಯರಿಗೆ ವಾಸಿಸಲು ಎಡೆಯಿಲ್ಲವೆಂದು ಎಲ್ಲರೂ ಮರುಗಿದರು. ಪೋಲೀಸ್ ಸುಪರಿಡೆಂಟರನ್ನೇ ಕೆಣಕುವಷ್ಟು ಧೈರ್ಯವುಳ್ಳ ಚೋರರು ಅದಾರಾಗಿರಬಹುದು? ಎಂದು ಚಿಂತಿಸುತ್ತಾ ಆ ಆತತಾಯಿಗಳ ವಿಷಯವಾಗಿ ನಾಗರೀಕರು ಭಯಪಡಲಾರಂಭಿಸಿದರು.

ಪಾಠಕರೆ! ಕುಸುಮಳನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋದ ಜಂತುಗಳು ಎಲ್ಲಿಗೆ ಹೋದರೆಂದು ನೋಡುವ. ಆ ಚೋರರಿಬ್ಬರು ಸ್ಮೃತಿತಪ್ಪಿರುವ ಕುಸುಮಳನ್ನು ಮಾರ್ಗದ ಬದಿಗೆ ಕರೆದುಕೊಂಡು ಬಂದರು. ಅಲ್ಲಿ ಪಿಟ್ಟನು ಬಿಳಿ ಫೋರ್ಡ್ ಕಾರನ್ನು ತಂದು ಕಾದು ಕುಳಿತಿದ್ದನಾಗ. ಅವರೆಲ್ಲರೂ ಕಾರಿನಲ್ಲಿ ಕುಳಿತು ವಿಶ್ರಾಂತಿ ಭವನದಿಂದ ದಕ್ಷಿಣಕ್ಕಿರುವ ಅದೊಂದು ಮನೆಗೆ ಹೋದರು. ಕಾರು ಅಲ್ಲಿಗೆ ತಲಪಿದ ಕೂಡಲೆ ಕುಸುಮಳನ್ನು ಕೆಳಗಿಳಿಸಿ ಆ ಮನೆಯ ನೆಲಮಾಳಿಗೆಗೆ ಕರೆದುಕೊಂಡು ಹೋದರು. ಅಲ್ಲಿ ಶೃಂಗರಿಸಲ್ಪಟ್ಟ ಭವ್ಯವಾದೊಂದು ಕೋಣೆಯಲ್ಲಿ ಸ್ಪ್ರಿಂಗ್‌ನ ಉತ್ತಮವಾದ ಮಂಚದಲ್ಲವಳನ್ನು ಮಲಗಿಸಿದರು. ಅನಂತರ ಆ ಚೋರತ್ರಯರು ಅಲ್ಲಿಂದ ಮೇಲೆ ಬಂದು ದಾಸಿಯೊಬ್ಬಳನ್ನು ಕಾವಲು ಮಾಡಲು ಕಳುಹಿಸಿದರು. ದಾದಿಯು ಬಂದು ಮಂಚದ ಕೆಳಗಡೆಯಲ್ಲಿ

ಕುಳಿತುಕೊಂಡು ಬೀಸಣಿಗೆಯಿಂದ ಗಾಳಿಹಾಕಲು ಪ್ರಾರಂಭಿಸಿದಳು. ಸ್ವಲ್ಪ ಸಮಯದಲ್ಲಿ ತಂಗಾಳಿಯಿಂದಲಾಗಿ ಕುಸುಮಳಿಗೆ ಸ್ಮೃತಿಬಂದಿತು. ಆಗ ಅವಳು ತಾನೊಂದು ಮನೋಹರವಾದ ಕೊಠಡಿಯಲ್ಲಿ ಸ್ಪ್ರಿಂಗ್‌ನ ಮಂಚದಲ್ಲಿ ಮಲಗಿರುವೆನೆಂದು ಊಹಿಸಿದಳು. ಹತ್ತಿರದಲ್ಲಿಯೇ ದಾಸಿಯೋರ್ವಳು ಇರುವುದನ್ನು ಕಂಡು ನಾನೀಗ ಯಾರ ಬಂಧನದಲ್ಲಿರುವೆನು? ಎಂದು ಪ್ರಶ್ನಿಸಿದಳು. ಅವಳು ಆಗ ನೀವೀಗ ಚೋರ ಸಾರ್ವಭೌಮನ ಬಂಧನದಲ್ಲಿರುವಿರಿ ಭಯಪಡಬೇಕಾದ ಕಾರಣವಿಲ್ಲವೆಂದಳು ಚೋರ ಸಾರ್ವಭೌಮನೆಂಬ ಹೆಸರಿನಿಂದ ಪ್ರಸಿದ್ಧನಾದೊಬ್ಬ ನೀಚನು ಈ ಪಟ್ಟಣದಲ್ಲಿ ಅನೇಕ ಅತ್ಯಾಚಾರ ಕಳವುಗಳನ್ನು ಮಾಡುತ್ತಿರುವನು, ಎಂದು ಕುಸುಮಳು ತಂದೆಯು ಹೇಳುತ್ತಿದ್ದುದನ್ನು ಕೇಳಿ ತಿಳಿದಿದ್ದಳು ಅದ್ದರಿಂದ 'ಚೋರ ಸಾರ್ವಭೌಮ' ಎಂಬ ಹೆಸರನ್ನು ದಾದಿಯು ಉಚ್ಚರಿಸಿದ ಕೂಡಲೇ 'ಮೂಲವಂ ಕೊಯ್ದೊಡೆಯ ಬಳ್ಳಿಯಂತೆ' ಬಾಡಿ ಬೆಂದು ಮೂರ್ಛಿತಳಾಗಿ ಬಿದ್ದಳು. ದಾಸಿಯು ಅವಳ ಮುಖಕ್ಕೆ ತಣ್ಣೀರನ್ನು ಚಿಮುಕಿಸಿ ಮೆಲ್ಲನೆ ಗಾಳಿಹಾಕಲು ಪ್ರಾರಂಭಿಸಿದಳು. ಸಾಧಾರಣ ಪ್ರಾತಃಕಾಲ ನಾಲ್ಕು ಗಂಟೆಗೆ ಕುಸುಮಳಿಗೆ ಎಚ್ಚರಿಕೆಯಾಯಿತು. ವಿದ್ಯುತ್ ದೀಪವಾಗ ಉರಿಯುತಲೇ ಇದ್ದಿತು. ದಾಸಿಯು ಕುಳಿತಲ್ಲಿಯೇ ನಿದ್ರಿಸುತಿದ್ದುದನ್ನು ಕಂಡು ಸೇವಕ ವೃತ್ತಿಯು ಬಹಳ ಕಷ್ಟವೆಂದು ಕುಸುಮಳು ತನ್ನ ಮನಸ್ಸಿನಲ್ಲಿಯೇ ಹೇಳಿದಳು. ತನ್ನ ಬಂಧನದ ವಿಷಯ ನೆನಪಾದೊಡನೆ ದುಃಖದಿಂದ ಕಣ್ಣೀರು ಸುರಿಸಿದಳು.

ಸಾಧಾರಣ ಬೆಳಗ್ಗೆ ಐದೂವರೆ ಗಂಟೆಯಾಗಿರಬಹುದು. ಆಜಾನುಬಾಹುವಾದ ವ್ಯಕ್ತಿಯೊಬ್ಬನು ಕುಸುಮಳಿರುವ ಕೋಣೆಗೆ ಬಂದನು. ಅವನನ್ನು ಕಂಡ ಕೂಡಲೇ ಕುಸುಮಳು ಅವನನ್ನು ಗುರುತಿಸಿದಳು. ಅವನೇ ವಿಜ್ಞಾನಿಯಾದ ಲೋಬೋ ಎಂದು ವಾಚಕರರಿತಿರಬಹು. ವಿಜ್ಞಾನಿಯಾದ ಲೋಬೋನನ್ನು ಕಂಡು ಕುಸುಮಳು ಹರ್ಷಗೊಂಡು ದೊಡ್ಡ ಪ್ರವಾಹದಲ್ಲಿ ತೇಲಾಡಿಕೊಂಡು ಹೋಗುತ್ತಿರುವಾಗ ಹಿಡಿಯಲು ಒಂದು ಬಲವಾದ ಕೊಂಬೆಯು ಸಿಕ್ಕಿದಂತೆ ನೆನಸಿದಳು; ಆದರೆ ವಾಚಕರೆ! ಅದೇ ಕೊಂಬೆಯೇ ಭಯಂಕರವಾದ ಕಾರ್ಕೋಟಕ ಸರ್ಪವಾಗಿರುವುದೆಂದು ಪಾಪ! ಆ ಸಾಧ್ವಿಯಾದ ಅಬಲೆಗೇನು ಗೊತ್ತು? ಅವಳು ಲೋಬೋನನ್ನು

ಕಂಡು ಮುಗುಳುನಗು ನಗುತ್ತಾ ವೈಜ್ಞಾನಿಕರೆ! ನಿಮ್ಮನ್ನು ಕಂಡು ನನಗೆ ಬಹಳ ಸಂತೋಷವಾಯಿತು. ನಾನೀಗ ವಿಪತ್ತಾಗರದಲ್ಲಿ ಮುಳಿಗೇಳುತ್ತಾ ಇರುವೆನು. ತಂದೆಯವರ ಆಪ್ತಮಿತ್ರರಾದ ನೀವು ನನ್ನನ್ನು ಈ ಅತಿ ಭಯಂಕರವಾದ ಬಂಧನದಿಂದ ಬಿಡಿಸಬೇಕಾಗಿ ಬೇಡಿಕೊಳ್ಳುವೆನು. ನೀಚನೋರ್ವನು ನನ್ನನ್ನು ವಿವಾಹದ ದಿನ ಕುಹಕೋಪಾಯದಿಂದ ಸ್ಮೃತಿ ತಪ್ಪಿಸಿ ಬಂಧಿಸಿ ಇಟ್ಟಿರುವನು. ಅವನ ದುರಾಲೋಚನೆಯೇನೋ? ಎಂದು ಹೇಳಿ, ನೀವು ವನ್ಯಹಿಂಸ್ರ ಜಂತುಗಳೇ ಮಾನವರೂಪದಿಂದ ಬಂದಿರುವ ಈ ದುಷ್ಟರ ಮನೆಗೆ ಹೇಗೆ ಬಂದಿರಿ? ಎಂದು ಕೇಳಿದಳು. ಲೋಬೋನಾಗ ಮಾತನಾಡಲು ಪ್ರಾರಂಭಿಸಲವಳು ಸ್ವಲ್ಪ ತಡೆಯಿರಿ, ಮೆಲ್ಲನೆ ಮಾತನಾಡಿರಿ. ನೀಚರ ಕಡೆಯ ದಾಸಿಯು ಇಲ್ಲಿ ಕುಳಿತಲ್ಲಿಯೇ ನಿದ್ರಿಸಿರುವಳು. ಅವಳಿಗೆ ಎಚ್ಚರಿಕೆಯಾದರೆ ಅನರ್ಥವಾದೀತು ಎಂದಳು. ಕುಸುಮಳ ಮೃದುವಾದ ಕೋಕಿಲ ಸ್ವರವನ್ನು ಆಲೈಸುತಲಿದ್ದ ಲೋಬೋನು ಮುಗುಳುನಗುತ್ತಾ ಕುಸುಮಳೇ, ನೀನು ಭಯಪಡಬೇಡ. ನಿನಗೆ ಇಲ್ಲಿರುವ ಯಾವದೊಂದು ವಸ್ತುವಿನಿಂದಲೂ ಅಪಾಯ ಉಂಟಾಗದು. ನೀನೀಗ ಸಂತೋಷದಿಂದಿರಬಹುದು. ನನಗೀಗ ಅತಿ ಜರೂರಾದ ಕೆಲಸವಿರುವುದರಿಂದ ಬೇರೆ ಕಡೆಗೆ ಹೋಗಬೇಕಾಗಿದೆಯಾದುದರಿಂದ ನಾನು ರಾತ್ರಿ ಒಂಭತ್ತು ಗಂಟೆಗೆ ಇಲ್ಲಿಗೆ ಬರಲಿಕ್ಕಿರುವೆನು. ನೀನಿನ್ನು ಚಿಂತೆಯನ್ನು ಬಿಟ್ಟು ಈಗ ತಾನೇ ಅರಳಿದ ಕಮಲದಂತೆ ಕಂಗೊಳಿಸುತ್ತಾ ಇರು, ಎಂದು ಹೇಳಿ ಅವಳ ಉತ್ತರವನ್ನು ನಿರೀಕ್ಷಿಸದೆ ಅಲ್ಲಿಂದ ಹೊರಟು ಹೋದನು.

ವಿಜ್ಞಾನಿಯಾದ ಲೋಬೋನು ಅಕಸ್ಮಾತ್ತಾಗಿ ಬಂದು, ಕೂಡಲೇ ಹೋದಾಗ ಕುಸುಮಳಿಗೆ ಅಚ್ಚರಿಯಾಯಿತು. ಈ ದುಷ್ಟರ ನಿವಾಸಸ್ಥಳಕ್ಕೆ ಇವನು ಬರಲು ಕಾರಣವೇನಿರಬಹುದೆಂದೂ ಹೇಗೆ ಬಂದನೆಂದೂ ಆ ತರುಣಿಗೆ ತರ್ಕಿಸಲು ಸಾಧ್ಯವಾಗಲಿಲ್ಲ. ಅವನು ನೀನಿಲ್ಲಿ ಭಯಪಡಬೇಕೆಂದಿಲ್ಲ, ಸಂತೋಷದಿಂದಿರು ಎನ್ನಬೇಕಾದರೆ ಇಲ್ಲಿನವರು ಅವನಿಗೆ ಚೆನ್ನಾಗಿ ಪರಿಚಿತರಿರಬೇಕಲ್ಲವೆ. ಅವನ ಮಾತನ್ನು ಮೀರಲು ಇಲ್ಲಿನ ನೀಚರು ಅಂಜುತ್ತಾರೆಂದು ತಿಳಿಯಲೆ! ಎಂದಾಲೋಚಿಸಿದಾಗ, ಹಾಗಾದರೆ ಇವನೇನು ದುಷ್ಟನೆ? ಎಂದು ಅವಳಿಗೆ ಫಕ್ಕನೆ ಹೊಳೆಯಿತು. ಏನೇನಾದರೂ ವಿಕಲ್ಪವನ್ನು ಗ್ರಹಿಸಿ ತನ್ನ ಮನಸ್ಸನ್ನು ಹಾಳು ಮಾಡಲವಳು ಹೇಸಿ ಹೇಗಾದರೂ

ರಾತ್ರಿ ೯ ಗಂಟೆಗೆ ಬರುತ್ತೇನೆಂದು ಹೇಳಿದ್ದಾನಲ್ಲವೆ! ಆಗ ಚೆನ್ನಾಗಿ ಆಲೋಚಿಸುವ, ಎಂದು ಸುಮ್ಮನೆ ಕುಳಿತಳು. ದಾಸಿಯು ಲೋಬೋನು ಕುಸುಮ ಳೊಡನೆ ಮಾತನಾಡುತಿದ್ದುದನ್ನು ಕೇಳಿದ್ದರೂ ಕಿವಿಕ್ರೆ ಬಂದವರಂತೆ ನಟಿಸಿ ದ್ದಳು. ದಾಸಿಯು ಬೆಳಿಗ್ಗೆ ಕಾಫಿ ಮತ್ತು ತಿಂಡಿಯನ್ನು ತಂದು ಕುಸುಮ ಳಿಗೆ ಕೊಟ್ಟಳು. ಕುಸುಮಳು ಮುಸಿಸ್ಸಿಲ್ಲದ ಮನಸ್ಸಿನಿಂದ ಆ ತಿಂಡಿ ತಿನಸುಗಳನ್ನು ಸೇವಿಸಿದಳು. ಮಧ್ಯಾಹ್ನವೂ ಅತಿ ಉತ್ತಮವಾದ ಭೋಜನ ಸಾಮಗ್ರಿಯನ್ನು ಕುಸುಮಳ ಕೋಣೆಗೆ ದಾಸಿಯು ತಂದಿಟ್ಟು ಹೋದಳು ದಾಸಿಯೊಡನೆ ಕುಸುಮಳು ನನ್ನನ್ನು ಇಲ್ಲಿ ಬಂಧಿಸಿಟ್ಟು ರಾಜ ಯೋಗ್ಯವಾದ ವಸ್ತುಗಳನ್ನು ಕೊಟ್ಟು ಇಲ್ಲಿ ನಿನ್ನ ಯಜಮಾನನು ಯಾವ ದುರಾಲೋಚನೆಯಿಂದ ಪೀಡಿಸುತ್ತಿರುವನು? ಎಂದು ಪ್ರಶ್ನಿಸಿದಾಗ ಆ ದಾಸಿಯು ರಾಣಿಯವರೆ! ನಮ್ಮ 'ಚೋರ ಸಾರ್ವಭೌಮ'ರು ನಿಮ್ಮ ರೂಪ ಲಾವಣ್ಯಗಳನ್ನು ಕಂಡು ಕೇಳಿ ನಿಮ್ಮಲ್ಲಿ ಮೋಹಿತರಾಗಿರುವರು ಎಂದಳು. ಈ ಮಾತನ್ನು ಕೇಳಿದಾಗ ಕುಸುಮಳು ಸಿಟ್ಟಿನಿಂದ ಕೆಂಪಾಗಿ ಕಣ್ಣಿನಿಂದ ಬೆಂಕಿಯನ್ನು ಕಾರಿದಳು. ಎಲೆ! ಪಾಪಿಷ್ಠೆ! ನಿನ್ನ ನಾರುವ ನಾಲಿಗೆಯಿಂದ ಹೊಲಸು ಶಬ್ದಗಳು ಹೊರಬೀಳುವವಲ್ಲವೆ ಯೋಗ್ಯ ಮಾತುಗಳು ಬರಲಿ ಕ್ಕಿಲ್ಲ ನಿನ್ನಂತಹ ನೀಚ ಸ್ತ್ರೀಯರಿಗೆ ಧಿಃಕಾರವಿರಲಿ! ಎಂದಳು. ದಾಸಿಯು ಮಾತನಾಡದೆ ಸುಮ್ಮನೆ ಕು ಸು ಮ ಳ ಮುಖವನ್ನೇ 'ಟಕಮಕ'ನೆ ನೋಡುತ್ತಾ ನಿಂತಳು.

ಸಾಧಾರಣ ರಾತ್ರಿ ಎಂಟುಗಂಟೆಯಾಗಿರಬಹುದು. ದಿನಕರನು ಮಾರ್ಗಾಯಾಸದಿಂದ ಬಳಲಿ ವಿಶ್ರಮಿಸಿ ಸಾಧಾರಣ ಒಂದೂವರೆಗಂಟೆ ಯಾಗಿರಬಹುದು ಎಲ್ಲೆಲ್ಲೂ ನಿಶಾದೇವಿಯು ತನ್ನ ವರ್ಚಸ್ಸನ್ನು ಬೀರಿ ದ್ದಳು. ಕತ್ತಲೆಯೆಂದರೆ ದಾರಿಯಲ್ಲಿ ಒಂದು ಗಜ ದೂರದಲ್ಲೊಬ್ಬ ಮನು ಷ್ಯನೇ ಇರಲಿ, ಮರವೇ ಇರಲಿ ಅಥವಾ ಸಿಂಹವೇ ಇರಲಿ ಗೊತ್ತಾಗ ದಂತಹ ಕಾರಿರುಳು. ಅದರಲ್ಲೂ ಈ ದಿನ ಅಮಾವಾಸ್ಯೆ. ಅಮಾವಾಸ್ಯೆ ಯೆಂದರೆ ಕೇಳಬೇಕೆ! ಕೃಷ್ಣಪಕ್ಷದ ಕಾರಿರುಳಿನಲ್ಲಿ ರಾಕ್ಷಸ ಹೃದಯನಾದ ಮಾನವನಂತಿರುವ ಲೋಬೋನ ಕೃಷ್ಣಕಾರಸ್ಥಾನಕ್ಕೆ ಯೋಗ್ಯ ಕಾಲ. ರಾಕ್ಷಸರು ಅಣಿಮಾದಿ ಅಷ್ಟ ಸಿದ್ಧಿಗಳನ್ನು ಹೊಂದಿ ಅದರ ಬಲದಿಂದ ಬೇಕಾದ ರೂಪಗಳನ್ನು ಧರಿಸಿಕೊಂಡು ಕಾರ್ಯಗಳನ್ನು ಮಾಡುತ್ತಾರಂತೆ.

ಅದೇ ರೀತಿಯಲ್ಲಿ ಈಗ ಲೋಬೋನು ಶೂಟ್ ಧರಿಸಿ ಬಿಳೀ ಕೋಟನ್ನು ತೊಟ್ಟುಕೊಂಡು ಕೃತಕ ಗಡ್ಡಮೀಸೆಗಳನ್ನಿಟ್ಟು ತಲೆಗೆ ಫೇಟಾವನ್ನು ಸುತ್ತಿಕೊಂಡನು. ಬಹುಶಃ ಅವನು ಅಷ್ಟಸಿದ್ಧಿಗಳಿಂದಲಾಗಿ ಈ ರೂಪವನ್ನು ಧರಿಸಿರಬಹುದೆಂದು ವಾಚಕರೂಹಿಸಿರಬಹುದು. ಹಾಗಾದರೆ ಅವನನ್ನು ನಿಶಾಚರನೆಂದರೆ ತಪ್ಪಿಲ್ಲವಷ್ಟೆ! ವಿಜ್ಞಾನಿಯಾದ ಲೋಬೋನ ಹೃದಯವಂತೂ ಹಾಲಾಹಲ ವಿಷದಂತೆ ಕ್ರೂರವಾದುದಲ್ಲದೆ ಅವನು ತನ್ನ ನೀಚವಾದ ಅತಿ ಹೇಯವಾದ ದುಷ್ಕರ್ಮಗಳನ್ನು ರಾತ್ರಿಯಲ್ಲಿ ಮಾಡುತಿದ್ದುದರಿಂದವನನ್ನು ನಿಶಾಚರನೆಂದರೆ ಅತಿಶಯೋಕ್ತಿಯಾಗಲಾರದು. ಅವನು ಛದ್ಮವೇಷ ಧರಿಸಿ ಮನೆಯಿಂದ ಹೊರಬಂದನು ಆಗ ಎಲ್ಲೆಲ್ಲೂ ನೀರವವಾಗಿದ್ದು ಜನರು ನಿದ್ರಿಸುತಿದ್ದರು. ಅಂತಹ ನಿಃಶಬ್ದವಾದ ಕಾಳರಾತ್ರಿಯಲ್ಲಿ ಅವನು ಅದೊಂದು ಜೀಪ್ ಕಾರನ್ನೇರಿದನು. ನಿಶೆಯ ಗುಪ್ತಚಾರರಾದ ತಾರೆಗಳು ಮೆಲ್ಲನೆ ಅಲ್ಲಲ್ಲಿ ಇಣಿಕಿ ಲೋಬೋನನ್ನು ನೋಡುತಿದ್ದುವು. ಮಂದಮಾರುತವು ಬೀಸುತ್ತಿರಲು ಅವನು ಆ ಜೀಪ್ ಕಾರನ್ನು ವಾಯುವೇಗದಿಂದೋಡಿಸುತ್ತಿರಲು, ತಟಸ್ಥವಾಗಿದ್ದ ವಾತಾವರಣವನ್ನು ಕಾರಿನ ಶಬ್ದದ ಅಲೆಗಳು ಚಲಿಸುವಂತೆ ಮಾಡಿದುವು. ಕಾರು ಸ್ವಲ್ಪ ಸಮಯದಲ್ಲಿ ಕೊಯಿಲೋನ ಮನೆಯ ಎದುರುಗಡೆಗೆ ಬಂದು ನಿಂತಿತು. ಅನಂತರ ವಿಜ್ಞಾನಿಯು ಕಾರಿನಿಂದಿಳಿದು ಆ ಮನೆಯ ನೆಲಮಾಳಿಗೆಗೆ ಹೋದನು. ಆಗ ಸಾಧಾರಣ ರಾತ್ರಿ ಒಂಬತ್ತುಗಂಟೆಯಾಗಿರಬಹುದು. ಕುಸುಮಳು ವಿಜ್ಞಾನಿಯ ದಾರಿಕಾಯುತಿದ್ದಳು. ಬೂಟ್ಸಿನ ಶಬ್ದಕೇಳಿ ಅವಳು ಬಾಗಿಲಿನ ಕಡೆಗೆ ನೋಡಿದಾಗ ಇಲೆಕ್ಟ್ರಿಕ್ ಪ್ರಕಾಶದಲ್ಲಿ ಅದಾರೋ ಒಬ್ಬ ಯುವಕನು ನಿಂತಿರುವುದನ್ನು ಕಂಡಳು. ಈ ಅಪರಿಚಿತನು ದಸ್ಯುಗಳಲ್ಲೊಬ್ಬನಾಗಿರಬಹುದೆಂದೂಹಿಸಿ ಅವಳು ಮುಖ ತಿರುಗಿಸಿದಳು. ಆಗಂತುಕ ಯುವಕನು ಕೋಣೆಯೊಳಗೆ ಬಂದು ದಾಸಿಯೊಡನೆ ಹೊರ ಹೋಗೆಂದನು. ಅನಂತರವನು ಬಾಗಿಲಿನ ಚಿಲಕವನ್ನು ಹಾಕಿ ಟೇಬಲ್ಲಿನ ಬಳಿ ಬಂದು ಕುರ್ಚಿಯೊಂದರಲ್ಲಿ ಮಂಡಿಸಿದನು. ಆ ತರುಣನ ವರ್ತನೆಯನ್ನು ಕಂಡು ಕುಸುಮಳು ಅಸಹ್ಯಪಟ್ಟಳು.

ಆಗಂತುಕ ತರುಣನು ಕುಸುಮಳನ್ನುದ್ದೇಶಿಸಿ ಬಾಲಿಕೆಯೇ ನಾನಾರೆಂದು ನೀನು ಗುರುತಿಸಲಿಲ್ಲವೆಂದು ಕಾಣುತ್ತದೆಯೆಂದನು ಕುಸುಮಳು

ಮಾತನಾಡದೆ ಮೌನವಾಗಿದ್ದಳು. ತರುಣನು ಹ್ಹೊ....ಹ್ಹೊ....ಹ್ಹೊ.... ಎಂದು ನಗೆದಾಡುತ್ತಾ ತನ್ನ ಕೃತಕ ಗಡ್ಡ ಮೀಸೆಗಳನ್ನು ತೆಗೆದು ಮೆಲ್ಲನೆ ಕುಸುಮಳು ಕುಳಿತಿದ್ದ ಮಂಚದ ಬಳಿಗೆ ಬಂದನು. ಆಗ ತರುಣಿಯು ನೀಚನೆ! ನೀನಾರು? ಎಂದು ಬೊಬ್ಬಿಟ್ಟು ಕತ್ತೆತ್ತಿ ನೋಡಿದಳು ಆಗ ಬಂದ ವ್ಯಕ್ತಿಯು ಲೋಬೋನೆಂದವಳಿಗೆ ಗೊತ್ತಾಯಿತು. ಆಗವಳು ವಿಜ್ಞಾನಿ ಗಳೆ! ನಾನು ಯಾರೋ ದುಷ್ಟರು ಕೋಣೆಗೆ ತಾಲಿಟ್ಟರೆಂದು ಭ್ರಮಿಸಿದು ದಕ್ಕೆ ಕ್ಷಮಿಸಿರಿ! ಈಗಲೇ ನನ್ನನ್ನಿಲ್ಲಿಂದ ಸಂರಕ್ಷಿತವಾಗಿ ಕರೆದುಕೊಂಡು ಹೋಗಿರಿ, ಎಂದು ಕೇಳಿಕೊಂಡಳು ಲೋಬೋನು ಮಾತನಾಡಲಿಲ್ಲ. ಸ್ವಲ್ಪ ಸಮಯ ಕಳೆದ ಮೇಲೆ ಅವನು ನಿನ್ನನ್ನು ಇಲ್ಲಿ ಬಂಧಿಸಿದವರಾರೆಂಬದು ನಿನಗೆ ತಿಳಿದಿದೆಯೋ, ಎಂದು ಪ್ರಶ್ನಿಸಿದನು ಆಗ ಕುಸುಮಳು ಚೋರ ಸಾರ್ವಭೌಮನೆಂಬ ಧೂರ್ತಶಿಖಾಮಣಿಯು ನನ್ನನ್ನು ಬಲಾತ್ಕಾರದಿಂದ ವಿವಾಹವಾಗಲು ಸೆರೆಹಿಡಿದಿರುವನೆಂದು ದಾಸಿಯಿಂದ ತಿಳಿಯಿತೆಂದಳು. ಲೋಬೋನು ಆಗ ಅದಿರಲಿ. ನೀನೀಗ ನನ್ನನ್ನು ವಿವಾಹವಾಗಲು ಇಚ್ಛೆ ಪಡುತ್ತೀಯಾ? ಎಂದು ಕೇಳಲು ಅವಳು 'ಶಾಂತಂ ಪಾಪಂ' ಎಂದು ಕೈ ಗಳನ್ನು ಕಿವಿಗೆ ಮುಚ್ಚಿಕೊಂಡಳು. ತಾನೀಗ ಕನಸಿನಲ್ಲಿರುವೆನೇ ಎಂದ ವಳು ಭ್ರಮಿಸಿದಳು; ವಿಜ್ಞಾನಿಯು ತನ್ನ ಮಾತನ್ನು ಮುಂದುವರಿಸುತ್ತಾ ಸುಂದರಿಯೆ! ಚೋರ ಸಾರ್ವಭೌಮನೆಂದರೆ ನಾನೇ! ನೀನೀಗ ನನ್ನ ಅಧೀನದಲ್ಲಿರುವೆಯಷ್ಟೆ! ಸಾವುದಿಂದ ನಾನು ಹೇಳಿದ ಮಾತನ್ನು ನೀನು ಅಲ್ಲಗಳೆದೆಯಾದರೆ ಬಲಾತ್ಕಾರದಿಂದಲಾದರೂ ನನ್ನ ಇಚ್ಛೆಯನ್ನಿಡೇರಿಸದೆ ಇರಲಾರೆನು ಎಂದನು ಇಷ್ಟರ ವರೆಗೆ ಆಪ್ತನೆಂದು ತಿಳಿದ ಲೋಬೋನು ತನ್ನ ನಿಜವಾದ ಶತ್ರುವೆಂದು ಕುಸುಮಳಿಗೀಗ ಅರಿವಾಯಿತು. ನಾಗಿಣಿ ಯಂತವಳು ಸಿಟ್ಟುಗೊಂಡು ಲೋಬೋನ ಅವಮಾನಸೂಚಕವಾದ ನಿಂದಾ ಸ್ಪದವಾದ ವರ್ತನೆಗೆ ನಾಚಿ ಅವನನ್ನು ಹೇಯವಾಗಿ ತಿಳಿದು ಕ್ರೋಧದಿಂದ ಥರಥರನೆ ನಡುಗಿದಳು. ಲೋಬೋನು ತನ್ನ ವಿಷಯಾನುರಾಗವನ್ನು ಸಾಧಿಸಲು ಪ್ರಯತ್ನಪಡುತ್ತಾ ನೀನು ಸುಮ್ಮನೆ ಹಟ ಹಿಡಿಯಬೇಡ. ಸಾಕ್ಷಾತ್ ತ್ರಿಮೂರ್ತಿಗಳೇ ಅರಸುತ್ತಾ ಬಂದರೂ ನೀನಿಲ್ಲಿರುವುದು ಅವರಿಗೆ ತಿಳಿಯಲಿಕ್ಕಸಾಧ್ಯವಿರುವಾಗ ಮಾನವರಾದ ನಿನ್ನ ಬಂಧುಗಳ ಪಾಡೇನು?

ನೀನಿನ್ನು ಸಾವಕಾಶದಿಂದ ಯುಕ್ತಾಯುಕ್ತಗಳನ್ನು ವಿಚಾರಿಸಿ ದಾಸಿಯೊಡನೆ ನಿನ್ನ ಅಭಿಪ್ರಾಯವನ್ನು ತಿಳಿಸು, ಎಂದು ಹೇಳಿ ಹೊರಟು ಹೋದನು.

ವೈಜ್ಞಾನಿಕನಾದ ಲೋಬೋನ ಪೈಶಾಚಿಕ ವರ್ತನೆಯನ್ನು ಕಂಡು ಕುಸುಮಳ ಜೀವವೇ ಹಾರಿಹೋದಂತಾಯಿತು. ಸಭ್ಯಗೃಹಸ್ಥನಂತೆ ನಟಿಸುತ್ತಿರುವ ಈ ವಿಜ್ಞಾನಿಯೇ " ಚೋರಸಾರ್ವಭೌಮನೆಂಬ ಹೆಸರಿನಿಂದ ಕೊಲೆ, ಕಳವು, ಅತ್ಯಾಚಾರಗಳನ್ನು ಮಾಡುತ್ತಿರುವನೆಂದು ಕುಸುಮಳಿಗೀಗ ವ್ಯಕ್ತವಾಯಿತು. ತನಗಿನ್ನು ಇಹಲೋಕದ ಆಶೆಯೇ ಇಲ್ಲವೆಂದವಳು ಕೊರಗಿ, ಸೊರಗಿ ಕೃಶಳಾದಳು. ಕೆಲವು ಸಮಯಗಳ ವರೆಗೆ ಯಶವಂತಸಿಂಹ, ಪತ್ತೆದಾರಿಯಾದ ಕರವುಚಂದರೆಲ್ಲ ಹೇಗಾದರೂ ಮಾಡಿ ತನ್ನನ್ನು ಪತ್ತೆ ಹಚ್ಚಿಯಾರೆಂಬ ಆಶೆ ಅವಳಿಗಿದ್ದರೂ ಬರಬರುತ್ತಾ ಆ ಆಶೆ ನಿರಾಶೆಯಾಯಿತು. ಅವಳು ಅನಂತರ ತನ್ನ ಅಭ್ಯುದಯದ ಸವಿಗನಸನ್ನು ಮರೆತು ಬೈರಾಗಿಣಿಯಂತೆ ವಿರಕ್ತಳಾದಳು. ಸೇವಕಿಯು ತಂದುಕೊಟ್ಟ ಆಹಾರವನ್ನು ಕಣ್ಣೆತ್ತಿ ಸಹ ನೋಡದೆ ಮನಸ್ಸಿಗೆ ಬಂದಂತೆ ಏನೇನೋ ಹೇಳುತಿದ್ದಳು. ಒಂದು ದಿನ ರಾತ್ರಿ ವಿಚಿತ್ರವಾದೊಂದು ಸಂಗತಿ ನಡೆಯಿತು. ದಾಸಿಯು ಕುಸುಮಳಿಗೆ ಊಟಕ್ಕೆ ಅನ್ನ ಮುಂತಾದ ಸಾಮಗ್ರಿಗಳನ್ನು ತಂದು ಮೇಜಿನ ಮೇಲಿಟ್ಟಿದ್ದಳು. ಕುಸುಮಳು ಮಂಚದಲ್ಲಿ ಮಲಗಿ ನಿದ್ರಿಸುತಿದ್ದು ಕೂಡಲೇ ಸ್ವಪ್ನದಲ್ಲಿ ಹಾ!........ಪ್ರಿಯಕರಾ!!........ ವಿಶ್ವನಾಥ್!!! ನನ್ನನ್ನು ಬಿಟ್ಟು ನೀನೆಲ್ಲಿಗೆ ಹೋದೆ? ಎಂದು ಹೇಳುತ್ತಲೂ ಅಯ್ಯೋ ರಕ್ಷಿಸಿರಿ!! ರಕ್ಷಿಸಿರಿ!!! ಎಂದು ಚೀರುತ್ತಲೂ ಆಗಲಿ ಆ ನೀಚರಿಗೆ ದಯಾವಂತನಾದ ಆ ಪರಮೇಶ್ವರನು ಶಿಕ್ಷೆಕೊಡದೆ ಇರಲಾರನು ಎಂದು ಬೊಬ್ಬಿಟ್ಟಳು ದಾಸಿಯು ಅವಳ ಮಾತುಗಳ ಅರ್ಥತಿಳಿಯದೆ ಟಕಮಕನೆ ನೋಡುತ್ತಾ ನಿಂತಿದ್ದಳು ಸ್ವಲ್ಪಹೊತ್ತಿನಲ್ಲಿ ಕುಸುಮಳು ಎಚ್ಚತ್ತಳು ಕಪ್ಪಾದ ಅವಳ ಮುಂಗುರುಳುಗಳು ಧೂಳಿನಿಂದ ಮಲಿನವಾಗಿ ಅಸ್ತವ್ಯಸ್ತವಾಗಿ ಹಣೆಯಲ್ಲಿ ಹಾರಾಡುತಿದ್ದುವು. ಅವಳ ಮುಖವು ಧೂಳಿನಿಂದಾಚ್ಛಾದಿತವಾಗಿದ್ದಿತು. ಅವಳ ಶರೀರದ ಮೇಲಿನ ಬಟ್ಟೆಗಳು ಅಸ್ತವ್ಯಸ್ತವಾಗಿದ್ದುವು ಅವಳ ಆಗಿನ ದೃಶ್ಯವನ್ನು ಕಂಡವರೆಲ್ಲರೂ ಇವಳೊಬ್ಬ ಹುಚ್ಚಿ ಎಂದು ನಿಃಸ್ಸಂದೇಹವಾಗಿ ಹೇಳುತಿದ್ದರು. ಅವಳು ಒಂದೊಂದು ಸಲ ಹಸಿದ ಹೆಬ್ಬುಲಿಯಂತೆ ಕೋಣೆಯಲ್ಲಿ ಆಚೀಚೆ ತಿರುಗಾಡುತ್ತಲೂ, ಸಿಟ್ಟ

ಗೊಂಡ ಸರ್ಪಿಣಿಯಂತೆ ಭುಸುಗುಟ್ಟುತ್ತಲೂ ಇನ್ನು ಕೆಲ ಸಲ ವೈರಾಗಿಣಿಯಂತೆಯೂ, ಸಣ್ಣ ಶಿಶುವಿನಂತೆಯೂ ಇದ್ದು ಅಳುತಿದ್ದಳು. ಮಾನವ ಆಕೃತಿಯಲ್ಲಿದ್ದ ರಾಕ್ಷಸನಾದ ಲೋಜೋನ ಸೇವಕಿಯಾದ ಕಲ್ಲಿನಂತಹ ಕಠೋರ ಹೃದಯದ ನಿರ್ದಯಳಾದ ಆ ದಾಸಿಯೂ ಕೂಡ ಕುಸುಮಳ ದುರವಸ್ಥೆಯನ್ನು ಕಂಡು ವ್ಯಥೆಗೊಂಡಳು. ಅಂಥಹ ಕರುಣಾಜನಕವಾದ ದುಃಸ್ಥಿತಿಯಲ್ಲಿ ಕುಸುಮ ಕೋಮಲೆಯಾದ ಕುಸುಮಳು ಬೆಂದು ಬೇಗುದಿಗೊಂಡಳು



ಘಾತಕ ಮಹಾಶಯರೆ! ಕರಮಚಂದನು ಯಶವಂತನ ಮನೆಯಿಂದ ತಮ್ಮನೊಡನೆ ತನ್ನ ಮನೆಗೆ ಬಂದು ಆ ದಿನ ನಡೆದ ಆಕಸ್ಮಿಕ ಘಟನೆಯ ವಿಷಯವಾಗಿ ಚಿಂತಿಸಿದನು. ಬಹುಶಃ 'ಚೋರ ಸಾರ್ವಭೌಮ'ನೇ ಈ ಆಕೃತ್ಯವನ್ನು ಮಾಡಿರಬಹುದೆಂದು ಪತ್ತೆದಾರಿ ಸಹೋದರರು ತರ್ಕಿಸಿದರು. ಅವರು ಮಾತನಾಡುತ್ತಾ ಇರುತ್ತಿರಲು ಟೆಲಿಫೋನ್‌ನ ಗಂಟೆಯು ಬಾರಿಸಲ್ಪಟ್ಟಿತು. ಖಣ....ಖಣ....ಖಣ ಶಬ್ದವು ಜೋರಾಗಿ ಕೇಳಿಸಲು ಕರಮಚಂದನು ಫೋನ್‌ನ ಹತ್ತಿರ ಹೋಗಿ ರಿಸೀವರ್‌ನ್ನು ಕಿವಿಗೆ ಹಿಡಿದು ಗ್ರಾಹಕದಲ್ಲಿ ಕರೆಯುತಿದ್ದವರಾರು? ಎಂದು ಕೇಳಿದನು. ಆಗ ಫೋನ್‌ನಲ್ಲಿ ಪತ್ತೆದಾರಿ ಕರಮಚಂದನಿರುವನೇ? ಎಂದು ಮಾತನಾಡುತಿದ್ದ ವ್ಯಕ್ತಿಯು ಕೇಳಲು ಅವನು ನಾನೇ ಕರಮಚಂದನೆಂದು ಹೇಳಿದನು. ಆಗ ಆ ವ್ಯಕ್ತಿಯು ಎಲೆ ಪತ್ತೆದಾರಿಯೆ! ನೀನು ಹೆಚ್ಚು ಆಲೋಚಿಸುವ ಅಗತ್ಯವಿಲ್ಲ. ಕುಸುಮಳನ್ನು ಮಾಯಮಾಡಿದವನು ಚೋರ ಸಾರ್ವಭೌಮನಾದ ನಾನೇ!; ನಿನ್ನಲ್ಲಿ ಪೌರುಷವಿರುವುದಾದರೆ ಬೇಗನೆ ಬಂದು ಅವಳನ್ನು ಕಾಪಾಡು ಇಲ್ಲವಾದರೆ ನಿನ್ನ ತುಬ್ಬುಗಾರ ವೃತ್ತಿಯನ್ನಾದರೂ ತ್ಯಜಿಸು ಎಂದು ಹೇಳಿ ಮಾತು ನಿಲ್ಲಿಸಿದನು. ಕರಮಚಂದನು ಏನೂ ಉತ್ತರಕೊಡದೆ ರಾಮದಾಸನ ಹತ್ತಿರ ಬಂದು ಫೋನ್‌ನಲ್ಲಿ ಕೇಳಿದ ವಿಷಯವನ್ನು ತಿಳಿಸಿದನು ರಾಮದಾಸನಾಗ ಸಹೋದರನೊಡನೆ ಇಂತಹ ಪ್ರಬಲ ಎದುರಾಳಿಯು ನಮಗೆ ಇದುವರೆಗೆ ಸಿಕ್ಕಲಿಲ್ಲವೆಂದನು ಆಗ ಪತ್ತೆದಾರಿಯು "ವಿವಾದಸ್ಯ ವಿವಾಹಸ್ಯ ಸಮಯೋ ರೇವ ಶೋಭತೆ" ಎಂಬಂತೆ ನಮ್ಮ ಬುದ್ಧಿಸಾಮರ್ಥ

ಚಾತುರ್ಯಗಳನ್ನು ತೋರ್ಪಡಿಸಲು ಈಗ ಪ್ರಬಲ ಎದುರಾಳಿಯು ದೊರೆ ತುದು ಉತ್ತಮವೆಂದನು.

# ದುಡುಕಿನ ಫಲ

ಪಾಠಕ ಮಹಾಶಯರೆ! ಪತ್ತೆದಾರಿ ಕರಮಚಂದನು ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನ ಮನೆಯಿಂದ ಅವನನ್ನು ಸಾಂತ್ವನ ಗೊಳಿಸಿ ಹೊರಡುವಾಗ ನಾನಿನ್ನು ಶೀಘ್ರದಲ್ಲಿಯೇ ಕುಸುಮಳನ್ನು ಸುರ ಕ್ಷಿತವಾಗಿ ಕರೆತರುವೆನೆಂದು ಪ್ರತಿಜ್ಞೆ ಮಾಡಿದ್ದನಷ್ಟೆ! ಕುಸುಮಳು ಮಾಯ ವಾಗಿ ಇಂದಿಗೆ ಎರಡು ದಿವಸಗಳು ಕಳೆದರೂ ಅವಳ ಪತ್ತೆ ಹಚ್ಚಲು ಸಾಧ್ಯ ವಾಗಲಿಲ್ಲವಲ್ಲಾ ಎಂದು ಪತ್ತೆದಾರಿಯು ವ್ಯಸನಪಟ್ಟನು ಇನ್ನು ಕೆಲವು ದಿನಗಳು ಇದೇ ರೀತಿಯಲ್ಲಿ ಕಳೆದುಹೋದರೆ ಯಶವಂತನು ಖಂಡಿತ ವಾಗಿಯೂ ಮನೋರೋಗದಿಂದ ಜೀರ್ಣನಾಗಿ ನಾಶವಾಗಬಹುದು ಎಂದೂ ಹಿಸಿ ಅವನು ಆದಷ್ಟು ಬೇಗನೆ ಕುಸುಮಳನ್ನು ಪತ್ತೆಹಚ್ಚಲು ಬದ್ಧಕಂಕಣ ನಾಗಿ ಟೊಂಕಕಟ್ಟಿದನು ಅಂಧಕಾರವೆಲ್ಲೆಲ್ಲಿಯೂ ತನ್ನ ಪ್ರಭಾವವನ್ನು ಬೀರಿದ್ದಿತು ಅಂಧಕಾರದೊಡೆತನವನ್ನು ಸಹಿಸಲಸಾಧ್ಯವಾಗಿ ಪ್ರಭಾ ಕರನು ಪಶ್ಚಿಮಾಬ್ಧಿಯನ್ನು ಸೇರಿ ಇನ್ನೂ ಎರಡು ತಾಸಾಗಿರಲಿಲ್ಲ. ರಾತ್ರಿ ಲೆಗೆ ಹೆದರಿ ಪಕ್ಷಿಗಳೆಲ್ಲ ಗೂಡುಗಳನ್ನು ಸೇರಿ ತಮ್ಮ ಮರಿಗಳಿಗೆ ಆಹಾರ ವನ್ನೀಯುತಿದ್ದುವು. ಕ್ರೂರ ಮೃಗಗಳ ಹೂಂಕಾರವು ಅರಣ್ಯದಲ್ಲಿ ಪ್ರತಿ ಧ್ವನಿಗೊಳ್ಳುತಿತ್ತು. ಎಂತಹ ಧೈರ್ಯಶಾಲಿಯಾದ ನವತರುಣನಾದರೂ ಇಂತಹ ಭೀಕರವಾದ ರಾತ್ರಿಯಲ್ಲಿ ಮಂಗಳೂರಿನ ಪೂರ್ವದಿಕ್ಕಿನಲ್ಲಿರುವ ಆ ಕಾಡಿನಲ್ಲಿ ಸಂಚರಿಸಲು ಭಯಗೊಳ್ಳುತಿದ್ದನು ವನ್ಯ ಹಿಂಸ್ರಜಂತುಗಳು ಅತ್ತಿತ್ತ ಯಾರ ಅಂಜಿಕೆಯೂ ಇಲ್ಲದೆ ಓಡಾಡುತಿದ್ದುವು. ದುಷ್ಟರು ಹೆಚ್ಚಾಗಿ ಇಂಥಾ ಕಾಡುಗಳಲ್ಲಿ ಆ ಸಮಯಗಳಲ್ಲಿ ಅಂದರೆ ಇರುಳಿನಲ್ಲಿ ಪ್ರಯಾಣಿಕ ರನ್ನು ಸುಲಿಯುತಿದ್ದರು. ದಸ್ಯುಗಳಿಗೆ ರಾತ್ರಿಯೆಂದರೆ ಕೋಗಿಲೆಗೆ ಚಂದ್ರಿಕೆ ಯಿದ್ದಂತೆ ಅದೊಂದು ದಿನ ಕೊಯಿಲೋನು ಲೋಬೋನ ಮನೆಗೆ ಕೃತಕ ಗಡ್ಡ ಮೀಶೆಗಳನ್ನು ಧರಿಸಿ ಹೇಗೆ ವೇಷಾಂತರದಿಂದ ಬಂದಿದ್ದನೋ ಅದೇ ರೀತಿಯಲ್ಲಿ ಕರಮಚಂದನು ಈ ದಿನ ಅವನಂತೆಯೇ ಛದ್ಮವೇಷ

ವೇಷ ಧರಿಸಿ ಮನೆಯಿಂದ ಹೊರಟು ನಗರದಿಂದ ಪೂರ್ವಾಭಿ ಮುಖವಾಗಿ ಹೋಟನು. ಅವನ ಕೈಯಲ್ಲಿ ಒಂದು ಟಾರ್ಚ್ ಲೈಟ್, ಪಿಸ್ತೂಲಲ್ಲದೆ ಬೇರೆ ಏನೂ ಇರಲಿಲ್ಲ. ರಾಮದಾಸನು ಅಸೌಖ್ಯವಿದ್ದುದರಿಂದ ಮನೆಯಲ್ಲಿಯೇ ಇದ್ದನು ಕರಮಚಂದನು ಅರಣ್ಯದ ಸಮೀಪಕ್ಕೆ ಬಂದಾಗ ಸಾಧಾರಣ ಹತ್ತು ತಾಸು ರಾತ್ರಿಯಾಗಿರಬಹುದು. ಅಂತಹ ಕಾಳರಾತ್ರಿಯಲ್ಲಿಯೂ ಯಾರೋ ಒಬ್ಬನು ಮರದಡಿಯಲ್ಲಿ ಕುಳಿತಿರುವುದು ಮಸಕಾಗಿ ಅವನ ಸೂಕ್ಷ್ಮದೃಷ್ಟಿಗೆ ಹೊಳೆಯಿತು. ಭಯಂಕರವಾದ ನಟ್ಟಿರುಳಿನಲ್ಲಿ ಅದ ರಲ್ಲಿಯೂ ಅಡವಿಯಲ್ಲಿ ಒಬ್ಬೊಂಟಿಗನಾಗಿ ಕುಳಿತಿರಬೇಕಾದರೆ ಆ ವ್ಯಕ್ತಿ ಯೇನು ಸೈತಾನನೆ! ಎಂದವನು ದಿಗಿಲುಗೊಂಡನು. ಅಥವಾ ಕೆಟ್ಟ ವಿಚಾರಗಳನ್ನೇನಾದರೂ ಇಟ್ಟುಕೊಂಡು ಸುಲಿಗೆ ಮಾಡಲು ನಿಂತಿರುವ ನೀಚ ಚೋರನೋ, ಇಲ್ಲವಾದರೆ ಇವನು ಸರ್ವಸಂಗ ಪರಿತ್ಯಾಗಿಯಾಗಿ ಪ್ರಪಂಚದ ಪರಿವೆಯನ್ನೇ ಬಿಟ್ಟು ವಿರಕ್ತನಾಗಿ 'ನಾರಾಯಣ'ನನ್ನು ಧ್ಯಾನಿಸುತ್ತಿರುವ ಯೋಗಿ ಇರಬೇಕು, ಎಂದು ನಾನಾ ವಿಧವಾಗಿ ತರ್ಕಿ ಸುತ್ತಾ ಆ ವ್ಯಕ್ತಿಯು ಕುಳಿತ ಮರದಡಿಯ ಸಮೀಪಕ್ಕೆ ಬಂದನು.

ವಾಚಕವೃಂದ! ಮರದಡಿಯಲ್ಲಿ ಕುಳಿತಿದ್ದವನು ಲೋಬೋನ ಬಲಗೈ ಬಂಟನಾದ ಪಿಟ್ಟನಲ್ಲದೆ ಬೇರಾರೂ ಅಲ್ಲ. ಕೊಯಿಲೋನು ವೇಷಾಂತರ ದಿಂದ ಯಾವುದೋ ಒಂದು ಕಾರ್ಯಕ್ಕಾಗಿ ನಗರಕ್ಕೆ ಹೋಗಿದ್ದನು ಅವನು ಪಿಟ್ಟನೊಡನೆ ತಾನೀ ಸಂಕೇತ ಸ್ಥಾನಕ್ಕೆ ಬರುವೆನೆಂದು ಹೇಳಿದುದರಿಂದ ಇವನು ಈ ಕಾಡಿನಲ್ಲಿ ಕುಳಿತಿದ್ದನು. ಪಿಟ್ಟನು ತನ್ನೆದುರಿಗೆ ಬರುತ್ತಿರುವ ವ್ಯಕ್ತಿಯೇ ಛದ್ಮವೇಷಧಾರಿಯಾದ ಕೊಯಿಲೋನೆಂದೆಣಿಸಿ. ಮಿಸ್ಟರ್ ಕೋಯಿಲೋ, ನೀನು ಹೋದ ಕಾರ್ಯವಾಯಿತೆ? ಎಂದು ಪ್ರಶ್ನಿಸಿದನು ಕರಮಚಂದನು ಈ ರೀತಿಯ ಪ್ರಶ್ನೆಯನ್ನು ಕೇಳಿ ಇಲ್ಲಿ ಕುಳಿತಿದ್ದ ವ್ಯಕ್ತಿಯು ಕೊಯಿಲೋ ಎಂಬವನನ್ನು ದಾರಿಕಾಯುತ್ತಾ ಇರುವನೆಂದು ತರ್ಕಿಸಿ, ಆ ದಿನ ಹೋಟೆಲ್‌ನಲ್ಲಿ ಕೊಯಿಲೋನ ಸ್ವರ ಕೇಳಿದ್ದುದರಿಂದ ಅದೇ ಸ್ವರದಲ್ಲಿ ಕಾರ್ಯ ಸಾಧಾರಣ ಆಡಹಾಗಾಯಿತು ಎಂದನು. ಆಗ ಪಿಟ್ಟನು ನಿನ್ನ ಸ್ವರ ಸ್ವಲ್ಪ ಬದಲಾಗಿದೆ. ಶೀತವೇನಾದರೂ ಆಗಿದೆಯೊ? ಎಂದು ಕೇಳಲು ಕರಮಚಂದನು ಮೊದಲಿನಂತೆ ಹೌದೆಂದನು. ಮರದಡಿ ಯಲ್ಲಿ ಕುಳಿತಿದ್ದ ವ್ಯಕ್ತಿಯ ಸ್ವರ ಕೇಳಿ ಇವನು ಪಿಟ್ಟನೆಂದು ಪತ್ತೇದಾರಿಯು

ನಿಶ್ಚಯಿಸಿದನು. ವಾಚಕರೆ! ನೀವು ಕರಮಚಂದನು ಕೊಯಿಲೋನ ಸ್ವರ ದಲ್ಲಿ ಹೇಗೆ ಮಾತನಾಡಿದನೆಂದು ಚಕಿತರಾಗಬೇಡಿರಿ. ಅವನು ಬೇಕಾದಾಗ ಬೇಕುಬೇಕಾದ ಸ್ವರದಲ್ಲಿ ಮಾತನಾಡುವಂತಹ ನಿಪುಣ ವ್ಯಕ್ತಿಯಾಗಿದ್ದನು. ಅವನೀಗ ಕೊಯಿಲೊನಂತೆ ಮಾತನಾಡುತ್ತಿರುವುದರಿಂದವನನ್ನೀಗ ಈ ಸಂದರ್ಭದಲ್ಲಿ ಕೊಯಿಲೋ ಎಂದೇ ಹೇಳುವ. ಪಿಟ್ಟನು ಅವನೊಡನೆ ಕುಳಿತುಕೊಳ್ಳಲು ಹೇಳಿದಾಗ ಅವನು ಅಲ್ಲಿಯೇ ಕುಳಿತನು. ಕತ್ತಲೆ ಯಾದುದರಿಂದ ಅವನ ಮುಖವು ಪಿಟ್ಟನಿಗೆ ಚೆನ್ನಾಗಿ ಕಾಣಿಸುತ್ತಿರಲಿಲ್ಲ. ಪಿಟ್ಟನು ಕೊಯಿಲೋನೊಡನೆ ಹೀಗೆಂದನು. ಮಿಸ್ಟರ್! ಪತ್ತೆದಾರಿ ಕರಮಚಂದನೆಂದರೆ ಬಹಳ ಚಾಣಾಕ್ಷನೇ ಸರಿ. ನಮ್ಮ ಕಪಟ ನಾಟಕದ ಸೂತ್ರಧಾರನಾದ ಜೋರ ಸಾರ್ವಭೌಮನ ರಹಸ್ಯವನ್ನೆಲ್ಲ ಇವನು ಬಯಲಿ ಗೆಳೆಯುತ್ತಾನೆಯೋ ಏನೊ? ಅವನ ತಮ್ಮನಾದ ರಾಮದಾಸನಂತೂ ಬಹಳ ಚತುರ ಪೋರನು ನಾವವನನ್ನು ವಿಶ್ರಾಂತಿಭವನದ ನೆಲಮಾಳಿಗೆಯಲ್ಲಿ ಬಂಧಿಸಿಟ್ಟರೂ ಅವನಲ್ಲಿಂದ ಪಲಾಯನ ಮಾಡಿದನಲ್ಲವೆ!! ಆ ಸುರಸುಂದರಿ ಯಾದ ಸಿಲಿಯಳನ್ನು ಆ ತುಂಟನು ಸೇವಕರಿಗೆ ಮಂಕುಬೂದಿ ಹಚ್ಚಿ ಹಾರಿಸಿಕೊಂಡು ಹೋದನಲ್ಲ! ಆ ಪತ್ತೆದಾರಿಗಳ ಸಾಹಸ ಕೃತ್ಯಗಳನ್ನು ಕಾಣುವಾಗ ನನಗೇಕೋ ಅಂಜಿಕೆಯಾಗುತ್ತದೆ. ನಮಗೀಗ ದೈವಸಹಾಯ ವಿದ್ದುದರಿಂದ ಇಷ್ಟರವರೆಗೇನೂ ಕೆಡಕುಂಟಾಗದಿದ್ದರೂ ಯಾವಾಗಲೂ ಕಾಲವು ಒಂದೇ ರೀತಿಯಲ್ಲಿಲ್ಲದುದರಿಂದ ನಾವು ಮಾಡಿದ ಪಾಪವು ಅತಿ ರೇಕವಾಗಲು ನಮ್ಮನ್ನು ಈ ಪತ್ತೆದಾರಿ ಸಹೋದರರು ಹಿಡಿದು ಶಿಕ್ಷಿಸದೆ ಬಿಡರು ಲೋಕದಲ್ಲಿ ಶಾಶ್ವತವಾಗಿ ಸತ್ಯವೇ ಜಯಿಸುವುದಲ್ಲವೆ? ಅಸತ್ಯ ವೆಂದಿಗಾದರೂ ಜಯ ಹೊಂದೀತೇ? ಎಂದು ಹೇಳುತ್ತಿರಲು, ಕೊಯಿ ಲೋನು ಮಿಸ್ಟರ್, ನಿನಗೆ ಆ ಹೆದರಿಕೆ ಬೇಡ ಈ ಕರಮಚಂದನಂತಹ ನೀರಿನ ಮೇಲಿರುವ ಗುಳ್ಳೆಗಳನ್ನು ನಾಶಪಡಿಸಲು ನಮಗೇನೂ ಪ್ರಯಾಸ ವಾಗದು. ಅದಿರಲಿ. ನಮ್ಮ ಯಜಮಾನರಿಂದ ಇನ್ನೇನು ಕೆಲಸ ಮಾಡ ಬೇಕೆಂದು ಅಪ್ಪಣೆ ಬಂದಿದೆ? ಎಂದು ಕುತೂಹಲದಿಂದ ಕೇಳಿದನು. ಆಗ ಪಿಟ್ಟನು ನಾವಿಬ್ಬರೂ ಈಗ ಕರಮಚಂದನ ಮನೆಗೆ ಹೋಗಿ ಹೇಗಾ ದರೂ ಮಾಡಿಗೆ ಹತ್ತಿ ಒಂದೆರಡು ಹಂಚುಗಳನ್ನು ತೆಗೆದು ನಮ್ಮಿಬ್ಬರಲ್ಲೊ ಬ್ಬನು-ಮನೆಯೊಳಗೆ ಹಾರಿ ಕರಮಚಂದನನ್ನು ಈ ಹರಿತವಾದ ಚೂರಿ

ಮುಂದಿರಿಸು ಕೊಲ್ಲಬೇಕೆಂದು ಚೋರ ಸಾರ್ವಭೌಮ ಹೇಳಿರುವನು ಎಂದು ಹೇಳಿ, ತನ್ನ ಕೈಯಲ್ಲಿರುವ ಹರಿತವಾದೊಂದು ಚೂರಿಯನ್ನು ಎತ್ತಿ ಹಿಡಿದನು. ಆ ಕಾಳರಾತ್ರಿಯಲ್ಲಿ ಬಹಳ ಹರಿತವಾದಾ ಚೂರಿಯು ಪಿಟ್ಟನು ಎತ್ತಿ ಹಿಡಿದಾಗ ಕೋಲ್ಮಿಂಚಿನಲ್ಲಿ ಹೊಳೆದು ಶೋಭಿಸಿತು. ಆಗ ಕೊಯಿಲೋ ವೇಷಧಾರಿಯಾದ ಪತ್ತೆದಾರಿಯು ಅಬ್ಬಾ! ಈ ಪಿಟ್ಟನು ಎಂತಹ ಜಾಣನು. ಚೋರ ಸಾರ್ವಭೌಮನೆಂದು ಹೇಳುತ್ತಾನಲ್ಲದೆ ಆ ವ್ಯಕ್ತಿಯ ನಿಜವಾದ ಹೆಸರನ್ನು ಮರೆತಾದರೂ ಉಚ್ಚರಿಸುವುದಿಲ್ಲವಲ್ಲಾ, ಎಂದು ಮನದಲ್ಲಿ ಯೋಚಿಸಿ ಅವನ ಮಾತನ್ನು ಕೇಳಿ ಮನದೊಳಗೆಯೇ ನಕ್ಕು, ಹಾಗಾದರೆ ನಾವಿನ್ನು ತೀವ್ರವಾಗಿಯೇ ಪತ್ತೆದಾರಿಯ ಮನೆಯ ಕಡೆಗೆ ಸಾಗುವ, ಎಂದನು.

ಪಿಟ್ಟ ಮತ್ತು ಕೊಯಿಲೋನಂತೆ ನಟಿಸುತ್ತಿರುವ ಕರಮಚಂದ ಇವರಿಬ್ಬರೂ ಆ ಅರಣ್ಯದಿಂದ ನಗರಾಭಿಮುಖವಾಗಿ ಹೊರಟರು. ಕರಮಚಂದನ ಮನೆಯು ಹದ್ರಿಯಲ್ಲಿದ್ದಿತು. ಬೀದಿಯಲ್ಲಿ ಅಲ್ಲಲ್ಲಿ ದೂರದಲ್ಲಿ ಒಂದೊಂದು ವಿದ್ಯುತ್ ದೀಪಗಳು ಈಗಲೂ ಉರಿಯುತಿದ್ದವು. ಅವರಿಬ್ಬರೂ ಮಾರ್ಗದಲ್ಲಿ ಮುಂದುವರಿಯುತ್ತಾ ಬರುತಿದ್ದರು. ಪಿಟ್ಟನು ಮುಂದಿನಿಂದಲೂ ವೇಷಾಂತರದಲ್ಲಿದ್ದ ಕರಮಚಂದನು ಹಿಂದಿನಿಂದಲೂ ಮಾರ್ಗಕ್ರಮಣ ಮಾಡುತಿದ್ದರು. ಕರಮಚಂದನ ಮನೆಯ ಹತ್ತಿರದವರೆಗೆ ಸಮೀಪಿಸಿದಾಗ ಪತ್ತೆದಾರಿಯು ಫಕ್ಕನೆ ಹಿಂದಿನಿಂದ ಮುಂದಕ್ಕೆ ಬಂದು ಪಿಟ್ಟನ ಕತ್ತನ್ನು ಬಲವಾಗಿ ಹಿಸುಕಲು ಅವನು ಅಕಸ್ಮಾತ್ತಾಗಿ ತನ್ನ ಮೈಮೇಲೇರಿ ಬಂದವರಾರೆಂದು ತಿಳಿಯದೆ ದಿಗಿಲುಪಟ್ಟನು. ಆಗ ಕರಮಚಂದನು ಪಿಟ್ಟನಿಗೊಂದೇಟು ಕೊಟ್ಟನು. ಆಗ ಪಿಟ್ಟನಿಗೆ ಕೊಯಿಲೋನಂತೆ ನಟಿಸುತ್ತಾ ತನ್ನನ್ನು ಮಂಕುಮಾಡಿದವನು ಪತ್ತೆದಾರಿಯೇ ಎಂದು ಗೊತ್ತಾಯಿತು. ಆಗ ಅವನು ಅವನ ಕೈಯಿಂದ ಹೇಗಾದರೂ ತಪ್ಪಿಸಬೇಕೆಂದು ಪ್ರಯತ್ನಪಟ್ಟು ತನ್ನ ಕಾಲಿನಿಂದ ಪತ್ತೆದಾರಿಯ ಕಾಲಿಗೆ ಹೊಡೆದನು. ಪಿಟ್ಟನು ಒದೆದಾಗ ಕರಮಚಂದನ ಕೈಯು ಪಿಟ್ಟನ ಕುತ್ತಿಗೆಯಿಂದ ಜಾರಿತಾದರೂ ಅವನು ಕೈಚಳಕದಿಂದ ಪುನಃ ಪಿಟ್ಟನ ಸೊಂಟವನ್ನು ಬಲವಾಗಿ ಹಿಡಿದನು. ಪಿಟ್ಟನು ಸರ್ವಸಾಮಾನ್ಯನಾಗಿರಲಿಲ್ಲ. ಬಹಳ ಬಲಿಷ್ಠನಾಗಿದ್ದು ಗರಡಿಯಲ್ಲಿ ಪಳಗಿದ ಬಂಟನಾಗಿದ್ದನು. ಕರಮ

ಚಂದನು ಪಿಟ್ಟೈನನ್ನೂ ಮೀರಿಸುವಷ್ಟು ಅದ್ಭುತ ಪರಾಕ್ರಮನಾಗಿದ್ದನು. ಆದ್ದರಿಂದ ಇಬ್ಬರೂ ಸ್ವಲ್ಪ ಸಮಯ ಕಾದಾಡಿದರು. ಕಡೆಗೆ ಪಿಟ್ಟೈನು ಸೋಲಲು ಪ್ರಾರಂಭಿಸಿದಾಗ ಅವನು ಜೀವದಾಶೆ ತೊರೆದು ಹೇಗಾದರೂ ಒದೆದಾಡಿ ಕರಮಚಂದನ ಕೈಯಿಂದ ತಪ್ಪಿಸಿ ಫರಾರಿಯಾದನು. ಇವನೀಗ ತಪ್ಪಿಸಿದರೂ ಬೇಕಾದಾಗ ಹಿಡಿಯಬಹುದೆಂಬ ಗರ್ವದಿಂದ ಕರಮಚಂದನು ಕಳವಳಗೊಳ್ಳದೆ ತನ್ನ ಮನೆಗೆ ಹೋದನು. ಇಷ್ಟಾಗುವಾಗ ರಾತ್ರಿ ಹನ್ನೊಂದೂವರೆ ತಾಸಾಗಿರಬಹುದು.

ಪಿಟ್ಟೈ ಮತ್ತು ಕೊಯಿಲೋನಂತೆ ನಟಿಸುತಿದ್ದ ಕರಮಚಂದ ಇವರು ಅರಣ್ಯದಕಡೆಯಿಂದ ಪಟ್ಟಣಕ್ಕಾಭಿಮುಖವಾಗಿ ಹೊರಟು ಹತ್ತು ಹದಿನೈದು ನಿಮಿಷಗಳು ಕಳೆಯುವಷ್ಟರಲ್ಲಿ ನಿಜವಾದ ಕೊಯಿಲೋನು ಅಲ್ಲಿಗೆ ತಾನು ಹೋದ ಕಾರ್ಯವನ್ನು ಕೈಗೂಡಿಸಿಕೊಂಡು ಬಂದು ಸಂಕೇತಸ್ಥಾನದಲ್ಲಿ ಪಿಟ್ಟೈನಿರದಿದ್ದುದನ್ನು ಕಂಡು ಅವನು ಅಲ್ಲಿರುವ ಬಂಡೆ ಕಲ್ಲಿನಲ್ಲಿ ಕುಳಿತನು ಅವನು ಸುತ್ತಲೂ ಸೂಕ್ಷ್ಮವಾಗಿ ನೋಡುತ್ತಾ ಪಿಟ್ಟೈನು ಏನು ಬರಲಿಲ್ಲ ವೆಂದು ತಿಳಿಯಲಸಮರ್ಥನಾಗಿ ಅದೇ ಬಂಡೆ ಕಲ್ಲಿನಲ್ಲಿ ಮಲಗಿದನು ಎಲ್ಲಿ ಯಾದರೂ ಸ್ವಲ್ಪ ಶಬ್ದವಾದರೆ ಎದ್ದು ಮಿತ್ರನು ಬಂದನೋ ಎಂದು ನೋಡು ತಿದ್ದನು. ಸ್ವಲ್ಪ ಸಮಯದಲ್ಲಿ ತಂಗಾಳಿ ಬೀಸುತ್ತಿರಲು ಅವನಿಗೆ ಜಂಪು ಹತ್ತಿತು. ಪಿಟ್ಟೈನು ಕರಮಚಂದನಿಂದ ಪೆಟ್ಟುತಿಂದು ಮೆಲ್ಲನೆ ಮಾರ್ಗದಲ್ಲಿ ಬರುತಿದ್ದನು ದುರ್ದೈವವಶಾತ್ ಆವನು ಫಕ್ಕನೆ ಕಾಲುಜಾರಿ ಚರಂಡಿಗೆ ಬಿದ್ದನು. ಆ ಚರಂಡಿಯಲ್ಲಿ ಕೊಳಕು ನೀರು ಹರಿಯುತಿದ್ದುದರಿಂದ ಅವನ ಬಟ್ಟೆಗಳೆಲ್ಲ ಕೆಸರಾಯಿತು. ಅಲ್ಲಿಂದವನು ಹೇಗಾದರೂ ಎದ್ದು ಅನಂತರ ಆ ಅರಣ್ಯದ ಕಡೆಗೆ ಬಂದನು. ಮೊದಲೇ ಕರಮಚಂದನಿಂದ ಪೆಟ್ಟುತಿಂದು ಅಪ ಮಾನ ಹೊಂದಿದ್ದವನು ಈಗ ಚರಂಡಿಗೂ ಬಿದ್ದುದರಿಂದ ಅವನ ಕೋಪೋ ದ್ರೇಕವನ್ನು ವರ್ಣಿಸಲು ಸಾಧ್ಯವಿಲ್ಲ. ಅವನಾಗ ಕರಮಚಂದನಿಗೆ ಪ್ರತೀ ಕಾರ ಮಾಡಲು ಸಮರ್ಥನಾಗಲಿಲ್ಲ ಯಾಕೆಂದರೆ 'ಬಡವನ ಕೋಪ ದವ ಡೆಗೆ ಮೂಲ' ಎಂಬಂತೆ ಪಿಟ್ಟೈನು ಆಗ ಪತ್ತೆದಾರಿಯನ್ನು ಕೆಣಕಲು ಹೋಗಿ ದ್ದರೆ ಅವನು ಹಸಿದ ಹೆಬ್ಬುಲಿಯಂತೆ ಇವನನ್ನು ಚೂರಚೂರು ಮಾಡು ತಿದ್ದನು ಆದ್ದರಿಂದ ಆಗ ಅವನು ಪತ್ತೆದಾರಿಯ ಗೋಜಿಗೆ ಹೋಗಲಿಲ್ಲ. ಅರಣ್ಯ ತಲಪಿದಾಗ ಬಂಡೆ ಕಲ್ಲಿನಲ್ಲಾರೋ ಮಲಗಿ ನಿದ್ರಿಸುತಿದ್ದುದನ್ನು

ಪಿಟ್ಟನು ಕಂಡು ಟೋಬ್ರ್ ಕ್ಲೈಟ್‌ನ ಪ್ರಕಾಶದಲ್ಲಿ ಮಲಗಿರುವನಾರೆಂದು ನೋಡಲು ಕೊಯಿಲೋನೆಂದವನಿಗೆ ತಿಳಿಯಿತು. ಅನಂತರ ಪಿಟ್ಟನು ಕೊಯಿಲೋನನ್ನು ನಿದ್ರೆಯಿಂದ ಎಚ್ಚರಿಸಿ ಪತ್ತೆದಾರ ಕರಮುಚಂದನು ತನಗೆ ಮುಂಕೂಟಾದಿ ಹಚ್ಚಿದ ವಿಷಯವನ್ನು ಚುಟುಕಿನಲ್ಲಿ ವಿವರಿಸಿ ಹೇಳಿ ಬಳಿಕ ಪಿಟ್ಟನು ಕೊಯಿಲೋನೊಡನೆ ಲೋಬೋನಿರುವ ಸಂಕೇತಸ್ಥಾನಕ್ಕೆ ಹೋದನು.

೦ ೦ ೦ ೦ ೦

ಮರುದಿವಸ ಕಾರಣಾಂತರದಿಂದ ಪಿಟ್ಟನು ರೈಲ್ವೇಸ್ಟೇಷನ್ ಕಡೆಗೆ ಹೋಗಿದ್ದನು. ಅವನ ಸಂಬಂಧಿಕನೊರ್ವನು ಮದ್ರಾಸಿನಿಂದ ಎಕ್ಸ್‌ಪ್ರೆಸ್ ಟ್ರೈನಿನಲ್ಲಿ ಈ ದಿನ ಬರಲಿರುವನೆಂದು ತಂತಿ ಬಂದುದರಿಂದ ಅವನು ಸ್ಟೇಷನ್‌ನಲ್ಲಿ ಕಾದುಕುಳಿತಿದ್ದನು. ಯಾವಾಗಲೂ ಐದೂವರೆಗಂಟೆಗೆ ಮಂಗಳೂರಿಗೆ ತಲಪುವ ಎಕ್ಸ್‌ಪ್ರೆಸ್ ಈ ದಿನ ದುರದೃಷ್ಟದಿಂದ ರಾತ್ರಿ ಎಂಟುಗಂಟೆಯಾದರೂ ಬರಲಿಲ್ಲ. ಉಗಿಯಂತ್ರದ ಸ್ಟೇಷನ್ ತಾವಿನಲ್ಲಿ ಜನರು ಕಿಕ್ಕಿರಿದಿದ್ದರು. ಪಿಟ್ಟನು ಪ್ಲೇಟ್‌ಫೋರ್ಮ್‌ನಲ್ಲಿ ಆಚೀಚೆ ಉದ್ವೇಗಲಕ್ಕೆ ಹೆಜ್ಜೆಯಿಕ್ಕುತ್ತಾ ತಿರುಗಾಡುತಿದ್ದನು. ರಾತ್ರಿ ಎಂಟು ಗಂಟೆ ಕಳೆದು ಐದಾರು ನಿಮಿಷವಾಗಲು ಎಕ್ಸ್‌ಪ್ರೆಸ್ ಟ್ರೈನ್ ಬಂದಿತು. ಜನರ ಗಲಾಟೆಯಲ್ಲಿ ಪಿಟ್ಟನಿಗೆ ತನ್ನ ಸಂಬಂಧಿಕನನ್ನು ಹುಡುಕಲು ಬಹಳ ಪ್ರಯಾಸವಾಯಿತು. ಎಲ್ಲಿಯೂ ಸಂಬಂಧಿಕನು ಕಾಣದೆ ಇರಲು ಅವನು ಮತ್ತೂ ಮತ್ತೂ ಎಲ್ಲಾ 'ಕಂಪಾರ್ಟ್‌ಮೆಂಟ್'ಗಳಲ್ಲಿಯೂ ತಲೆಹಾಕಿ ನೋಡುತಿದ್ದನು. ಅಷ್ಟರಲ್ಲಿ ಆವನ ಸ್ನೇಹಿತನೊಬ್ಬನು ಬಂದು ನಿನ್ನ ಸಂಬಂಧಿಕನು ಏನೋ ಅಸೌಖ್ಯವಿದ್ದುದರಿಂದ ಈ ದಿನ ನನ್ನೊಡನೆ ಬರುವುದಿಲ್ಲವೆಂದಿರುವನೆಂದನು. ಅನಂತರ ಪಿಟ್ಟನು ವಿಶ್ರಾಂತಿಭವನದ ಮಾರ್ಗಹಿಡಿದು ನಡೆಯಲಾರಂಭಿಸಿದನು.

ಪಿಟ್ಟನು ಸಾಯಂಕಾಲ ಐದುಗಂಟೆಗೆ ಲೋಬೋನ ಹತ್ತಿರದಿಂದ ರೈಲ್ವೇಸ್ಟೇಷನ್‌ಗೆ ಬಂದಿದ್ದನಷ್ಟೆ! ಸಾಧಾರಣ ಆರೂವರೆ ಗಂಟೆಗೆ ಹಳ್ಳಿಯವನ್ನೊಬ್ಬನು ವಿಶ್ರಾಂತಿ ಭವನಕ್ಕೆ ಬಂದನು. ಅವನು ಬಹಳ ಜಿಪುಣನಾದ ಶ್ರೀಮಂತನೆಂದು ನೋಡುವಾಗಲೇ ತಿಳಿಯುತಿತ್ತು. ಬಂದರಿನಲ್ಲಿ ತನ್ನ ಕೆಲವು ಸರಕುಗಳನ್ನು ವಿಕ್ರಯಿಸಲವನು ಹಳ್ಳಿಯಿಂದ ಬಂದಿದ್ದನು. ಆತನು ಭಂಡಸಾಲೆಯಲ್ಲಿ ಸರಕುಗಳನ್ನು ಮಾರಿ ಸಿಕ್ಕಿದ ಏಳ್ನೂರು

ರೂಪಾಯಿಗಳನ್ನು ತನ್ನ ಬಟ್ಟೆಯ ತುದಿಯಲ್ಲಿ ಕಟ್ಟಿಕೊಂಡು ವಿಶ್ರಾಂತಿ ಭವನಕ್ಕೆ ಬಂದು ಒಂದು ಸಿಂಗಲ್ ರೂಮನ್ನು ಬಾಡಿಗೆಗೆ ಪಡಕೊಂಡನು. ಕೊಯಿಲೋನು ಆ ಹಳ್ಳಿಯವನು ವಿಶ್ರಾಂತಿಭವನಕ್ಕೆ ಬಂದಿರುವಾಗ ಮಾಘ ವನ ಹತ್ತಿರವೇ ಕುಳಿತಿದ್ದನು. ಹಳ್ಳಿಯವನನ್ನು ಕಂಡು ಈ ದಿನ ಇವ ನಲ್ಲಿರುವ ಹಣವನ್ನು ಸುಲಿಗೆ ಮಾಡಬೇಕೆಂದವನು ನಿಶ್ಚಯಿಸಿದನು. ಹಳ್ಳಿ ಗನು ಬಾಡಿಗೆಗೆ ಪಡೆಕೊಂಡ ಕೋಣೆಯಲ್ಲಿ ಹೋಗಿ ನೆಲಿಸಿದನು. ಸ್ವಲ್ಪ ಹೊತ್ತಿನಲ್ಲಿ ಕೊಯಿಲೋನು ಆ ಹಳ್ಳಿಯವನುಳಕೊಂಡ ರೂಮಿನ ಹತ್ತಿರ ಬಂದು ಅವನ ಊರು ಹೆಸರುಗಳನ್ನು ಕೇಳಿ ತಿಳಿದುಕೊಂಡನು. ಅನಂ ತರ ಸೇವಕನ ಹತ್ತಿರ ಅದೇ ಕೋಣೆಗೆ ಕಾಫಿತಿಂಡಿಗಳನ್ನು ತರಿಸಿ ಹಳ್ಳಿ ಯವನಿಗೆ ಕೊಟ್ಟು ತಾನೂ ಸ್ವೀಕರಿಸಿದನು ಕೊಯಿಲೋನ ಮನಸೆಳೆ ಯುವ ಅಂದಚಂದದ ಮಾತನ್ನೂ ಅವನ ಉಪಚಾರವನ್ನೂ ಕಂಡು ಹಳ್ಳಿ ಗನು ಇವನೊಬ್ಬ ಸಭ್ಯಗೃಹಸ್ಥನೆಂದೆಣಿಸಿದನು. ಸಾಧಾರಣ ಒಂದುಗಂಟೆ ಅವರು ಮಾತನಾಡುತ್ತಿರಲು ಅವರು ಪರಸ್ಪರರ ಸ್ನೇಹಿತರಂತಾದರು. ಪಾಪ! ಆ ಹಳ್ಳಿಯ ಕುರುಬನಿಗೆ ಮಂಗಳೂರಿನಂತಹ ಜಗಜಗಿಸುವ ನಗರಗಳಲ್ಲಿ ಸಭ್ಯರಂತೆ ನಟಿಸಿ ತಮ್ಮನ್ನು ವಂಚಿಸುವ ವಂಚಕರಿರುವರೆಂದೇನು ಗೊತ್ತು? ಅವರು ಸ್ನೇಹಿತರಂತೆ ಮಾತನಾಡುತ್ತಾ ಸ್ವಲ್ಪ ಸಮಯಕಳೆಯಲು ಕೊಯಿ ಲೋನು ಹಳ್ಳಿಗನೊಡನೆ ಈ ದಿನ ಮೈದಾನಿನ ಹತ್ತಿರದಲ್ಲಿರುವ ಸಿನೆಮಾ ಟೋಕೀಸ್‌ನಲ್ಲಿ ಅತಿ ಮನೋಹರವಾದ ಸಿನೆಮವಿದೆಯೆಂದು ಹೇಳಿ ತಾನೀಗ ಸಿನೆಮಕ್ಕೆ ಹೋಗಲಿರುವೆನೆಂದೂ ನೀನೂ ಬರುವುದಿದ್ದರೆ ಬಾ, ಎಂದೂಅಂದನು. ಹಳ್ಳಿಗನು ಇಷ್ಟರವರೆಗೆ ಸಿನೆಮ ನೋಡಿರಲಿಲ್ಲ. ಆದ್ದರಿಂದ ಅವನು ಕೊಯಿಲೋನೊಡನೆ ಸಿನೆಮವೆಂದರೇನು, ಎಂದು ಕೇಳಲು ಅವನು ಸಿನೆಮಾ ಚಿತ್ರದ ವಿಷಯವನ್ನು ವರ್ಣಿಸಿದನು ಅವನ ವರ್ಣನೆಯನ್ನು ಕೇಳಿ ಹಳ್ಳಿಗನು ಆಶ್ಚರ್ಯಪಟ್ಟು ತಾನೂ ಸಿನೆಮಕ್ಕೆ ಬರುವೆನೆಂದು ಹೇಳಿ ದನು. ಅನಂತರ ಅವರಿಬ್ಬರೂ ಬೇಗನೆ ಊಟ ತೀರಿಸಿ ಸಿನೆಮಕ್ಕೆ ಹೊರ ಟರು. ಆಗ ಹಳ್ಳಿಗನು ಕೊಯಿಲೋನೊಡನೆ ನನ್ನ ಕೈಯಲ್ಲಿ ಏಳ್ನೂರು ರೂಪಾಯಿಯಿದೆ. ಅದನ್ನೆಲ್ಲಿಡುವುದು? ಎಂದು ಕೇಳಿದನು. ಅದಕ್ಕವನು ಅದು ನಿನ್ನ ಹತ್ತಿರವೇ ಭದ್ರವಾಗಿರಲಿ. ವಿಶೇಷವೇನೂ ಅಪಾಯವಿಲ್ಲವೆಂದು ಧೈರ್ಯಹೇಳಿದನು. ಅವರಿಬ್ಬರೂ ಮೈದಾನ್‌ನ ಕಡೆಗೆ ಹೊರಟರು. ವಾಚ

ಕರೆ! ಹಳ್ಳಿಗನಿಗೆ ಮಾರ್ಗಪರಿಚಯುವಿಲ್ಲದುದರಿಂದ ಕೊಯಿಲೋನು ಅವನನ್ನು ಎಲ್ಲೆಲ್ಲಿಯೋ ಕರೆದುಕೊಂಡು ಹೋಗಿ ಮನೆಗಳು ವಿರಳವಾಗಿದ್ದ ಆದೊಂದು ಗಲ್ಲಿಗೆ ಕರೆದುಕೊಂಡು ಹೋದನು. ಆ ಗಲ್ಲಿಯು ರೈಲ್ವೇ ಸ್ಟೇಷನ್ನಿಂದ ಮೂಡುಕಡೆಯಲ್ಲಿದ್ದಿತು. ಕೂಡಲೇ ಪಿಶಾಚಿಯಂತಿರುವ ಕೊಯಿಲೋನು ಹಳ್ಳಿಯವನ ಕಡೆಗೆ ತಿರುಗಿ ನಿನ್ನ ಹತ್ತಿರವಿರುವ ಹಣವನ್ನು ಬೇಗನೆ ನನಗೆ ಕೊಡು; ಇಲ್ಲದಿದ್ದರೆ ನಿನ್ನನ್ನು ಸಂಹರಿಸಿ ಯಮಪುರಿಗಟ್ಟುವೆನು, ಎಂದು ಹೇಳಿ ಹಳ್ಳಿಗನ ಕುತ್ತಿಗೆಯನ್ನು ಬಲವಾಗಿ ಹಿಡಿದೊತ್ತಿದನು. ಆಗ ಅವನು ಹೆದರಿ ಮಮ್ಮಯ್ಯ ಒಂದು ಸಲ ಬಿಡು ಎಂದೊದರಿದರೂ ಕೊಯಿಲೋನು ಕೊರಳಿನಿಂದ ಕೈಯನ್ನು ತೆಗೆಯಲಿಲ್ಲ. ಜೀವದಾಶೆಯಿಂದ ಆಗ ಹಳ್ಳಿಗನು ತನ್ನಲ್ಲಿರುವ ಹಣವನ್ನವನಿಗೆ ಕೊಟ್ಟನು. ಕೂಡಲೇ ಆ ನೀಚನು ಹಳ್ಳಿಯವನನ್ನಲ್ಲಿಯೇ ಬಿಟ್ಟು ಎತ್ತಲೋ ಹೋದನು. ಹಳ್ಳಿಗನು ದಾರಿಕಾಣದೆ ಆ ಅಪರಿಚಿತ ಸ್ಥಳದಲ್ಲಿ ಅಲೆಯಲಾರಂಭಿಸಿದನು.

ಕೊಯಿಲೋನು ಅಲ್ಲಿಂದ ಬಲ್ಲತಕ್ಕ ಒಂದು ಕಪ್ಪಿಯ ಕಡೆಗೆ ಬಂದನು. ಅನಂತರ ಕರಮುಚಂದನ ಮನೆಯ ಹತ್ತಿರ ಹಾದು ಹೋಗುತ್ತಿರಲು ಪಿಟ್ಟನು ಅದೇ ಮಾರ್ಗದಲ್ಲಿ ಹಿಂದಿನಿಂದ ಬರುತ್ತಿದ್ದನು. ಮುಂದೆ ಹೋಗುತ್ತಿದ್ದವನು ಛದ್ಮವೇಷದಾರಿಯಾದ ಪತ್ತೆದಾರಿಯೇ ಆಗಿರಬೇಕೆಂದೂ ಕೊಯಿಲೋನು ಈಗ ಇಲ್ಲಿಗೆ ಬರಲು ಕಾರಣವಿಲ್ಲವೆಂದೂ ಪಿಟ್ಟನು ತರ್ಕಿಸಿದನು. ನಿನ್ನಿನ ದಿನ ಕರಮುಚಂದನಿಂದ ಪೆಟ್ಟು ತಿಂದುಂಟಾದ ಸಂತಾಪಾಗ್ನಿಯೀಗ ಕುದಿಯ ತೊಡಗಿತು. ಅವನು ತನ್ನ ಸೊಂಟದಲ್ಲಿ ಗುಪ್ತವಾಗಿಟ್ಟಿದ್ದ ಹರಿತವಾದ ಚಾಕುವನ್ನು ತೆಗೆದು, ಮೆಲ್ಲನೆ ಕೊಯಿಲೋನ ಹತ್ತಿರ ಬಂದು ಫಕ್ಕನೆ ಜಿಗಿದು ಅವನ ಮೈಮೇಲೆ ಹಾರಿ ಅವನ ಕುತ್ತಿಗೆಯನ್ನಿರಿಯಲು ಕೊಯಿಲೋನು ನೆಲಕ್ಕೆ ಧೊಪ್ಪನೆ ಬಿದ್ದನು. ಅಕಸ್ಮಾತ್ತಾಗಿ ತನ್ನನ್ನ ವಿಪತ್ತಿಗೀಡು ಮಾಡಿದವರಾರೆಂದು ತಿಳಿಯಲಿಕ್ಕೆ ಅವನು ಕಣ್ಣು ಬಿಟ್ಟು ನೋಡಲು ವಿದ್ಯುತ್ತ ಪ್ರಕಾಶದಲ್ಲಿ ಕ್ರೂರ ಮುಖವುಳ್ಳ ಭಯಂಕರ ಮೂರ್ತಿಯಾದ ಪಿಟ್ಟನನ್ನು ಕಂಡನು. ಪಿಟ್ಟನನ್ನು ಕಂಡು ಅವನನ್ನು ಎಲ ಇದೇನು, ನನ್ನನ್ನು ಕೊಂದೆಯಾ!! ಎಂದನು. ಆಗ ಅವನ ಸ್ವರ ಕೇಳಿ ಪಿಟ್ಟನಿಗವನ ಗುರತು ಸಿಕ್ಕಲು ವ್ಯಸನಗೊಂಡು, ತಾನು ಛದ್ಮವೇಷಧಾರಿಯಾದ ಕರಮುಚಂದನೆಂದೂಹಿಸಿ ಚಾಕುವಿನಿಂದಿರಿದೆನು.

ನನ್ನನು ಕ್ಷಮಿಸು. ಎಂದು ಹೇಳಿ ತನ್ನ ಅಚಾತುರ್ಯ ಕಾರ್ಯಕ್ಕಾಗಿ ಕಣ್ಣೀರು ಸುರಿಸಿದನು. ಕೊಯಿಲೋನಿಗೆ ಭಯಂಕರ ಗಾಯವಾದದ್ದರಿಂದ ಮಾತಾಡಲು ಆಗುತ್ತಿರಲಿಲ್ಲವಾದರೂ ಅವನು ಹೇಗಾದರೂ ಪಿಟ್ಟನೊಡನೆ, ನಾ ಮಾಡಿದ ಪಾಪದ ಕರ್ಮ....ಫಲವಿದು....ಎಂದು ಹೇಳಿದನು. ಕೂಡಲೇ ಅವನ ಪ್ರಾಣವಾಯುವು ಹಾರಿ ಹೋಗಿ, ಮುಖವು ನಿಸ್ತೇಜವಾಯಿತಲ್ಲ ಪಿಟ್ಟನಂತೂ ತನ್ನ ಕೈಯಿಂದ ಆಪ್ತ ಮಿತ್ರನ ಪ್ರಾಣ ಹರಣವಾಯಿತಲಾ. ಎಂದು ತಲ್ಲಣಿಸಿ, ಅನಂತರ ಆ ಮೃತ ದೇಹವನ್ನು ಹೇಗಾದರೂ ಹೊತ್ತು ಕೊಂಡು, ವಿಶ್ರಾಂತಿ ಭವನಕ್ಕಭಿಮುಖವಾಗಿ ಮುಂದುವರಿದನು. ಸ್ವಲ್ಪ ದೂರ ಮಾರ್ಗ ಕ್ರಮಣ ಮಾಡುತ್ತಿರಲು, ಸೈಕಲ್ ಬೆಲ್ಲಿನ ಶಬ್ದ ಶ್ರವಣ ವಾಗಲು ಪಿಟ್ಟನು ಅಂಜಿ, ಶವವನ್ನು ಚರಂಡಿಯಲ್ಲಿ ಹಾಕಿ, ತಾನು ನೆರಳು ಮರದ ಮರೆಯಲ್ಲಿ ಮೈ ಮರೆಸಿಕೊಂಡನು. ಸೈಕಲ್ ಹೋದನಂತರ, ಅವನು ಆ ಶವವನ್ನಲ್ಲಿಯೇ ಬಿಟ್ಟು ವಿಶ್ರಾಂತಿ ಭವನಕ್ಕೆ ಹೋದನು. ಪಿಟ್ಟನು ಹೊಟೆಲಿಗೆ ಬಂದಾಗ ಸಾಧಾರಣ ರಾತ್ರಿ ಹತ್ತು ಆಗಿರಬಹುದು ಅವನ ಮತ್ತೊಬ್ಬ ಸ್ನೇಹಿತನಾದ ಜೊಸೆಫನು ಅಲ್ಲಿ ಪಿಟ್ಟನನ್ನು ಕಾದು ಕುಳಿ ದ್ದನು. ಅನಂತರ ಅವರಿಬ್ಬರೂ ಒಟ್ಟಾಗಿ, ಸ್ವಿಜನ ಮನೆಗೆ ಹೋದರು. ಅಲ್ಲಿ ವಿಜ್ಞಾನಿಯು ತನ್ನನುಚರರನ್ನು ಕಾದು ಕುಳಿತಿದ್ದನು. ಪಿಟ್ಟನ ಕೈಯಲ್ಲಿರುವ ರಕ್ತದ ಕಲೆಯನ್ನು ಕಂಡು ಲೋಬೋನು ವಿಶೇಷ ಸಂಗತಿ ಯೇನೆಂದು ಕೇಳಿದಾಗ, ಪಿಟ್ಟನು ಭಯದಿಂದ ಥರ ಥರ ನಡುಗುತ್ತಾ ತನ್ನ ದುಡಕಿನ ಫಲವನ್ನು ಮೆಲ್ಲನೆ ವಿವರಿಸಿ ಹೇಳಿದನು ತನ್ನನುಚರರ ಲೊಬ್ಬನನ್ನು ಮತ್ತೊಬ್ಬನೇ ಕೊಂದನೆಂದು ತಿಳಿದ ಕೂಡಲೇ ವಿಜ್ಞಾನಿಯ ಕೋಪಾನಲಕ್ಕೆ ತುಪ್ಪವನ್ನೆರೆದಂತಾಯಿತು. ಅವನ ಸಿಟ್ಟಿನ ಜ್ವಾಲೆಗಳು ಪ್ರಜ್ವಲಿಸಿ, ತನ್ನನ್ನೆಲ್ಲಿ ಭಸ್ಮ ಮಾಡುವವೊ ಎಂದು ಪಿಟ್ಟನು ಭಯ ವಿಹ್ವಲ ನಾಗಿ ಗಡ ಗಡನೆ ನಡುಗಲಾರಂಭಿಸಿದನು.

ಲೋಬೋನು ನಿಂದ್ಯ ವಚನಗಳಿಂದ ಪಿಟ್ಟನನ್ನು ಜರಿದು ತಿರಸ್ಕರಿಸಿ ದನು ಪಿಟ್ಟನಾಗ ಚೆನ್ನಾಗಿ ಉಸಿರಾಡುತ್ತಿರಲೇ ಹೆದರಿ ಪಿಟ್ ಎನ್ನಲಿಲ್ಲ. ಲೋಬೋನು ಪಿಟ್ಟನೊಡನೆ, ' ನಿನ್ನ ದುಡುಕಿನ ಫಲ ' ದಿಂದಲಾಗಿ ನನ್ನ ಒಂದು ಕೈಯೇ ಮುರಿದಂತಾಯಿತೆಂದನು ಸ್ವಲ್ಪ ಸಮಯದಲ್ಲಿ ಲೋಬೋನ ಕೋಪವು ಉರಿದು ತನ್ನಿಂದ ತಾನೇ ಶಾಂತವಾಗಲಿ, ಅದನು

‘ ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು ? ಎಂದು ಹೇಳಿ ಅನಂತರದ ಕಾರ್ಯಕಲಾಪಗಳನ್ನು ವಿಚಾರಿಸಲಾರಂಭಿಸಿದನು

ವಾಚಕರೆ ! ಪ್ರಪಂಚದಲ್ಲಿ ಮಾನವರು ತಮಗೆ ಸರಿಯಾದವರಾರೂ ಇಲ್ಲವೆಂಬ ದುರಹಂಕಾರದಿಂದ, ತಮಗೆ ಇಷ್ಟ ಬಂದಂತೆ ನಡೆಯುತ್ತಿರುವರು ಕೆಲವು ಸಂಕುಚಿತ ಮತಿಗಳಾದ ನೀಚರು ತಾವು ಮಾಡುವುದೇ ನ್ಯಾಯವೆಂದು ತಿಳಿದು ಸ್ವೇಚ್ಛಾವರ್ತಿಗಳಾಗುತ್ತಿರುವರು. ಅಸತ್ಯವನ್ನೇ ನುಡಿದು, ಪರ ವಂಚಕರಾಗಿದ್ದು, ದುಷ್ಕರ್ಮಗಳನ್ನೇ ಮಾಡುತ್ತಿರುವರಿಗೆ ಲೋಕದಲ್ಲಿ ಚಿರಸ್ಥಾಯಿಯಾದ ಕೀರ್ತಿಯು ಸಿಗಲಾರದೆಂಬುದು ಸರ್ವ ಸಾಧಾರಣ ನಿರ್ಣಯವಷ್ಟೆ ! ಕೊಯಿಲೋನು ಅಧರ್ಮಿಯಾಗಿ, ತನ್ನ ಒಡೆಯನ ನೀಚ ಕಾರ್ಯಗಳಿಗೆ ಸಾರಥಿಯಂತಿದ್ದು ಬಲಗೈ ಬಂಟನಾಗಿದ್ದನು. ದುಷ್ಟರಿಗೆ ಅವರ ಕೆಲಸಗಳಿಂದ ಹಾಗೆಯೇ ದುರ್ಮರಣ ಒದಗುತ್ತದೆಯಲ್ಲವೇ ? ಪರರಿಗಿಟ್ಟ ಶೂಲ ತನಗೆಂಬಂತೆ, ಕರಮಚಂದನನ್ನು ಕೊಲ್ಲಲು ಹವಣಿಸಿ ಪಿಟ್ಟನು ತನ್ನ ಪ್ರಿಯ ಮಿತ್ರನಾದ ಕೊಯಿಲೋನನ್ನು ಭ್ರಮೆಯಿಂದ ಪತ್ತೇದಾರಿಯೆಂದೆಣಿಸಿ ಕೊಂದನಲ್ಲವೆ? ಲೋಕದಲ್ಲಿ ಸಾಧು ಸಜ್ಜನರನ್ನು ದೈವವೇ ಕಾಪಾಡುವದು ! ! !

ಮರು ದಿವಸ ಮುನಿಸಿಪಾಲಿಟಿಯ ಕೆಲಸಗಾರರು ಮಾರ್ಗದ ಬದಿಯಲ್ಲಿರುವ ಕಶ್ಮಲಗಳನ್ನು ತೆಗೆದು ನಿರ್ಮಲಗೊಳಿಸುತ್ತಿರಲು, ಚರಂಡಿಯಲ್ಲಿ ಬಿದ್ದಿರುವ ಕೊಯಿಲೋನ ಶವವನ್ನು ಕಂಡು ಯಾರೋ ದಾರಿಗನನ್ನು ಕೊಲೆಗಡುಕರು ಕೊಂದಿರುವರೆಂದು ತರ್ಕಿಸಿ ಆ ಶವವನ್ನು ಪೋಲೀಸ್ ಸ್ಟೇಷನ್‌ಗೆ ಕೊಂಡೊಯ್ದರು. ಪೋಲೀಸ್ ಸುಪರಿಡೆಂಟ ಯಶವಂತಸಿಂಹನು ಆ ಶವವನ್ನು ಚೆನ್ನಾಗಿ ಪರೀಕ್ಷಿಸಿ ನೋಡಲು ಕುತ್ತಿಗೆಯ ಹಿಂದೆ ಆ ಶವದಲ್ಲಿ ದೊಡ್ಡದೊಂದು ಗಾಯ ಪ್ರಕಾಶಿಸಿತು. ಕೊಲೆಗಡುಕನು ಚೂರಿಯಿಂದಿರಿದು ಈ ವ್ಯಕ್ತಿಯನ್ನು ಕೊಲೆ ಮಾಡಿರಬಹುದು ಎಂದವನು ತಿಳಿದನು. ಅನಂತರ ಅವನ ಅಪ್ಪಣೆಯಂತೆ ಶವದ ದೇಹದಲ್ಲಿ ಏನಾದರೂ ವಸ್ತುಗಳಿವೆಯೋ ಎಂದು ಯಾಮಿಕರು ಪರೀಕ್ಷಿಸಲು ಏಳ್ನೂರು ರೂಪಾಯಿಯ ನೋಟಿನ ಕಟ್ಟು ಆ ಶವದ ಅಂಗಿಯ ಒಳಗಿಸೆಯಲ್ಲಿ ದೊರೆತಿತು ಆ ಹಣವನ್ನು ಯಶವಂತನು ತೆಗೆದು ಸ್ಟೇಷನ್‌ನಲ್ಲಿಟ್ಟು, ಶವದ ರಕ್ಷಕರು ಯಾರಾದರೂ ಬಂದರೆ ಆಗ ಅವರಿಗವನ್ನು ಕೊಡಬಹುದೆಂದು

ನಿಶ್ಚಯಿಸಿದನು. ವಾಚಕವೃಂದ! ಕೊಯಿ-ಲೋನು ಹಳ್ಳಿಗನನ್ನು ಸುಲಿಗೆ ಮಾಡಿ ಫರಾರಿಯಾದನಂತರ ಆ ಹಳ್ಳಿಗನು ಬೀದಿಯಲ್ಲಿ ಸುತ್ತಿ ಸುತ್ತಿ ಎಲ್ಲೆಲ್ಲೋ ಹೋದನು. ಬೆಳಗಾಗುವಾಗ ಅವನು ಬಂದರಿನ ಸಮೀಪಕ್ಕೆ ತಲಪಿದ್ದನು. ಅನಂತರವನು ಚಿಂತಿಸುತ್ತಾ ಮಾರ್ಗದಲ್ಲಿ ಬರುತ್ತಿರಲು ಒಬ್ಬ ಪೋಲೀಸ್‌ನನ್ನು ಕಂಡನು. ಅವನೊಡನೆ ಚೋರನೋರ್ವನು ತನ್ನನ್ನು ವಂಚಿಸಿ, ಸೊತ್ತನ್ನಪಹರಿಸಿದ ಸಂಗತಿಯನ್ನು ಆಮೂಲಾಗ್ರ ತಿಳಿಸಿದನು. ದಯಾವಂತನಾದ ಆ ಯಾಮಿಕನು ಹಳ್ಳಿಯವನನ್ನು ಕರೆದುಕೊಂಡು ಪೋಲೀಸ್ ಸ್ಟೇಷನ್‌ಗೆ ಬಂದನು. ಅಲ್ಲಿ ಯಶವಂತನೊಡನೆ ಹಳ್ಳಿಯವನು ಕಳೆದ ರಾತ್ರಿಯಲ್ಲಿ ನಡೆದ ಸಮಾಚಾರವನ್ನು ತಿಳಿಸಲು ಅವನು ನಿನ್ನ ಕೈಯಿಂದ ಹಣ ಸುಲಿಗೆ ಮಾಡಿದ ವ್ಯಕ್ತಿಯನ್ನು ನೀ ಕಂಡರೆ ಗುರುತಿಸ ಬಲ್ಲೆಯಾ ? ಎಂದು ಪ್ರಶ್ನಿಸಿದನು. ಹಳ್ಳಿಗನು ಎದುರಿನಲ್ಲಿ ಕಂಡರೆ ನಾನಾ ಚೋರನನ್ನು ಖಂಡಿತವಾಗಿಯೂ ಗುರುತಿಸುವೆನೆಂದನು. ಆಗವನನ್ನು ಶವವಿದ್ದಲ್ಲಿ ಕರೆದುಕೊಂಡು ಹೋಗಿ ಈ ಮೃತ ವ್ಯಕ್ತಿಯ ಪರಿಚಯವಿರುವುದೇ? ಎಂದು ಕೇಳಲು ಅವನು ಮೃತದೇಹವನ್ನು ಕಂಡು ಚೀರಿದನು; ಆದರೆ ಪೋಲೀಸರು ಅವನನ್ನು ಧೈರ್ಯಪಡಿಸಿದ ಮೇಲೆ ಆ ಶವವನ್ನವನು ಚೆನ್ನಾಗಿ ನೋಡಲು ತನ್ನಿಂದ ಬಲಾತ್ಕಾರವಾಗಿ ಹಣವನ್ನಪಹರಿಸಿದ ವ್ಯಕ್ತಿಯಿವನೇ! ಎಂದು ಗಟ್ಟಿಯಾಗಿ ಹೇಳಿದನು ಇದನ್ನು ಕೇಳಿ ಸುಪರಿಡೆಂಟನು ಈ ಹಳ್ಳಿಗನಿಂದ ಈ ಚೋರನು ಹಣವನ್ನಪಹರಿಸುತಿದ್ದುದನ್ನು ಬೇರೊಬ್ಬ ನೀಚ ನೋಡಿರಬೇಕು. ಅನಂತರವನು ಈ ಚೋರನೊಡನೆ ಹಣವನ್ನು ತಸ್ಕರ ಮಾಡಲು ಜಗಳವಾಡಿ ಕಡೆಗೆ ಖೂನಿಮಾಡಿರಬೇಕು; ಆದರೆ ಅಷ್ಟರಲ್ಲಿ ಪಥಿಕರ ಕಾಲಸಪ್ಪಳವನ್ನೇನಾದರೂ ಕೇಳಿ ತಾನಿನ್ನು ಸಿಕ್ಕಿಬೀಳುವೆನೆಂದು ಬೆದರಿ ಹೆಣದ ಹತ್ತಿರದಿಂದ ಹಣವನ್ನು ತೆಗೆದುಕೊಳ್ಳದೆ ಓಡಿಹೋಗಿರಬೇಕು, ಎಂದು ತರ್ಕಿಸಿದನು. ಅನಂತರ ಆ ಹಣವನ್ನು ಯಶವಂತನು ಹಳ್ಳಿಗನಿಗೆ ಕೊಟ್ಟು ಅವನೊಡನೆ ಯಾಮಿಕನೋರ್ವನನ್ನು ವಿಶ್ರಾಂತಿಭವನದ ಮೇನೇಜರ್ ಮಾಧವನನ್ನು ಬರಹೇಳು, ಎಂದು ಕಳುಹಿಸಿದನು. ಸ್ವಲ್ಪ ಸಮಯದಲ್ಲಿ ಮಾಧವನು ಬಂದನು. ಯಶವಂತನು ಅವನೊಡನೆ ಕೊಯಿಲೋನ ಶವವನ್ನು ತೋರಿಸಿ ನಿನಗಿವನ ಪರಿಚಯವಿಲ್ಲವೆ? ಎಂದು ಕೇಳಲು, ಮಾಧವನು ಹೆಣ

ವನ್ನು ಕಂಡು ಗುರುತು ಹಿಡಿದಿದ್ದರೂ ತನಗೀ ವ್ಯಕ್ತಿಯು ಗುರುತೇ ಇಲ್ಲವೆಂದು ಗೋಣಲ್ಲಾಡಿಸಿದನು. ಅನಂತರ ಸುಪರಿಂಡೆಂಟ್‌ನು ಹೆಣವನ್ನು ಸ್ಮಶಾನಕ್ಕೆ ಕಳುಹಿದನು ಹಳ್ಳಿಗನು ಕಳೆದುಹೋದ ತನ್ನ ಐಶ್ವರ್ಯವನ್ನು ಪುನಃ ದೊರಕಿಸುವದಕ್ಕಾಗಿ ಯಶವಂತನಿಗೆ ಮನ್ನಣೆಯನ್ನು ಸಲ್ಲಿಸಿ ತನ್ನ ಹುಟ್ಟೂರಿಗೆ ತೆರಳಿದನು.

— —

## ಬೇಂಕಿನಿಂದ ಕಳವು

ವಾಚಕರೆ! ಇಷ್ಟರವರೆಗೆ ಕೊಯಿಲೋನು ಸ್ವಿಚ್‌ನ ಮನೆಯಲ್ಲಿಡಲ್ಪಟ್ಟ 'ಟೆಲಿವಿಶನ್'ನಿಂದ ನ್ಯೂವೋಡೆಲ್ ಬೇಂಕಿನಲ್ಲಿ ನಡೆಯುವ ದೃಶ್ಯಗಳನ್ನು ನೋಡುತ್ತಿದ್ದನಷ್ಟೆ! ಆದರೆ ಈಗ ಅವನು ಆಕಸ್ಮಾತ್ತಾಗಿ ಕಾಲವಾಗಲು ವಿಜ್ಞಾನಿಯು ಅವನ ಸ್ಥಾನಕ್ಕೆ ಜೋಸೆಫ್‌ನನ್ನು ನೇಮಿಸಿದನು. ಜೋಸೆಫ್‌ನು ಬಹಳ ಜಾಗರೂಕತೆಯಿಂದ ಆ ಟೆಲಿವಿಶನ್ ಯಂತ್ರದ ಎದುರಿನ ಕನ್ನಡಿಯನ್ನು ನೋಡುತ್ತಾ, ಗ್ರಾಹಕವನ್ನು ಕಿವಿಗೆ ಹಿಡಿದು ಈ ದಿನ ಬೆಳಗ್ಗೆ ಆ ಸ್ವಿಚ್‌ನ ಮನೆಯ ನೆಲಮಾಳಿಗೆಯ ಭದ್ರವಾದೊಂದು ಕೋಣೆಯಲ್ಲಿ ಕುಳಿತಿದ್ದನು ಸಾಧಾರಣ ಹನ್ನೊಂದು ಗಂಟೆಯಾಗಲು ನ್ಯೂವೋಡೆಲ್ ಬೇಂಕಿಗೆ ಡೈರೆಕ್ಟರ್ ಮಹಾಶಯನು ಆಗಮಿಸಿದನು. ಅವನು ವಯೋವೃದ್ಧನಾಗಿದ್ದರೂ ಯುವಕರಂತೆ ಉತ್ಸಾಹದಿಂದ ಕಾರಿನಿಂದಿಳಿದು ಬೇಂಕಿನೊಳಗೆ ಬಂದನು. ಆಗ ಮೇನೇಜರ್ ನಾರಾಯಣರಾವ್‌ನು ನಿತ್ಯದಂತೆ ಬೇಂಕಿನ ಲೆಕ್ಕಪತ್ರಗಳನ್ನು ನೋಡುತ್ತಿದ್ದು ಹಣವನ್ನು ಲೆಕ್ಕಮಾಡುತ್ತಿದ್ದನು ಟಪ್ ಟಪ್ ಎಂಬ ಬೂಟ್ಸಿನ ಶಬ್ದಕೇಳಿ ಅವನು ತಲೆ ಎತ್ತಿ ನೋಡುತ್ತಿರಲು ಡೈರೆಕ್ಟರ್ ಬಂದುದನ್ನು ಕಂಡು ಎದ್ದುನಿಂತು ನಮಸ್ಕರಿಸಿದನು. ಡೈರೆಕ್ಟರನು ಕುರ್ಚಿಯೊಂದರಲ್ಲಿ ಕುಳಿತು ಅನಂತರ ಹಣಕಾಸಿನ ವಿಚಾರವಾಗಿ ಸ್ವಲ್ಪಸಮಯ ಮಾತನಾಡಿ ಮನೆಗೆ ಹೊರಡಲನುವಾದನು. ಅಷ್ಟರಲ್ಲಿ ಗುರ್, ಗುರ್ ಎಂದು ಶಬ್ದಿಸುತ್ತಾ ಕಾರೊಂದು ಬಂದು ಬೇಂಕಿನೆದುರು ನಿಂತಿತು

ಕಾರಿನಿಂದ ಒಬ್ಬ ಪ್ರೌಢ ವ್ಯಕ್ತಿಯು ಇಳಿದು ಬೇಂಕ್‌ನ ಕಾರ್ಯಾಲಯಕ್ಕೆ ಬಂದನು. ಅವನನ್ನು ಕಂಡು ಡೈರೆಕ್ಟರನು ಎದ್ದು ಹಸ್ತಲಾಘವ

ವನ್ನಿತ್ತು ಆಗಂತುಕನನ್ನು ಸುಖಾಸನದಲ್ಲಿ ಕುಳ್ಳಿರಿಸಿದನು. ಆಗಂತುಕನು ಮಂಗಳೂರಿನಲ್ಲಿ ಸುಪ್ರಸಿದ್ಧ ಸರ್ಜನ್‌ನಾದ ಡಾ॥ ನಾಗೇಶನಾಗಿದ್ದನು. ಮೇನೇಜರ್ ನಾರಾಯಣರಾವ್ ನಿಂತಲ್ಲಿಂದಲೇ ಹಸನ್ಮುಖಿಯಾಗಿ ನಮ ಸ್ಕರಿಸಿದನು. ಡಾ॥ ನಾಗೇಶನು ಅತ್ಯಂತ ಪ್ರಸಿದ್ಧ ಸರ್ಜನ್‌ನಾದ್ದರಿಂದ ಅವನ ಪರಿಚಯ ಡೈರೆಕ್ಟರ್‌ನಿಗೆ ಚೆನ್ನಾಗಿತ್ತಲ್ಲದೆ ಡಾಕ್ಟರ್ ಇವರ ನಚ್ಚಿನ ಗೆಳೆಯರಾಗಿಯೂ ಇದ್ದರು. ಡಾ॥ ನಾಗೇಶನು ಬೇಂಕಿನಲ್ಲಿ ಠೇವಣಾತಿ ಇಡಲು ರೂ. ೩೦ ಸಾವಿರ ತಂದಿದ್ದನು. ನಾರಾಯಣರಾಯನು ಲೆಕ್ಕದಲ್ಲಿ ಸರ್ಜನ್‌ನ ಹೆಸರಿನಲ್ಲಿ ಇಪ್ಪತ್ತುಸಾವಿರವೆಂದು ಬರೆದು ಹಣಪಡೆದುಕೊಂಡು ರಸೀದಿ ಕೊಡಲು ನನಗೀಗ ಅತಿ ಜರೂರಾದ ಕೆಲಸವಿರುವುದರಿಂದ ಇನ್ನಿಲ್ಲಿ ನಿಲ್ಲಲು ಅವಕಾಶವಿಲ್ಲವೆಂದು ಡಾ॥ ನಾಗೇಶನು ಹೇಳಿ ನಮಸ್ಕಾರವಿತ್ತು ಸರಸರನೆ ಕಾರನ್ನೇರಿ ಹೊರಟು ಹೋದನು. ಈ ದೃಶ್ಯವೆಲ್ಲ ಟೆಲಿವಿಶನ್‌ನಲ್ಲಿ ಜೊಸೆಫ್‌ನಿಗೆ ಕಾಣಿಸುತಿದ್ದುವೆಂದು ಬೇರೆ ಹೇಳಬೇಕೆ?

ಮಧ್ಯಾಹ್ನ ನಂತರ ಮೂರುಗಂಟೆ ಸಮಯವಾಗಲು ಇನ್ನೂ ಐದಾರು ನಿಮಿಷವಿದ್ದಿರಬಹುದು. ಆಗ ಘೋಷಾ ತೊಟ್ಟುಕೊಂಡ ತರುಣಿ ಯೋರ್ವಳು 'ಜಟಕಾ' ಗಾಡಿಯಲ್ಲಿ ಬೇಂಕಿನವರೆಗೆ ಬಂದು ಗಾಡಿಯಿಂದ ಕೆಳಗಿಳಿದಳು. ಘೋಷಾವಿದ್ದುದರಿಂದವಳ ಮುಖವು ಕಾಣಿಸುತ್ತಿರಲಿಲ್ಲ ವಾದರೂ ಅವಳ ನಡಿಗೆಯ ರೀತಿಯಿಂದಲೂ ಮತ್ತು ಉಟ್ಟುಕೊಂಡ ಉಡಿಗೆ-ತೊಡಿಗೆಗಳನ್ನೂ ನೋಡಿದರೆ ಅವಳೊಬ್ಬ ಸಿರಿವಂತ ಮನೆತನದ ಮುಸಲ್ಮಾನ ಯುವತಿಯೆಂದು ತರ್ಕಿಸಬಹುದಾಗಿತ್ತು. ಅವಳೊಟ್ಟಿಗೆ ಬೇರಾವ ಗೆಳತಿಯರಾಗಲೀ ಸೇವಕಿಯರಾಗಲೀ ಇರಲಿಲ್ಲ. ಸಿರಿವಂತ ತರುಣಿಯೋರ್ವಳು ಏಕಾಕಿಯಾಗಿ ಬೇಂಕಿಗೆ ಬರಲು ಅಷ್ಟು ಗಡುತರವಾದ ಕಾರಣವು ಅದಾವುದು? ಆದರೆ ಆ ವಿಷಯವು ನಮಗೆ ಯೋಚನೆಗೆ ಸಿಲು ಕದ-ನಿಲುಕದ ಮಾತಾಗಿತ್ತು. ಇರಲಿ ಅವಳು ಮುಂದೇನು ಮಾಡುವ ಳೆಂದು ನೋಡುವ. ಮೆಲ್ಲಮೆಲ್ಲನೆ ಮಂದಗಮನೆಯಾದ ಆ ನವ ಯುವ ತಿಯು ಬೇಂಕಿನ ಮೆಟ್ಟಲುಗಳನ್ನೇರಿದಳು. ಮುಂದೆ ಹೋಗಲವಳಿಗೆ ಬೆದ ರಿಕೆಯೂ ಲಜ್ಜೆಯೂ ಉಂಟಾಗಿರಬಹುದೆಂದು ಕಾಣುತ್ತದೆ. ಅನಂತರ ಹೇಗೂ ಬಂದ ಕಾರ್ಯವನ್ನು ಸಾಧಿಸಲೋಸ್ಕರ ಅವಳು 'ಆಫೀಸ್ ರೂಂ' ನ ಒಳಗೆ ಮುಂದುವರಿದಳು. ಯಾರೋ ಬಾಗಿಲಿನವರೆಗೆ ಬಂದಿರುವ

ರಿಂದ ತಿಳಿದು ಮೇನೇಜರನು ಮುಖವೆತ್ತಿ ನೋಡಲು ಘೋಷಾ ಹಾಕಿದ ತರುಣಿಯು ಅವನ ಕಣ್ಣೆದುರಿಗೆ ಬಂದಳು. ಅಷ್ಟರಲ್ಲಿ ಆ ಯುವತಿಯು ತನ್ನ ಮುಖಪರದೆಯನ್ನು ತೆಗೆದುಹಾಕಲು ನಾರಾಯಣರಾಯನ ಆಗಿನ ಸ್ಥಿತಿಯನ್ನೇನೆನ್ನಲಿ!!! ರತೀದೇವಿಯೇ ಇಲ್ಲಿ ಪ್ರತ್ಯಕ್ಷವಾದಂತೆಯೂ ಸೌಂದರ್ಯವೇ ಮೂರ್ತಿವೆತ್ತಾಗಿ ಬಂದಂತೆಯೂ ಸುರಾಂಗನೆಯಾದ ಅಪ್ಸರೆಯರಲ್ಲೋರ್ವಳು ಬಂದಂತೆಯೂ ಆ ಅಪ್ರತಿಮ ರಮಣೀಯವಾದ ಕೋಮಲ ಸುರ ಸುಂದರಿಯರನ್ನು ಧಿಕ್ಕರಿಸುವಷ್ಟು ರೂಪ ಲಾವಣ್ಯಗಳಿಂದ ಕೂಡಿದ ಯವನ ಯುವತಿಯನ್ನು ಕಂಡು ಅವನು ದಿಗ್ಭ್ರಾಂತನಾಗಿ ಸುಮ್ಮನೆ ಕುಳಿತನು. ವಾಚಕರು ಆ ದಿವ್ಯ ಸೌಂದರ್ಯವತಿಯನ್ನು ಕಂಡಿದ್ದರೆ ಏನು ಮಾಡುತಿದ್ದರೊ? ಅದು ಊಹಿಸಲು ಅಸಾಧ್ಯವಾದ ಸಂಗತಿ. ಹೇಗೂ ಇರಲಿ. ಪ್ರಕೃತ ಆ ಮುಸಲ್ಮಾನ ಕುಲೀನ ತರುಣಿಯು ಅದ್ಭುತ ಸುಸ್ವರೂಪ ಸೌಂದರ್ಯದಿಂದ ಕೂಡಿದ್ದಳೆಂಬ ಅಭಿಪ್ರಾಯ ಉಂಟಾದರೆ ಸಾಕು. ಅವಳ ಮುಖದಲ್ಲಿ ನಾಚಿಕೆಯಿಂದಲಾಗಿ ಬೆವರಿನ ಹನಿಗಳು ಉಂಟಾವಾಗ ತಾವರೆ ಎಲೆಯ ಮೇಲೆ ಬಿದ್ದ ನೀರಿನ ಹನಿಯಂತೆ ಹೊಳೆಹೊಳೆದು ಶೋಭಿಸಿತು. ಸ್ವಲ್ಪಸಮಯ ಅವಳು ಸುಮ್ಮನೆ ನಿಂತರೂ ಕಡೆಗೆ ಮೇನೇಜರ್‌ನೊಡನೆ ತಾನೊಬ್ಬ ಸಿರಿವಂತ ಮುಸಲ್ಮಾನ ತರುಣಿಯೆಂದೂ ನಾನೀಗ ಕಷ್ಟ ಸ್ಥಿತಿಯಲ್ಲಿರುವುದರಿಂದ ನನ್ನ ಆಭರಣಗಳನ್ನು ಒತ್ತೆಯಾಗಿಟ್ಟುಕೊಂಡು ಹತ್ತುಸಾವಿರ ರೂಪಾಯಿ ಕೊಡಬೇಕೆಂದೂ ಹೇಳಿ ಕೆಲವು ಅಮೂಲ್ಯ ಬೆಲೆಬಾಳುವ ಆಭರಣಗಳನ್ನು ತನ್ನ ಶರೀರದಿಂದ ತೆಗೆದು ಮೆಲ್ಲನೆ ಮೇಜಿನ ಮೇಲಿಟ್ಟು ಹಿಂದೆಸರಿದು ನಿಂತಳು. ನಾರಾಯಣರಾಯನು ಆಗ ಬೇಂಕಿನ 'ಬಿಸ್‌ನೆಸ್' ಸಮಯವೀಗ ಕಳೆಯಿತು. ಆದ್ದರಿಂದ ನಾಳೆ ಬೆಳಗ್ಗೆ ಬನ್ನಿರೆಂದನು. ಆಗಾ ತರುಣಿಯು ನನಗೀ ದಿನವೇ ಹಣವು ಅಗತ್ಯವಿದೆಯೆಂದು ಬೇಡಿಕೊಳ್ಳಲು ಅವನು ಆಯಿತೆಂದು ಹೇಳಿ ಆ ಆಭರಣಗಳನ್ನು ತೂಗಿ ನೋಡಿ ಬೇಂಕಿನ ಕಾನೂನಿನಂತೆ ಅವುಗಳಿಗೆ ಕ್ರಯಕಟ್ಟಿ ಅಡುವಿನಲ್ಲಿ ಎಂಟುಸಾವಿರ ರೂಪಾಯಿ ಕೊಡಬಹುದೆಂದು ಹೇಳಿದನು. ಯುವತಿಯು ಆಗ ನನಗೀಗ ೧೦ ಸಾ. ರೂಪಾಯಿ ಸಿಕ್ಕದೆ ನಿವೃತ್ತಿಯೇ ಇಲ್ಲವಾದುದರಿಂದ ಅಷ್ಟು ಹಣಕೊಡಬೇಕೆಂದು ಕೇಳಲು ಮೇನೇಜರನು ಅಷ್ಟು ಹಣಕೊಡಲು ಸಾಧ್ಯವಿಲ್ಲ ಬೇರೆಲ್ಲಿಯಾದರೂ ಅಡ

ವಿಟ್ಟು ಅಷ್ಟು ಹಣ ಸಿಗುವುದಿದ್ದರೆ ನೋಡಿ ಎಂದನು. ಆದರೂ ತರು ಣಿಯು ಅಲ್ಲಿಂದ ಕದಲದೆ ಕಣ್ಣೀರು ಸುರಿಸುತ್ತಾ ಹತ್ತು ಸಾವಿರ ರೂಪಾಯಿ ಸಿಕ್ಕದಿದ್ದರೆ ನನ್ನ ತಂದೆಯ ನಾಶವು ಈಗಲೇ ಆಗುವ ಸಂದರ್ಭ ಒದಗಿದೆ ಯೆಂದು ಹೇಳಲು, ನಾರಾಯಣರಾಯನು ಅಂತಹ ಸಂದರ್ಭವೊದಗಲು ಕಾರಣವೇನೆಂದು ಕೇಳಿದಾಗ ಅವಳು ಈ ರೀತಿ ಹೇಳಿದಳು:—

ನನ್ನ ತಂದೆಯು ಬಂದರವಲ್ಲಿ ಒಂದು ದೊಡ್ಡ ಕಾಫಿ ಕಾರ್ಖಾನೆಯನ್ನು ಸ್ಥಾಪಿಸಿ ಮೂರು ನಾಲ್ಕು ವರ್ಷಗಳಾದವು ಚೆನ್ನಾಗಿ ಲಾಭ ದೊರಕು ತ್ತಿದ್ದರೂ, ಈಗ ಕಳೆದ ವರ್ಷದಿಂದ ನಷ್ಟವು ವಿಪರೀತವಾಗಿ ಸಂಭವಿಸಿದು ದರಿಂದ, ಬೊಂಬಾಯಿಯಲ್ಲಿರುವ ಒಬ್ಬ ಸಾಹುಕಾರನಿಂದ ಇಪ್ಪತ್ತು ಸಾವಿರ ರೂಪಾಯಿ ಕಡ ಪಡೆದುಕೊಂಡನು ಆ ಸಾಹುಕಾರನು ನಿನ್ನೆ ಮನೆಗೆ ಬಂದು ತನಗೆ ಈ ದಿನವೇ ಹಣ ಕೊಡಬೇಕೆಂದು ಒತ್ತಾಯ ಮಾಡ ಲು ತಂದೆಯು ಇನ್ನು ನಾಲ್ಕೈದು ದಿವಸಗಳಲ್ಲಿ ಹಣ ವಾಪಸ್ಸು ಕೊಡು ತ್ತೇನೆಂದು ಹೇಳಿದನು. ಆದರೂ ಆ ವರ್ತಕನು ನಿರ್ದಯನಾಗಿ, ನೀನು ಈ ದಿವಸ ಹಣ ಕೊಡದಿದ್ದರೆ ನಾನು ನಿನ್ನ ಮೇಲೆ ದಾವೆ ಮಾಡುವೆನೆಂದು ಬೆದರಿಸಿದನು. ಅವನು ದಾವೆ ಮಾಡಿದವನಾದರೆ ನನ್ನ ತಂದೆಯ ಆರ್ಥಿಕ ಸ್ಥಿತಿಯು ಜನರಿಗೆಲ್ಲ ಗೊತ್ತಾಗಿ ವಿಪರೀತವಾಗುವ ಸಂದರ್ಭವಿದೆ ಆದ್ದ ರಿಂದ ತಂದೆಯು ವಿಷ ತಿಂದು ಆತ್ಮಹತ್ಯೆ ಮಾಡಲು ಪ್ರಯತ್ನಿಸಿದನು. ಆಗ ನಾನವನನ್ನು ತಡೆದು ನನ್ನ ಆಭರಣಗಳನ್ನು ಒತ್ತೆಯಿಟ್ಟು ಈಗಲೇ ಸ್ವಲ್ಪ ಹಣ ತರುತ್ತೇನೆಂದು ಹೇಳಲು ತಂದೆಯು ಆ ಸಾಹುಕಾರನೊಡನೆ ಹಾಗಾದರೆ ನಾನೀಗ ಸ್ವಲ್ಪ ಹಣವನ್ನು ಕೊಟ್ಟು ಉಳಿದುದನ್ನು ಐದಾರು ದಿವಸಗಳಲ್ಲಿ ಕೊಡುವೆನೆಂದು ಹೇಳಿದನು. ಅದಕ್ಕವನು ಈ ದಿನ ಹತ್ತು ಸಾವಿರವಾದರೂ ನೀನು ಕೊಟ್ಟರೆ ಉಳಿದುದನ್ನು ನಾಲ್ಕು ದಿವಸಗಳಲ್ಲಿ ಕೊಟ್ಟರೆ ಸಾಕು. ಹತ್ತು ಸಾವಿರದಿಂದ ಕಡಿಮೆ ಒಂದು ಚಿಕ್ಕಾಸಾದರೂ ನಾನು ಪಡೆದುಕೊಳ್ಳಲಾರನೆಂದು ದಾವೆ ಮಾಡುವೆನೆಂದಿರುವವು ಆದ್ದ ರಿಂದ ಹತ್ತು ಸಾವಿರ ರೂ ಸಿಗದೆ ನಿವೃತ್ತಿಯಿಲ್ಲವೆಂದಳು. ಅವಳ ಮಾತು ಗಳನ್ನು ಕೇಳಿ ನಾರಾಯಣರಾಯನು ಚಿಂತೆಗೊಳಗಾದನು ಕಡೆಗೆ ಕಾನೂನಿನಂತೆ ಆ ಆಭರಣಗಳಿಗೆ ಹತ್ತು ಸಾವಿರ ಕೊಡಲು ಸಾಧ್ಯವಿಲ್ಲದಿ ದ್ದರೂ ದಯೆಯಿಂದ ಸಹೃದಯನಾದ ಅವನು ಆ ನಗಗಳನ್ನು ಅಡವಿಟ್ಟು

ಕೊಂಡು ೧೦ ಸಾ. ರೂಪಾಯಿಗಳನ್ನು ಕೊಟ್ಟನು. ಆಗ ಆ ಮುಸಲ್ಮಾನ ಸುಕುಮಾರಿಯು ಕೃತಜ್ಞತೆಗಳನ್ನರ್ಪಿಸಿ ಮುಖಕ್ಕೆ ಪರದೆಯನ್ನು ಹಾಕಿ ಕೊಂಡು ಜಟ್ಕಾ ಗಾಡಿಯಲ್ಲಿ ತನ್ನ ಮನೆಗೆ ಹೊರಟಳು. ಮೇನೇಜರ ನಾರಾಯಣರಾಯನು ಆ ನಗಗಳನ್ನು ಪೆಟ್ಟಿಗೆಯಲ್ಲಿ ಭದ್ರಮಾಡಿಸಿ ಅನಂತರ ಸೇವಕನ ಹತ್ತಿರ ಕಿಟಿಕಿ ಬಾಗಿಲುಗಳನ್ನೆಲ್ಲಾ ಹಾಕಿಸಿ ತನ್ನ ವಾಸಸ್ಥಳಕ್ಕೆ ತೆರಳಿದನು. ವಾಚಕರೆ! ಮೇಲೆ ಹೇಳಿದ ಸಂಗತಿಗಳೆಲ್ಲ ಜೊಸೆಫನಿಗೆ ನರ್ತನ ಬೊಂಬೆಯಲ್ಲಿ ಟೆಲಿವಿಶನ್ ಮತ್ತು ಟೆಲಿಫೋನ್‌ಗಳಿಂದಲಾಗಿ ಗೊತ್ತಾಗಿದ್ದಿತು. ನಾರಾಯಣರಾಯನು ಬೆಂಕಿನಿಂದ ಹೊರಟನಂತರ ಅವನು ಆ ಸ್ವಿಚನ ಮನೆಯಲ್ಲಿ ಟೆಲಿವಿಶನ ಯಂತ್ರವಿದ್ದ ಕೋಣೆಗೆ ಭದ್ರವಾಗಿ ಬಾಗಿಲನ್ನು ಹಾಕಿ ಅಲ್ಲಿಂದ ವಿಶ್ರಾಂತಿ ಭವನಕ್ಕೆ ಹೋದನು. ಅಲ್ಲಿ ಪಿಟ್ಟನು ಜೊಸೆಫನನ್ನು ದಾರಿ ಕಾಯುತ್ತ ಕುಳಿತಿದ್ದನು. ಇವನನ್ನು ಕಂಡು ಅವನು ಇವನೊಡನೆ ಸಂಕೇತ ಸ್ಥಾನಕ್ಕೆ ಹೋದನು. ಜೊಸೆಫ್‌ನು ನ್ಯೂ ಮೋಡೆಲ್ ಬೆಂಕಿನಲ್ಲಿ ನಡೆದ ಸಂಗತಿಗಳನ್ನೆಲ್ಲ ವಿವರಿಸಿ ಹೇಳಲು. ಹಾಗಾದರೆ ನಾವು ಈ ದಿನವೇ ಆ ಆಭರಣಗಳನ್ನು ಮತ್ತು ರೂಪಾಯಿಯನ್ನು ಅಪಹರಿಸಬೇಕೆಂದು ಪಿಟ್ಟನು ಹೇಳಿ ಲೋಬೊನನ್ನು ಕಾಣಲು ಹೊರಟು ಹೋದನು.

ಪಿಟ್ಟನು ವಿಶ್ರಾಂತಿ ಭವನದಿಂದ ಲೋಬೋನ ಮನೆಗೆ ಹೊರಟಾಗ ಸಾಯಂಕಾಲ ನಾಲ್ಕೂವರೆ ಗಂಟೆಯಾಗಿದ್ದಿತು. ಅವನು ಸೈಕಲ್ ಮೇಲೆ ಹೊರಟಿದ್ದನು. ಪಿಟ್ಟನು ವಿಜ್ಞಾನಿಯ ಮನೆಗೆ ತಲುಪಿದಾಗ ಲೋಬೋನು ಅಲ್ಲಿರಲಿಲ್ಲ. ಸೇವಕರೊಡನೆ ವಿಚಾರಿಸಿದಾಗ ಯಜಮಾನರಿನ್ನೂ ಆಫೀಸ್‌ನಿಂದ ಬರಲಿಲ್ಲವೆಂದು ಹೇಳಿದರು. ಸಾಧಾರಣ ಅರ್ಧ ಗಂಟೆಯ ಸಮಯ ಪಿಟ್ಟನು ವೃತ್ತ ಪತ್ರಿಕೆಗಳನ್ನೋದುತ್ತ ಕುಳಿತಿದ್ದನು. ಐದು ಗಂಟೆಯಾಗುವಾಗ ಗಂಟೆಯೊಡೆದ ಶಬ್ದವು ಕಾರಿನ ಶಬ್ದದೊಡನೆ ಲೀನವಾಗಲು ಲೋಬೋನು ಕಾರಿನಿಂದಿಳಿದು ಮನೆಗೆ ಬಂದನು. ಪಿಟ್ಟನಾಗ ನಮಸ್ಕರಿಸಿದನು. ವಿಜ್ಞಾನಿಯು ಖಾಸಗೀ ಕೋಣೆಗೆ ಹೋಗಿ ಡ್ರೆಸ್ ಬದಲಾಯಿಸಿಕೊಂಡು ಸಿಗರೇಟ ಸೇದುತ್ತಾ ಪೋರ್ಟಿಕೊಟಿಗೆ ಬಂದನು. ಸ್ವಲ್ಪ ಸಮಯ ಅವರಿಬ್ಬರು ತಮ್ಮಾಷೆ ಮಾತನಾಡುತ್ತಿದ್ದರು. ಅನಂತರ ಪಿಟ್ಟನು ಲೋಬೋನೊಡನೆ ಅತಿ ರಹಸ್ಯ ವಿಚಾರವನ್ನು ಸ್ವಲ್ಪ ವಿಮರ್ಶಿಸ

ಬೇಕಾಗಿದೆ ಎಂದು ಹೇಳಿದನು. ಆಗ ವಿಜ್ಞಾನಿಯು ಕುರ್ಚಿಯಿಂದೆದ್ದನು. ಅನಂತರವರು ಮಾಳಿಗೆಗೆ ಹೋಗಿ ಪ್ರೈವೇಟ್ ರೂಮಿನ ಕಿಟಕಿ ಬಾಗಿಲುಗಳನ್ನೆಲ್ಲ ಹಾಕಿ ಮೆಲ್ಲನೆ ಈ ರೀತಿ ಪಿಟ್ಟನು ಲೋಬೋನೊಡನೆ ಹೇಳಿದನು. ಡಾ ನಾಗೇಶನು ಇವತ್ತು ಇಪ್ಪತ್ತು ಸಾವಿರ ರೂ. ಯನ್ನು ನ್ಯಾಷನಲ್ ಬೇಂಕ್‌ನಲ್ಲಿ ಠೇವಣಾತಿಯಿಟ್ಟಿರುವನು. ಅಲ್ಲದೆ ಮುಸಲ್ಮಾನ ಸಿರಿವಂತ ತರುಣಿಯೋರ್ವಳು ಬಹಳ ಅಮೂಲ್ಯವಾದ ನಗಗಳನ್ನು ಹತ್ತು ಸಾವಿರಕ್ಕೆ ಬೇಂಕಿನಲ್ಲಿ ಅಡವಿಟ್ಟಿರುವಳು. ಆದ್ದರಿಂದ ಅವುಗಳನ್ನು ನಾವು ಈ ದಿನವೇ ನಮ್ಮ ಸ್ವಾಧೀನ ಮಾಡಿಕೊಳ್ಳುವುದು ಉತ್ತಮವಲ್ಲವೆ ಎಂದನು. ಹೌದು. ಈ ದಿನವೇ ನಾವಾ ಸಂಪತ್ತನ್ನು ಸ್ವಾಧೀನಪಡಿಸಬೇಕು !! ಎಂದು ಲೋಬೋನು ಹೇಳಿದನು. ಪಿಟ್ಟನಾಗ ನಾವು ಯಾವ ಉಪಾಯದಿಂದ ಬೇಂಕಿನೊಳಗೆ ಹೋಗಬೇಕು. ಎಂದು ಕೇಳಿದನು. ಆಗ ವಿಜ್ಞಾನಿಯು ಅವನೊಡನೆ ಕಿವಿಯಲ್ಲೇನೋ ಹೇಳಿ ಚೂರ್ಣ ತುಂಬಿರುವ ಪೊಟ್ಟಣವನ್ನು ಕೊಟ್ಟನು. ಅವನು ಬಹಳ ಕ್ಷೀಣ ಸ್ವರದಲ್ಲಿ ಮಾತನಾಡಿದುದರಿಂದ ಅವನೇನು ಹೇಳಿದನೆಂದು ನಮಗೆ ತಿಳಿಯಲಿಲ್ಲ, ಅನಂತರ ಪಿಟ್ಟನು ಅಲ್ಲಿಂದ ಜೋಸೆಫನನ್ನು ಕಾಣಲು ವಿಶ್ರಾಂತಿಭವನಕ್ಕೆ ಹೋದನು.

ಸಾಯಂಕಾಲ ಸಮಯ. ಆಗ ಪಡುಗಡೆಯ ಬಾಂದಣವು ಚಿತ್ತಾರದಿಂದ ಕಾವಿಯ ಸಾರಣೆಯನ್ನೊಂದಿ, ತಳತಳಿಸುವ ಗೋಡೆಯಂತೆ ಶೋಭಿಸುತಿತ್ತು. ಲೆಕ್ಕಕ್ಕೆ ಸಿಕ್ಕದ ಹಕ್ಕಿಗಳ ಸಾಲು ಗಾಳಿಯಲ್ಲಿ ಈಜಾಡಿ ತೇಲಾಡಿಕೊಂಡು ಹೋಗುತ್ತಿದ್ದವು. ಭಿನ್ನ ಭಿನ್ನಗಳಾದ ನಾದ ಸ್ವರಭೇದ ಜಲ್ಪನ ಪದ್ಧತಿಗಳಲ್ಲಿ ವ್ಯತ್ಯಾಸವಿದ್ದರೂ ಅವುಗಳ ಅಕ್ಷರ ವಾಕ್ಯಗಳ ಸುಳಿವು ನಮಗಾಗದಿದ್ದರೂ ಗೂಡುಗಳಲ್ಲಿ ಹಸಿದೆದ್ದು ಕಾಯುತ್ತಿರುವ ಮರಿಗಳು ವಿಚಾರ ಹಿಂದೆ ಕಂಡ ನಾನಾ ದೃಶ್ಯ ಅನ್ಯೋನ್ಯವಾದ ವಿವಾದ ನಲ್ಮೆಯೋಲ್ಮೆಗಳ ಸೂಚನೆ ಇವುಗಳೇ ಬಹುಶಃ ಅವುಗಳ ಭಾಷಣಸಾರವಾಗಿರಬೇಕು. ಚಂಚಲಸ್ವರೂಪಿಯಾದ ಕಾಲಚಕ್ರದ ಏಕಾಧಿಪತ್ಯದ ಪ್ರಪಂಚದಲ್ಲಿ ಯಾವುದೂ ಸ್ಥಿರವಾಗಿ ಇರಲಾರದು ಎಂಬುದನ್ನು ಸೂಚಿಸಲೋ ಎಂಬಂತೆ ಮೊದಲಿನ ಬಾನದಲ್ಲಿದ್ದ ಕೆಂಬಣ್ಣವೆಲ್ಲ ಮಸುಕಾಗಿ ಕಪ್ಪಾಗಿ ಪಲ್ಲಟಿಸಲಾರಂಭಿಸಿತು ಗಗನದಲ್ಲಿ ಅಸಂಖ್ಯ ನಕ್ಷತ್ರಗಳು ಮಿನುಗುತಿ

ಸ್ತವ್ರ. ಅವ್ರುಗಳೆಲ್ಲ ಒಂದಾಗಿ ಸಂಘಟಿಸಿದರೆ ಕೋಟ್ಯಾನು ಕೋಟಿ ಚಂದ್ರ ಬಿಂಬಗಳಾಗಿ ತೋರುತ್ತಿದ್ದುವೋ ಏನೋ? ಆಗ ಪ್ರಪಂಚವನ್ನೇ ಅಪಾರ ವಾದೊಂದು ಕಬ್ಬಳಿಯು ಮುಸುಕಿದಂತಾಯಿತು ಕತ್ತಲೆಯ ರಾಜ್ಯವೇ ರಾಜ್ಯ. ಆ ಕತ್ತಲೆಯು ವಿಕ್ರರಾದ ಕೃಷ್ಣಹೃದಯದ ಚೋರರ ಹುಲಿ ಚರಕೆಗಳ ಅಬ್ಬರವೇ ಅಬ್ಬರ!! ಇಂತಹ ಸಮಯದಲ್ಲಿ ಪಿಟ್ಟನೂ ಜೋಸೆಫನೂ ವಿಶ್ರಾಂತಿ ಭವನದ ನೆಲ ಮಾಳಿಗೆಯಲ್ಲಿ ಅದೊಂದು ರಹಸ್ಯ ಕೊಠಡಿಯಲ್ಲಿ ವಿದ್ಯುತ್ ದೀಪದ ಬೆಳಕಿನಲ್ಲಿ ಅತೀ ಉದ್ದವಾದ ಬಲವಾದ ಹಗ್ಗ ಒಂದಕ್ಕೆ ಅಲ್ಲಲ್ಲಿ ಕಟ್ಟು ಹಾಕುತ್ತಿದ್ದರು. ಈ ನೀಚ ಶಿಖಾಮಣಿಗಳು ಯಾಕಾಗಿ ಈ ರೀತಿಯಲ್ಲಿ ಹಗ್ಗಕ್ಕೆ ಕಟ್ಟು ಹಾಕುತ್ತಿದ್ದರು? ಓಹೊ! ತಿಳಿಯಿತು! ಏನು!! ಲೋಬೊನ ಅನುಜ್ಞೆಯಂತೆ ನ್ಯೂ ಮೊಡೆಲ್ ಬೇಂಕಿನಿಂದ ಕಳವು ಮಾಡಲಿಕ್ಕಲ್ಲವೆ? ಅಯ್ಯೊ!!! ಈ ಬದ್‌ಮಾಷರ ತಲೆಯು ಸಹಸ ಹೋಳಾಗಿ ಹೋಗುವುದಿಲ್ಲವಲ್ಲಾ ನೆಲ ಮಾಳಿಗೆಗೆ ಇಡೀ ಕಟ್ಟಡವೇ ಕುಸಿದುಬಿದ್ದಾದರೂ ಈ ಪಾಪಿಗಳು ನಾಶವಾಗ ಬಾರದೆ? ಈ ಕಲಿ ಕಾಲದಲ್ಲಿ ಇಂತಹ ನೀಚರಿಗೆ ಅನಿಷ್ಟ ಒದಗೀತೇ? ಎಂದಿಗೂ ಇಲ್ಲ ವಿಧಿಯ ವೈಚಿತ್ರ್ಯವನ್ನೇನೆನ್ನಲಿ! ಇರಲಿ

ರಾತ್ರಿ ಸುಮಾರು ಹತ್ತು ಗಂಟೆಯಾಗಿರಬಹುದು. ಬೀದಿಯ ಬಳಿಯ ಹೆಚ್ಚಿನ ವಿದ್ಯುತ್ ದೀಪಗಳನ್ನು ಮುನ್ಸಿಪಾಲಿಟಿಯವರು ನಂದಿಸಿದ್ದರು. ಅಲ್ಲಲ್ಲಿ ದೂರದಲ್ಲಿ ಕೆಲವು ದೀಪಗಳು ಮಾತ್ರ ಉಜ್ವಲವಾಗಿ ಉರಿಯುತಿದ್ದುವು. ಸಣ್ಣ ಸಣ್ಣ ಗಲ್ಲಿಗಳಲ್ಲಿಯಂತೂ ಒಂದೂ ದೀಪವಿರಲಿಲ್ಲ. ಗಸ್ತಿನ ಪೋಲೀಸರು ರಾಜಬೀದಿಗಳಲ್ಲಿ ಠೀವಿಯಿಂದ ತಿರುಗಾಡುತ್ತಿದ್ದರಲ್ಲದೆ ಸಣ್ಣ ಓಣಿಗಳ ಕಡೆಗೆ ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ ಗೂಗೆಗಳು ಕೆಲವು ಸಲ ಭಯಂಕರವಾಗಿ ಹೂಂಕರಿಸುತ್ತಿರಲು, ಸಣ್ಣ ಮಕ್ಕಳು ಬೆಚ್ಚಿ ಬಿದ್ದು ಅಳುತ್ತಾ ತಾಯಂದಿರ ತೋಳಸೆಡೆಯಲ್ಲಿ ಸೇರುತ್ತಿದ್ದರು. ಆಕಾಶದಲ್ಲಿ ಮೋಡ ಕವಿಯಲಾರಂಭಿಸಿತು. ಮೇಘ ಕವಿದು ಗಗನವು ಕಾಡಿಗೆಯಂತಾಯಿತು. ಬರಬರುತ್ತಾ ಮೋಡಗಳ ಘರ್ಷಣೆಗಳಿಂದಲಾಗಿ ಸಿಡಿಲಿನ ಗುಡು ಗುಡು ಎಂಬ ಶಬ್ದವು ಕೇಳಿಸಲಾರಂಭಿಸಿತು. ಅದರೊಡನೆ ಕೋಲ್ಮಿಂಚು ಅಲ್ಲಲ್ಲಿ ಕಾಣಿಸಿತು. ಬಿರುಗಾಳಿಯ ಅಬ್ಬರದಲ್ಲಿ ಗುಡುಗಿನ ಶಬ್ದ ಕೇಳುತ್ತಿರಲು ಸಿಡಿಲು ಛಟ ಛಟ....ಛಟ್ ಎಂದು

ಬಡಿಯಲು ಜನರೆಲ್ಲ ನಿದ್ರೆಯಲ್ಲಿ ನಡುಗಿದರು. ಮಳೆಯಿನ್ನೂ ಪ್ರಾರಂಭವಾಗಿರಲಿಲ್ಲ. 'ಬಯಲಾಟ'ದಲ್ಲಿ ಒಡ್ಡೋಲಗವಾಗುವುದಕ್ಕಿಂತ ಮುಂಚೆ ಬಡಿಯುತ್ತಿರುವ ಪೀಠಿಕೆಯಂತೆ ವಾಯುಮಂಡಲದಲ್ಲಿ ಮಳೆ ಬರುವುದಕ್ಕಿಂತ ಮುಂಚೆ ಬಡಿತ 'ಪೀಠಿಕೆ'ಯೇ ಇದಾಗಿರಬೇಕು.

(ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿನೋದಕ್ಕಾಗಿ ಬಯಲಾಟವನ್ನು ಮಾಡುತ್ತಾರೆ; ಬಯಲಾಟವೆಂದರೆ ಪುರಾಣದ ಕಥೆಗಳ ವಿಷಯ ಭಾಗವತನು ಪದಹೇಳುವನು ಆಗ ಅರ್ಥಧಾರಿಗಳು ವೇಷಹಾಕಿಕೊಂಡು ಕುಣಿಯುತ್ತ ಅರ್ಥಹೇಳುವರು. ಪೀಠಿಕೆಯೆಂದರೆ ಕಥಾ ಸಂದರ್ಭವು ಬರುವುದಕ್ಕಿಂತ ಮೊದಲು ಗಂಟೆ, ವಾದ್ಯ, ತಾಳಗಳನ್ನು ಸ್ವಲ್ಪ ಸಮಯವೂ ಬಿಡುವಿಲ್ಲದೆ ಬಾರಿಸುವುದು) ಗಸ್ತಿನ ಯಾಮಿಕರೆಲ್ಲ ಮೆಲ್ಲಮೆಲ್ಲನೆ ಮನೆಯನ್ನು ಸೇರಿದರು. ಸಿಡಿಲು ಮಿಂಚುಗಳ ಗಲಾಟೆಯಲ್ಲಿ ಹೊರಗಡೆಯಲ್ಲೇನಾದರೂ ಶಬ್ದವಾದರೂ ಜನರು ಹೊರಗೆ ಹೊರಡದೆ ಅದೇನೋ ಗುಡುಗಿನ ಶಬ್ದವಾಗಿರಬಹುದು, ಎಂದು ಹಾಸಿಗೆಯಲ್ಲಿ ಮುದುಡಿ ಮುಸುಕುಹಾಕಿ ಮಲಗುತಿದ್ದರಷ್ಟಲ್ಲದೆ ಹೊರಗೆ ಇಣಿಕಿ ಸಹ ನೋಡುತ್ತಿರಲಿಲ್ಲ. ಇಂತಹ ಸಮಯವೆಂದರೆ ದಸ್ಯುಗಳಿಗೆ ಅಮೃತ ಘಳಿಗೆಯಲ್ಲವೆ? ಆದ್ದರಿಂದ ತಮ್ಮ ಅತ್ಯಾಚಾರಗಳನ್ನು ಸಾಧಿಸಲವರು ಇದೇ ಸುಮುಹೂರ್ತವೆಂದೆಣಿಸಿ ಪಿಟ್ಟ ಮತ್ತು ಜೊಸೆಫ್ ಈ ಚೋರ ಶಿಖಾಮಣಿಗಳು ಬೇಕಾದ ಸಾಹಿತ್ಯಗಳನ್ನು ತೆಗೆದುಕೊಂಡು ವಿಶ್ರಾಂತಿಭವನದಿಂದ ನ್ಯೂಮೋಡೆಲ್ ಬೇಂಕಿನ ಕಡೆಗೆ ಹೊರಟರು. ಅವರ ಆಗಿನ ಉಡಿಗೆ-ತೊಡಿಗೆಗಳನ್ನು ಏನೆನ್ನಲಿ!! ಪಿಟ್ಟನು ಪಾಯಿಜಾಮ್ ತೊಟ್ಟುಕೊಂಡು ಕಪ್ಪಾದ ನಿಲುವಂಗಿಯನ್ನು ತೊಟ್ಟುಕೊಂಡಿದ್ದನು. ತಲೆಗೆ ಉಣ್ಣೆಯ ಬಟ್ಟೆಯನ್ನು ಸುತ್ತಿಕೊಂಡು ದಪ್ಪವಾದೊಂದು ಕೆಂಪು ವಸ್ತ್ರವನ್ನು ನಿಲುವಂಗಿಯ ಮೇಲೆ ಹೊದೆದುಕೊಂಡಿದ್ದನು ಜೊಸೆಫ್‌ನು ಉಣ್ಣೆಯ ಕೋಟ ಧರಿಸಿ ಬಿಳಿ ಬುಶ್‌ಕೋಟ್‌ನ್ನು ಧರಿಸಿಕೊಂಡು ತಲೆಗೆ ಟೊಪ್ಪಿಯನ್ನಿಟ್ಟುಕೊಂಡಿದ್ದನು ಅವನ ಕೈಯಲ್ಲೊಂದು ಸೆಳೆ ನಾಗರ ಚಿತ್ರವಿತ್ತು. ಅಲ್ಲದೆ ಒಂದು ಚೀಲವೂ ಇದ್ದಿತು. ಇಬ್ಬರೂ ಮುಖಕ್ಕೆ ಚೆನ್ನಾಗಿ ಕಪ್ಪುಬಣ್ಣದ ಪೌಡರನ್ನು ಹಚ್ಚಿದ್ದರು. ಅವರು ಬೇಂಕಿನ ಹತ್ತಿರ ಬಂದು ಕಾವಲುಗಾರರಿಗೆ ಎಚ್ಚರವಿದೆಯೋ ಎಂದು ಪರೀಕ್ಷಿಸಿದರು ಪಿಟ್ಟನು ಗಾಢ ನಿದ್ರೆಯಲ್ಲಿ ಗೊರಕೆ ಹೊಡೆಯುತ್ತಿ

ರಲು ಮತ್ತೊಬ್ಬ ಕಾವಲುಗಾರನು ಚಳಿಯಲ್ಲಿ ಥರಗುಟ್ಟುತ್ತಾ ಕಂಬಳಿಯನ್ನು ಮುಸುಕು ಹಾಕಿಕೊಂಡು ಜಗಲಿಯಲ್ಲಿ ಮಲಗಿದ್ದನು. ಅವನಿಗೆ ಎಚ್ಚರಿಕೆಯಿತ್ತೆಂದು ಪಿಟ್ಟನಿಗೆ ಗೊತ್ತಾಗಲು ಮೆಲ್ಲನವನು ಆ ಕಾವಲುಗಾರನ ಬಳಿಗೆ ಹೋಗಿ ಅವನ ಕಂಬಳಿಯನ್ನು ಹಿಡಿದೆಳೆದನು. ಆಗ ಆ ಕಾವಲುಗಾರನು ಬೆಚ್ಚಿಬೀಳಲವನ ಬಾಯಿಂದ ಶಬ್ದವೇ ಹೊರಡಲಿಲ್ಲ. ಜೋಸೆಫ್‌ನಾಗ ಲೋಬೋನು ಪಿಟ್ಟನೊಡನೆ ಕೊಟ್ಟಿದ್ದ ಅದೊಂದು ತರದ ಚೂರ್ಣದ ಪೊಟ್ಟಣವನ್ನು ಬಿಡಿಸಿ ಅದರಿಂದ ಸ್ವಲ್ಪ ಹುಡಿಯನ್ನು ತೆಗೆದು ಆ ಕಾವಲುಗಾರನ ಕಣ್ಣಿಗೆರಚಲವನು ಸ್ಮೃತಿತಪ್ಪಿ ಬಿದ್ದನು.

ಅನಂತರ ಆ ಕಳ್ಳರೀರ್ವರು ಬೇಂಕಿನ ಹಿಂಭಾಗಕ್ಕೆ ಬಂದರು. ಪಿಟ್ಟನು ಸುತ್ತಲೂ ತನ್ನ ಕಾಕದೃಷ್ಟಿಯನ್ನು ಬೀರಿ ಗಸ್ತಿನವರಾರೂ ತಮ್ಮನ್ನು ನೋಡುತ್ತಿಲ್ಲವೆಂದು ದೃಢಪಡಿಸಿಕೊಂಡು ಅನಂತರ ಬೇಂಕಿಗೆ ಒತ್ತಾಗಿ ಬೆಳೆದಿರುವ ಚಿಬುಕಿನ ಮರದಲ್ಲಿ ಮೇಲೇರಿ ಹೋಗೆಂದು ಜೋಸೆಫ್‌ನಿಗೆ ಸಂಜ್ಞೆ ಮಾಡಿ ತಿಳಿಸಲು ಅವನು ಅಳಿಲಿನಂತೆ ಸರಸರನೆ ಮರವನ್ನೇರಿ ಮೆಲ್ಲನೆ ಮಾಡಿನ ರೀಪೊಂದನ್ನು ಬಲವಾಗಿ ಹಿಡಿದುಕೊಂಡು ಮಾಡಿಗೇರಿದನು. ಜೋಸೆಫ್‌ನು ಪಿಟ್ಟನು ಹೇಳಿದಂತೆ ಮಾಡಿನಲ್ಲಿರುವ ಒಂದೆರಡು ಹಂಚುಗಳನ್ನು ತೆಗೆದು ಉಂಟಾದ ದ್ವಾರದಲ್ಲಿ ಮೊದಲೇ ತಂದಿರುವ ಹಗ್ಗದ ತುದಿಯೊಂದನ್ನು ಪಕಾಸಿಗೆ ಕಟ್ಟಿ ಅನಂತರ ಆ ಹಗ್ಗದ ಸಹಾಯದಿಂದ ಕೆಳಗಿಳಿದನು. ಅವನು ಸುತ್ತಲೂ ಟೋರ್ಚ್ ಲೈಟ್ ಹಾಕಿ ನೋಡಿದನು. ಅನಂತರ ಕಬ್ಬಿಣದ ಬಲವಾದ ಪೆಟ್ಟಿಗೆಯ ಹತ್ತಿರ ಹೋಗಿ ತನ್ನ ಚೀಲದಿಂದ ಒಂದು ದ್ರಾವಕವಿರುವ ಸೀಸೆಯನ್ನು ತೆಗೆದು ಸ್ವಲ್ಪ ದ್ರವವನ್ನು ಪೆಟ್ಟಿಗೆಯ ಮೇಲೆ ಸುರಿಸಿದನು. ಅನಂತರ ಚೂಪಾದ ಆಯುಧದಿಂದ ಚೌಕಾಕಾರವಾಗಿ ಆ ಲೋಹದ ಭದ್ರವಾದ ಪೆಟ್ಟಿಗೆಯಿಂದ ಬಹಳ ಸುಲಭದಲ್ಲಿ ಒಂದು ತುಂಡನ್ನು ತುಂಡರಿಸಿ ತೆಗೆದನು. ಅನಂತರ ಟೋರ್ಚ್ ಲೈಟ್‌ನ ಪ್ರಕಾಶವನ್ನು ಪೆಟ್ಟಿಗೆಯೊಳಗೆ ಬೀಳುವಂತೆ ಮಾಡಿ ಅದೇ ದಿನ ಮುಸಲ್ಮಾನ ಯುವತಿಯು ಅಡವಿಟ್ಟ ನಗಗಳನ್ನೆತ್ತಿಕೊಂಡು ಚೌಕಾಕಾರವಾಗಿ ತೆಗೆದ ತುಂಡಿಗೆ ಅದಾವುದೋ ಬೇರೊಂದು ತರದ ದ್ರಾವಕವನ್ನೊರೆಸಿದನು. ತುಂಡನ್ನು ಪೆಟ್ಟಿಗೆಯಲ್ಲಿ ಮಾಡಿದ ತೂತಿಗೆ ಸರಿಯಾಗಿಟ್ಟು ಕೈಯಲ್ಲಿ ಒರೆಸಿದನು. ಆಗ ಆ ಪೆಟ್ಟಿಗೆಯನ್ನು ತುಂಡರಿಸಿದುದು ಯಾರಿಗೂ ಗೊತ್ತಾಗ

ದಂತಾಯಿತು. ಆ ಮೇಲೆ ಜೋಸೆಫ್‌ನು ಕಪಾಟಿನ ಹತ್ತಿರ ಹೋಗಿ ತನ್ನ ಲ್ಲಿರುವ ಬೀಗದ ಕೈಯ ಗೊಂಚಲಿನಿಂದ ಅದರ ಬೀಗ ತೆಗೆಯಲು ಪ್ರಯ ತ್ನಿಸಿದನು; ಆದರೆ ಬೀಗವನ್ನು ತೆಗೆಯಲಾಗಲಿಲ್ಲ. ಕಡೆಗವನು ಹೇಗಾ ದರೂ ಒಂದು ಬೀಗದ ಕೈಯಿಂದ ಆ ಬೀಗವನ್ನು ತೆಗೆದು ಬಾಗಿಲು ತೆರೆದು ಲೈಟ್‌ನ ಬೆಳಕಿನಲ್ಲಿ ಕಪಾಟಿನಲ್ಲಿದ್ದ ಡಾ|| ನಾಗೇಶನು ತೀವ್ರವಾಗಿ ಈ ದಿನವಿಟ್ಟ ರೂ. ೨೦ ಸಾವಿರದ ನೋಟಿನ ಕಟ್ಟನ್ನಲ್ಲದೆ ಅಲ್ಲಿದ್ದ ಬೇರೆ ಐದುಸಾವಿರ ರೂ. ತೆಗೆದುಕೊಂಡು ಪುನಃ ಕಪಾಟಿನ ಬಾಗಿಲು ಹಾಕಿ ಬೀಗ ಹಾಕಿದನು ಅನಂತರ ಹಣವನ್ನು ಚೀಲದಲ್ಲಿ ಹಾಕಿ ಹಗ್ಗದಿಂದ ಮೇಲೇರಿಹೋದನು. ಮಾಡಿಗೆ ತಲಪಿದ ನಂತರ ಅವನು 'ಚೋರ ಸಾರ್ವ ಭೌಮ' ಎಂದು ಬರೆದ ಕಾರ್ಡನ್ನು ಕೆಳಗೆ ಬಿಸಾಡಿ ಮಾಡಿನ ಪಕಾಸಿಗೆ ಕಟ್ಟಿದ ಹಗ್ಗವನ್ನು ಚೀಲದಲ್ಲಿ ಹಾಕಿ, ಮೊದಲಿದ್ದಂತೆ ಹೆಂಚುಗಳನ್ನಿಟ್ಟು ಚಬುಕಿನ ಮರದ ಸಹಾಯದಿಂದ ಕೆಳಗಿಳಿದು ಬಂದು ಪಿಟ್ಟನನ್ನು ಸೇರಿ ದನು. ಆ ಮೇಲೆ ಕೃತಕಾರ್ಯದಿಂದ ಸಂತೋಷಗೊಂಡ ಆ ದಸ್ಯುಗಳು ಬೇಗ ಬೇಗನೆ ವಿಶ್ರಾಂತಿಭವನದತ್ತ ಸಾಗಿದರು ಆಗ ಸಾಧಾರಣ ರಾತ್ರಿ ಹನ್ನೊಂದೂವರೆ ತಾಸಾಗಿರಬಹುದು

ಪ್ರಾತಃಕಾಲ ಹಕ್ಕಿಗಳ ಚಿಲಿಪಿಲಿ ಶಬ್ದ ಕೋಳಿಗಳ ಕೂಗು ಇವು ಗಳಿಂದಲಾಗಿ ಮತ್ತೊಬ್ಬ ಕಾವಲುಗಾರನಿಗೆ ಎಚ್ಚರವಾಯಿತು. ಜೊತೆಯ ಕಾವಲುಗಾರನಿನ್ನೂ ನಿದ್ರಿಸಿರುವನೆಂದು ತಿಳಿದು ಅವನು ಅವನನ್ನು ಅಲು ಗಾಡಿಸಿದನು. ಜೋಸೆಫ್‌ನು ಅದಾವುದೋ ಒಂದು ತರದ ಪುಡಿಯನ್ನು ಕಣ್ಣಿಗೆರಚಿದಾಗ ಅವನು ಬವಳಿಬಂದು ಬಿದ್ದಿದ್ದನಷ್ಟೆ! ಪ್ರಾತಃಕಾಲದ ತಂಗಾಳಿಯಿಂದಲಾಗಿ ಅವನಿಗೆ ಪ್ರಜ್ಞೆ ಬರಲಾರಂಭಿಸಲು ಅದೇ ಸಮಯದಲ್ಲಿ 'ಕಾಕತಾಲೀಯ'ನ್ಯಾಯದಂತೆ ಮೊದಲಿನ ಕಾವಲುಗಾರನು ಅವನನ್ನು ಹಿಡಿದಾಡಿಸಿದುದಾಯಿತು. ಚೆನ್ನಾಗಿ ಸ್ಮೃತಿಯುಂಟಾಗಲವನಿಗೆ ಕಳ್ಳರು ಬಂದ ವಿಷಯ ನೆನಪಿಗೆ ಬರಲು 'ಕಳ್ಳರು ಬಂದಿರುವರು' ಎಂದು ಹೇಳಿ ದರೆ ಮೇನೇಜರ್ ಗದ್ದರಿಸಬಹುದೆಂದು ಬೆದರಿ ಏನೂ ಹೇಳದೆ ನಿತ್ಯದಂತೆ ಸಂಗಡಿಗನೊಡನೆ ಕಾಫಿ ಹೋಟೆಲ್‌ಗೆ ಹೋಗಿ ಸ್ವಲ್ಪ ಸಮಯದಲ್ಲಿಯೇ ಮರಳಿ ಬಂದ ಅವರು ತಮ್ಮ ತಮ್ಮ ಮನೆಗೆ ಹೋದರು. ಸಾಧಾರಣ ಹತ್ತುಗಂಟೆ ಸಮಯವಾಗಲು ನಾರಾಯಣರಾಯನು ಬೇಂಕ್‌ಗೆ ಬಂದು

ಬಾಗಿಲು ತೆರೆದನು. ಆಗ ಒಬ್ಬ ಸೇವಕನು ಒಂದು ಕೋಣೆಗಳನ್ನೆಲ್ಲ ಗುಡಿಸಿ ಶುಚಿಪಡಿಸುತ್ತಿರಲು ಮೇನೇಜರನು ಎಂದಿನಂತೆ ಬೇಂಕಿನ ಲೆಕ್ಕ ಪತ್ರಗಳನ್ನವಲೋಕಿಸುತಿದ್ದನು. ಆಗ ಗುಡಿಸುತ್ತಿರುವ ಸೇವಕನು ಅಲ್ಲಿಯೇ ಬಿದ್ದಿರುವ ಒಂದು ದಪ್ಪವಾದ ಕಾಗದದ ತುಂಡನ್ನು ತಂದು ಮೇಜಿನ ಮೇಲಿಟ್ಟನು. ನಾರಾಯಣರಾಯನಾ ಕಾರ್ಡನ್ನು ನೋಡಲು ದಪ್ಪ ದಪ್ಪ ಅಕ್ಷರಗಳಲ್ಲಿ "ಚೋರ ಸಾರ್ವಭೌಮ"ನೆಂದು ಬರೆದುಕೊಂಡಿರುವುದನ್ನು ಕಂಡು ಅಚ್ಚರಿಗೊಂಡನು ಚೋರ ಸಾರ್ವಭೌಮನ ವಿಷಯ ಅವನು ಯಶವಂತನಿಂದ ಕೇಳಿ ತಿಳಿದುಕೊಂಡಿದ್ದುದರಿಂದ ಆ ಚೋರನ ಹೆಸರು ಕಂಡೊಡನೆ ಆ ನೀಚನು ರಾತ್ರಿ ಇಲ್ಲಿಗೆ ಬಂದು ಏನೆಲ್ಲ ಕಳವುಮಾಡಿ ಉಪಟಳಕೊಟ್ಟಿರುವನೋ ಎಂದವನು ಚಿಂತೆಗೊಳಗಾದನು. ಸ್ವಲ್ಪ ಸಮಯದಲ್ಲವನು ಕಾರಣಾಂತರದಿಂದ ಕಪಾಟಿನ ಬಾಗಿಲು ತೆರೆಯಲು ಮುಂಚಿನ ದಿನ ಅದರಲ್ಲಿ ಭದ್ರವಾಗಿಟ್ಟಿದ್ದ ೩೫ ಸಾವಿರ ರೂಪಾಯಿಯ ನೋಟಿನ ಕಟ್ಟೇ ಮಾಯವಾಗಿದ್ದುದನ್ನು ಕಂಡನು ಅನಂತರವನು ಪೆಟ್ಟಿಗಯ ಕಡೆಗೆ ನೋಡಲು ಅದರ ಬೀಗದ ಮೇಲಿನ ಸೀಲ್ ಮೊದಲಿನಂತಿತ್ತು. ಅವನು ಪೆಟ್ಟಿಗೆಯ ಬಾಗಿಲನ್ನು ತೆರೆದು ನೋಡಲು ಹಾ! ಅವನ ಆಗಿನ ದುರವಸ್ಥೆಯನ್ನೇನೆನ್ನಲಿ? ನಿನ್ನೆಯ ದಿನ ಯವನ ಯುವತಿಯು ಬೆಲೆಬಾಳುವ ಒತ್ತಿಯಿಟ್ಟ ನಗಗಳು ಅಲ್ಲಿರಲಿಲ್ಲ ಆಗವನು ಈ ಸಂಗತಿಯನ್ನು ಕೂಡಲೇ ಫೋನ್‌ನಲ್ಲಿ ಯಶವಂತಸಿಂಹನಿಗೆ ತಿಳಿಸಿದಳು. ಅರ್ಧ ಗಂಟೆಯಲ್ಲಿ ಪತ್ತೆದಾರಿ ಕರಮಚಂದನು ನ್ಯೂಮೋಡೆಲ್ ಬೇಂಕಿಗೆ ಬಂದನು. ಮೇನೇಜರನು ಕಳ್ಳರು ಯಾವ ರೀತಿಯಲ್ಲಿ ಬಂದರೆಂದು ಗೊತ್ತಾಗುವುದಿಲ್ಲವೆಂದೂ ಪೆಟ್ಟಿಗೆಯ ಬೀಗ ತೆಗೆಯದೆ ಆಭರಣಗಳನ್ನು ದಸ್ಯುಗಳು ಅಪಹರಿಸಿರುವರಲ್ಲದೆ ಹಣ ಮಾಯವಾದ ಸಂಗತಿಯನ್ನೂ ಅವನೊಡನೆ ವಿವರಿಸಿ ಹೇಳಿದನು

ನಾರಾಯಣರಾಯನು ಹೇಳಿದುದನ್ನೆಲ್ಲಾ ಕರಮಚಂದನು ಚೆನ್ನಾಗಿ ಕೇಳಿ ತದನಂತರ ಕಾವಲುಗಾರರನ್ನೊಮ್ಮೆ ಕಾಣಬೇಕಾಗಿದೆಯೆಂದನು ಮೇನೇಜರನು ಸೇವಕನನ್ನು ಕಾವಲುಗಾರರನ್ನು ಬರಹೇಳಲು ಕಳುಹಿದನು; ಸ್ವಲ್ಪ ಸಮಯದಲ್ಲಿ ಕಾವಲುಗಾರರಿಬ್ಬರೂ ಬೇಂಕಿಗೆ ಬಂದರು. ಪತ್ತೆದಾರಿಯು ಅವರೊಡನೆ ನಿನ್ನೆ ರಾತ್ರಿ ಇಲ್ಲಿಗೆ ಕಳ್ಳರಾದಾದರೂ ಬಂದಿದ್ದರೆ?

ಎಂದು ಕೇಳಲು ಅವರಿಬ್ಬರೂ 'ಇಲ್ಲ'ವೆಂದರು; ಆದರೆ ಎರಡನೆಯ ಕಾವಲು ಗಾರನ ಮಾತನ್ನು ಕೇಳಿದಾಗ ಕರಮುಚಂದನಿಗೇನೋ ಸಂಶಯ ಉಂಟಾ ಗಿರಬೇಕು. ಅವನಾ ಕಾವಲುಗಾರನನ್ನು ಚೆನ್ನಾಗಿ ಗದ್ದರಿಸಲು ಅವನು ಸಾಧಾರಣ ಹತ್ತು ಗಂಟೆಗೆರಡು ವ್ಯಕ್ತಿಗಳು ಇಲ್ಲಿಗೆ ಬಂದಿದ್ದರು ನನ ಗಾಗ ಎಚ್ಚರಿಕೆಯಿತ್ತು. ನಾನು ಬೊಬ್ಬೆಹೊಡೆಯಲು ಪ್ರಯತ್ನಿಸಲು ಒಬ್ಬನು ಏನೋ ಪುಡಿಯನ್ನು ನನ್ನ ಕಣ್ಣಿಗೆರಚಿದನು ಆಗ ನಾನು ಬವಳಿ ಗೊಂಡು ಬಿದ್ದೆನು. ಅನಂತರದರ ವಿಷಯ ನನಗೆ ಗೊತ್ತಿಲ್ಲವೆಂದನು. ಕರಮುಚಂದನು ಅವನನ್ನು ಕಳುಹಿಸಿ ಬೇಂಕಿನೊಳಗಡೆಗೆ ಹೋಗಿ ಸುತ್ತಲೂ ನೋಡಿದನು; ಆದರೆ ಪತ್ತೆದಾರನಿಗೆ ಚೋರರು ಬಂದ ದಾರಿ ಯಾವುದೆಂದರಿಯದಿರಲವನು ಬೇಂಕಿನ ಹಿಂಭಾಗಕ್ಕೆ ಬಂದನು ಅಲ್ಲಿ ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸುತ್ತಿದ್ದಾಗ ಅವನಿಗೆ ಕೆಲವು ಹೆಜ್ಜೆಗಳು ಕಾಣಿಸಿದುವು; ಮತ್ತು ಚಬುಕಿನ ಮರದಡಿಯಲ್ಲಿ ವಿಶೇಷವಾಗಿ ಹೆಜ್ಜೆಗಳ ನೇಕ ಮೂಡಿರುವುದನ್ನು ಕಂಡು ಕರಮುಚಂದನು ಟೇಪಿನಿಂದಾ ಕಾಲಿನ ಗುರತುಗಳನ್ನು ಅಳೆದು ನೋಡಲು ಅಲ್ಲಿಬ್ಬರ ಕಾಲಿನ ಗುರತುಗಳು ಮೂಡಿ ರುವವೆಂದವನ ಅಳತೆಯಿಂದ ತಿಳಿಯಿತು. ಅವನಾ ಹೆಜ್ಜೆಗಳ ಉದ್ದಳತೆ ಗಳನ್ನು ತನ್ನ ಡೈರಿಯಲ್ಲಿ ಬರೆದುಕೊಂಡನು ಆಗವನು ಚೋರರು ಈ ಚಬುಕಿನ ಮರವನ್ನೇರಿ ಮಾಡಿಗೆ ಹೋಗಿ ಅಲ್ಲಿಂದ ಒಂದೆರಡು ಹಂಚು ತೆಗೆದು ಹೇಗೋ ಕೆಳಗಿಳಿದಿರಬೇಕೆಂದು ತರ್ಕಿಸಿದನು ಒಂದೆರಡು ಹಂಚು ಗಳು ಉಳಿದ ಮಾಡಿನಲ್ಲಿದ್ದ ಹಂಚುಗಳಿಂದ ಸ್ವಲ್ಪ ಎತ್ತರವಿದ್ದುದವನಿಗೆ ಕಾಣಲು ಅವನ ಊಹೆಯು ನಿಜವಾಯಿತು. ಅನಂತರ ಮೇನೇಜರ್ ನೊಡನೆ ಬೇಂಕಿನೊಳಗವನು ಬರಲು ಡೈರೆಕ್ಟರನು ಆಗ ತಾನೆ ಅಲ್ಲಿಗೆ ಬಂದು ನಿಂತುಕೊಂಡಿದ್ದನು

ಡೈರೆಕ್ಟರ್, ಪತ್ತೆದಾರಿ ಮತ್ತು ಮೇನೇಜರ್ ಈ ಮೂವರೂ ಬೇಂಕಿನ ಕಾರ್ಯಾಲಯದೊಳಗೆ ಪ್ರವೇಶಿಸಿ ಮೌನವಾಗಿ ಸುತ್ತಲೂ ನೋಡುತ್ತಿರಲು ಪತ್ತೇದಾರಿಯು ಮೌನವನ್ನು ಬಿಟ್ಟು ಮಾತನಾಡಲು ಪಕ್ರಮಿಸಿದನು ಕಳ್ಳರು ತಮ್ಮಲ್ಲಿರುವ ಬೀಗದ ಕೈಯಿಂದ ಡ್ರಾವರಿನ ಬೀಗ ತೆಗೆದು ಹಣವನ್ನಪಹರಿಸಿರಬಹುದೆಂದನು ಆಗ ಡೈರೆಕ್ಟರನು ಪೆಟ್ಟಿಗೆಯ ಬೀಗ ಹಾಳಾಗದೆ ಇರಲು ಆ ದುಷ್ಟರು ಪೆಟ್ಟಿಗೆಯೊಳಗಿನಿಂದ

ನಗಗಳನ್ನೆಂತು ತೆಗೆದರು ? ಅವರೇನು ಜಾದುವಿದ್ಯೆಯಿಂದ ಒಡವೆಗಳನ್ನ ಪಹರಿಸಿದರೆ ? ಎಂದು ಕೇಳಿದನು. ಆಗ ಪತ್ತೇದಾರಿಯು ಅದೇ ಈಗ ಒಡೆಯಲಾರದ ಒಗಟಾಗಿದೆಯೆಂದು ಹೇಳಿದನು. ಆದರೆ ಸುಮ್ಮನೆ ಚಿಂತಿಸುತ್ತಾ ಸಮಯವನ್ನು ಕಳೆಯುತ್ತಿರುವ ಪತ್ತೇದಾರಿಯು ಅವನಾಗಿ ಲಿಲ್ಲ. ಕರಮುಚಂದನು ಪೆಟ್ಟಿಗೆಯ ಹತ್ತಿರ ಹೋಗಿ ಚೆನ್ನಾಗಿ ಪರೀಕ್ಷಿಸಿ ನೋಡಿದನು. ಆದರೆ ಆ ಸೀಲು ಸ್ವಲ್ಪ ಸಹ ಹಾಳಾಗಿರಲಿಲ್ಲವೆಂದವನಿಗೆ ತಿಳಿಯಿತು. ಆಗ ಕರಮುಚಂದನು ಮೇನೇಜರ್ ನಾರಾಯಣರಾವ್ ನೊಡನೆ ನಿಮ್ಮ ಸೀಲನ್ನು ನೀವು ನಿನ್ನೆ ಎಲ್ಲಿಟ್ಟಿರುವಿರಿ ! ! ಎಂದು ಕೇಳಲು ಅವನು ನಾನು ಎಂದಿನಂತೆ ನನ್ನ ಕೋಟಿನ ಕಿಸೆಯಲ್ಲಿಟ್ಟಿರುವೆನೆಂದು ಹೇಳಿ ಕೋಟಿನ ಕಿಸೆಯಿಂದ ಸೀಲನ್ನು ತೆಗೆದು ತೋರಿಸಿದನು. ಕರಮು ಚಂದನಿಗಾಗ ಈ ರೀತಿ ಹೊಳೆಯಿತು. ಏನೆಂದರೆ ನಾರಾಯಣರಾಯನು ಮನೆಗೆ ಹೋಗಿ ಕೋಟ್ ತೆಗೆದಿಟ್ಟ ನಂತರ ಚತುರ ಚೋರಕೋವಿದನೊ ರ್ವನು ಆ ಸೀಲನ್ನು ಯಾರಿಗೂ ಗೋಚರಿಸದಂತೆ ಅಪಹರಿಸಿ ಇಲ್ಲಿಗೆ ಬಂದು ಪೆಟ್ಟಿಗೆಯ ಬೀಗ ತೆಗೆದು ನಗಗಳನ್ನು ತೆಗೆದ ನಂತರ ಪುನಃ ಮೊದಲಿನಂತೆ ಪೆಟ್ಟಿಗೆಯ ಬಾಗಿಲು ಹಾಕಿ ಬೀಗವನ್ನೊತ್ತಿ ಅದರ ಮೇಲೆ ಸೀಲ್ ಮಾಡಿ ಪುನಃ ನಾರಾಯಣನ ಆ ಸೀಲನ್ನು ಮನೆಗೆ ಹೋಗಿ ಅವನ ಕೋಟಿನಲ್ಲಿಟ್ಟಿರಬೇಕು. ಆದರೆ ಈ ರೀತಿಯಲ್ಲಿ ಸೀಲನ್ನು ಅಪಹರಿಸ ಬೇಕಾದರೆ ಆ ಚೋರನು ಮೇನೇಜರನ ಸೇವಕನಲ್ಲೊಬ್ಬನಾಗಿರಬೇಕ ಲ್ಲವೆ........ ? ? ಎಂದೂಹಿಸುತ್ತಾ ಅನಂತರ ನಾರಾಯಣರಾಯನೊಡನೆ ನಿಮ್ಮ ಸೇವಕರಲ್ಲಿ ವಿಶ್ವಾಸಕ್ಕೆ ಅಯೋಗ್ಯರಾದವರಾರು ?- ಎಂದು ಪ್ರಶ್ನಿಸಿ ದನು. ಮೇನೇಜರ್ ತನ್ನ ಮನೆಯಲ್ಲಿಬ್ಬರು ಸೇವಕರಿರುವರೆಂದೂ ಅವರು ಬಹಳ ಪ್ರಾಮಾಣಿಕರೆಂದೂ ಹೇಳಿ ಅವರ ಮೇಲೆ ನನಗೆಂದಿಗೂ ಅವಿಶ್ವಾಸ ವಿಲ್ಲವೆಂದು ಎದೆ ತಟ್ಟಿ ಹೇಳಿದನು. ಕರಮುಚಂದನು ಅನಂತರ ಪೆಟ್ಟಿ ಗೆಯ ಹತ್ತಿರ ಹೋಗಿ ಅದನ್ನು ಜಗ್ಗಿದನಾದರೂ ಅದರೊಳಗೆ ಸಾಮಾನು ಗಳೇನೂ ಇರದಿದ್ದರೂ ಅದು ಬಹಳ ಭಾರವಾಗಿಯೇ ಇತ್ತು. ಅವನಾ ಪೆಟ್ಟಿಗೆಯನ್ನೆತ್ತಿ ಫಕ್ಕನೆ ಕೆಳಗಿಡಲು ಚೌಕಾಕಾರದ ತುಂಡೊಂದು ಪೆಟ್ಟಿ ಗೆಯ ಮೇಲ್ಭಾಗದಿಂದ ಕೆಳಗೆ ಬಿದ್ದಿತು. ಅದನ್ನು ಕಂಡು ಕರಮುಚಂದನು ಆಶ್ಚರ್ಯಪಟ್ಟು ಚೋರರು ಯುಕ್ತಿಯಿಂದ ಪೆಟ್ಟಿಗೆಯ ಬಾಗಿಲನ್ನು

ಕೊರೆದು ಆಭರಣಗಳನ್ನು ತೆಗೆದು ಯಾರಿಗೂ ತಿಳಿಯದರೀತಿಯಲಿ ಆ ತುಂಡನ್ನಿರಿಸಿದ್ದಾರೆಂದು ತಿಳಿದು ಆ ಲೋಹದ ತುಂಡನ್ನು ಕೈಯಲ್ಲಿ ಹಿಡಿದು ನೋಡಲು ಏನೋದ್ರವವು ಅದಕ್ಕೆ ಒರಸಿರುವದನ್ನು ಕಂಡನು. ಕಳ್ಳರು ದ್ರವವನ್ನೊರಸಿ ಪುನಃ ಆ ತುಂಡನ್ನಲ್ಲಿ ಜೋಡಿಸಿರುವರೆಂದು ತರ್ಕಿಸಿದನು. ಮತ್ತು ತನಗೆ ಗೋಚರಿಸಿದ ಸಂಗತಿಗಳನ್ನು ಮೇನೇಜರ್ ಮತ್ತು ಡೈರೆಕ್ಟರ್‌ಗೆ ತಿಳಿಯಪಡಿಸಿದನು. ಅನಂತರ ಕರಮುಚಂದನ ಚುರುಕು ಬುದ್ಧಿಯು ಮನೋವೇಗದಲ್ಲಿ ಮುಂದುವರಿಯುತ್ತಿರಲು ಅವನೀ ರೀತಿ ತರ್ಕಿಸಿದನು. ಈ ಬೇಂಕಿಗೆ ದೇವಣಾಯಿಡಲು ಅಥವಾ ಒತ್ತೆಯಿಡಲು ಬಂದವರೊಡನೆ ಮೇನೇಜರ್ ಮಾತನಾಡುತಿದ್ದುದನ್ನು ಟೆಲಿಫೋನ್ ವಾ ಇನ್ನಿತರ ವಿಜ್ಞಾನದ ಪ್ರಭಾವದಿಂದ ಕಂಡು ಹಿಡಿದ ಹೊಸ ನಮೂನೆಯ ಉಪಕರಣವೊಂದು ಇಲ್ಲೆಲ್ಲಿಯೋ ಇರಲೇಬೇಕು ಆದರೆ ಆ ಉಪಕರಣವಾವುದು........? ? ? ಟೆಲಿಫೋನ್ ಇರುವುದಾದರೆ ಅದರ ಟ್ರೇನ್ಮಿಟರ್ ಅಂದರೆ ಪ್ರೇಷಕವೆಲ್ಲಿರುವುದು? ಸಾಧಾರಣವಾದ ಫೋನ್ ಇಲ್ಲೆಲ್ಲಿಯಾದರೂ ಗುಪ್ತವಾಗಿದ್ದರೂ ಅದರಲ್ಲಿ ಕಾರ್ಯಾಲಯದಲ್ಲಿ ಮಾತನಾಡಿದ ವಿಷಯಗಳು ಬೇರೆಲ್ಲಿಗಾದರೂ ಕೇಳಿಸಲಸಾಧ್ಯ ಯಾಕೆಂದರೆ ಪ್ರೇಷಕದದ ಹತ್ತಿರ ಹೋಗಿ ಅದರಲ್ಲಿ ಮಾತನಾಡಿದರೆ ಕೇಳಿಸೀತಲ್ಲವೆ ಬೇರೆ ಕಡೆಯಲ್ಲಿ ಮಾತನಾಡಿದರೆ ಕೇಳಿಸಲಿಕ್ಕಿಲ್ಲವಷ್ಟೆ ! ಆದರೆ ಅತಿ ಪ್ರಬಲವಾದೊಂದು ಟೆಲಿಫೋನ್‌ನ ಪ್ರೇಷಕವನ್ನು ಈ ಬೆಂಕಿನೊಳಗೆಲ್ಲಿಯಾದರೂ ರಹಸ್ಯವಾಗಿಟ್ಟಿದ್ದರೆ ಇಲ್ಲಿಎಲ್ಲಿ ಮಾತನಾಡಿದರೂ ಆ ದಸ್ಯುಗಳಿಗೆ ರೀಸೀವರ್ ವಾ ಗ್ರಾಹಕದಲ್ಲಿ ಕೇಳಿಸಬಹುದಾಗಿದೆ. ಬಹಳ ಬಲಿಷ್ಠವಾದ ಟೆಲಿಫೋನ್‌ನ ಪ್ರೇಷಕವು ಇಲ್ಲಿದ್ದರೆ ಎಲ್ಲಿರಬಹುದು? ಎಂದು ಪತ್ತೆದಾರಿಯು ಬೆಂಕಿಸುತ್ತಾಮ್ಮೆಯೆಲ್ಲ ಕಣ್ಣುಗಿರುವನು ತಿಜುತ್ತಲೂ ನೋಡಿದರೂ ಏನೂ ತೋಚಲಿಲ್ಲ. ಅಲ್ಲಿಯೇ ಗೋಡೆಯಲ್ಲಿ ಪ್ರಸಿದ್ಧ ವೈಜ್ಞಾನಿಕ ಮತ್ತು ಎಲೆಕ್ಟ್ರಿಕಲ್ ಇಂಜಿನೀಯರ್ ಆದ ಬೋಬೋನಿಂದ ತಯಾರಿಸಲ್ಪಟ್ಟ ನರ್ತನ ಬೊಂಬೆಯು ಎಂದಿನಂತಿತ್ತು. ಕರಮುಚಂದನದಕ್ಕೆ ಸ್ವಿಚ್ ಹಾಕಲು ಅದು ನರ್ತಿಸಿತು. ಪುನಃ ಅವನು ಸ್ವಿಚ್‌ನ್ನು ತೆಗೆಯಲಾ ಬೊಂಬೆಯು ನರ್ತಿಸುವುದನ್ನು ನಿಲ್ಲಿಸಿತು. ಅವನಿಗಾ ಬೊಂಬೆಯಲ್ಲಿ ವಿಶೇಷವೇನೂ ಕಂಡು ಬಾರದ್ದರಿಂದ ಅಲ್ಲಿಂದ ಬೇರೆ ಕಡೆಗೆ ಹೋದನು. ಅನಂತರವನು ಡೈರೆಕ್ಟರನಿಗೆ ಕಳ

ರನ್ನು ಬೇಗನೆ ಹಿಡಿದು ಕೊಡುವೆನೆಂದು ಭರವಸೆ ಇತ್ತು ತನ್ನ ಮನೆಗೆ ಹೋದನು.

# ಹಾ ! ಮೋಸವಾಯಿತು.

ಈ ಪ್ರಕರಣದಲ್ಲಿ ನ್ಯೂಮೊಡೆಲ್ ಜೇಕಿನಿಂದ ಕಳವಾದ ಮರುದಿನ ರಾತ್ರಿ ನಡೆದ ಘಟನೆಯನ್ನು ವಾಚಕರ ಮುಂದಿಡಲು ಪ್ರಯತ್ನಿಸುತ್ತಿದ್ದೇನೆ ಸಾಯಂಕಾಲ ಆರು ಗಂಟೆಯ ಸಮಯ. ಪ್ರಭಾಕರನು ವಿಶ್ರಾಂತಿಗಾಗಿ ಪಡುಗಡಲನ್ನೊಂದುತ್ತಿರಲು ರಜನಿಯು ತನ್ನ ನಿರಂಕುಶ ಪ್ರಭುತ್ವದ ಪ್ರಭಾವವನ್ನು ಪಸರಿಲಾರಂಭಿಸಿತ್ತಿದ್ದ ಸಮಯವದು ಮೈದಾನಿಗೆ ಆಡಲು ಬಂದ ಸಣ್ಣಮಕ್ಕಳು ಚಿಟ್ಟನೆ ಜಿಂಗನೆ ಜಿಗಿಯುತ್ತ ಪಟಪಟನೆ ಹಾರುತ್ತ ಸ್ನೇಹಿತರೊಡನೆ ಮನೆಗೆ ಹೋಗುತ್ತಿರಲು ನವಂದು ಪತಿಗಳು ವಿಹಾರಾರ್ಥವಾಗಿ ಹೊಸ ಹೊಸ ವಸ್ತ್ರಾಲಂಕಾರಗಳಿಂದ ಶೃಂಗರಿಸಿ ಕೊಂಡು ಮೆಲ್ಲ ಮೆಲ್ಲನೆ ಸರಸವಾಡುತ್ತಾ ಬರುತ್ತಿದ್ದರು ನಾಗರಿಕರು ತರುಣರಿನ್ನೂ ರೇಡಿಯೋ ಕೇಳಲು ಬರುತ್ತಲೇ ಇದ್ದರು ಚಂದ ಚಂದದ ಮೋಟಾರು ವಾಹನಗಳು ಅಲ್ಲಲ್ಲಿ ಸಾಲು ಸಾಲುಗಳಾಗಿ ನಿಂತುಕೊಂಡಿದ್ದರೆ ಸೈಕಲ್ ಸವಾರರು ಮೈದಾನಿನಲ್ಲಿ ಸುತ್ತಲೂ ತಿರುಗಾಡುತ್ತಿದ್ದರು. ಅಷ್ಟರಲ್ಲಿ ಮೋಟಾರು ಸೈಕಲ್‌ಗಳಲ್ಲಿಯೂ ಜಟ್ಕಾ ಗಾಡಿಗಳಲ್ಲಿಯೂ ನಗರವಾಸಿಗಳು ಬಂದು ತಮ್ಮ ತಮ್ಮ ನಚ್ಚಿನ ಗೆಳೆಯರೊಡನೆ ರಾಜಕೀಯ ಸಾಮಾಜಿಕ ವಿಷಯಗಳನ್ನು ಚರ್ಚಿಸುತ್ತಿದ್ದರು. ಕೆಲವು ಸಣ್ಣ ಪುಟ್ಟ ಮಕ್ಕಳು ಗೆಳೆಯರಿಂದ ಬೇರ್ಪಟ್ಟು ಕಳವಳದಿಂದ ದಾರಿ ಕಾಣದೆ ಕಂಗೆಟ್ಟು ಆಚೀಚೆ ಓಡುತ್ತಿರಲು ಕೆಲವರು ಫಕ್ಕನೆ ಬೀಳುತಿದ್ದರು ವಿದ್ಯುತ್ ಪ್ರಕಾಶವು ಹಾಲಿನಂತೆ ಸುತ್ತುಮುತ್ತಲೂ ಪಸರಿಸಿದ್ದು ಮನಸ್ಸಿಗೆ ಉಲ್ಲಾಸವನ್ನುಂಟು ಮಾಡುತಿತ್ತು.

ಕಾರ್ಖಾನೆಯ ಕಾರ್ಮಿಕರು ಹಗಲಿನಲ್ಲಿ ಕೆಲಸ ಮಾಡಿ ಬಳಲಿ ವಿಶ್ರಾಂತಿಗಾಗಿ ವಿನೋದಕ್ಕಾಗಿ ಮೈದಾನಿಗೆ ಬಂದಿದ್ದರೆ ಕೂಲಿಗಾರರು ಮೈಮುರಿದು ಕೆಲಸ ಮಾಡಿದ ಆಯಾಸವನ್ನು ಸಂಗೀತ ಮೊದಲಾದ ರಮ್ಯ ವಿನೋದಾವಳಿಗಳಿಂದಲಾಗಿ ನೀಗಿ ಸಂತಸಪಡಲು ಬಂದಿದ್ದರು. ಇನ್ನು

ವಿದ್ಯಾರ್ಥಿಗಳು ಶಾಲೆಯಲ್ಲಿ ಏಕಾಗ್ರತೆಯಿಂದ ಪಾಠವನ್ನು ಕೇಳಿ ಓದಿ ಕಲೆ ಬಿಸಿಯಾದುದರಿಂದ ಸ್ವಲ್ಪ ಸಮಯ ಹುರುಪಿನಿಂದ ಕಾಲ ಕಳೆದು ಪುನಃ ಹೆಚ್ಚಿನ ಉತ್ಸಾಹ ಪಡೆದು ಕೆಲಸ ಮಾಡಲಿಕ್ಕಾಗಿ ಆಗಮಿಸಿದ್ದರು. ಗತಾನುಗತಿಕೋ ಲೋಕಃ ಎಂಬಂತೆ ಅನೇಕ ಜನರು ವೈದಾಸಿಗೆ ಬರುತ್ತಿರಲು ಇನ್ನು ಕೆಲವರು ಅವರೊಡನೆ ಜನ ಮರುಳೋ ಜಾತ್ರೆ ಮರುಳೋ! ಎಂಬಂತೆ ಗದ್ದಲ ನೋಡಲು ಬಂದಿದ್ದರು. ನೀಚರಾದ, ಅವರಲ್ಲಿಯೂ ಅಮಾವಾಸ್ಯೆಯ ಕತ್ತಲೆಯಂತಹ ಕಪ್ಪಗಾದ ಕಠೋರ ಹೃದಯದವರು ಕಳ್ಳತನ ಮಾಡಲು ಬಂದಿದ್ದರೆ. ಪೋಲೀಸರು ದುಷ್ಟರಿಂದ ಸಾಧುಗಳಿಗಾಗುವ ವಿಪತ್ತುಗಳನ್ನು ಪರಿಹರಿಸಲು ಬಂದಿದ್ದರು ವೈದಾಸಿನ ಒಂದು ತುದಿಯಲ್ಲಿ ಜನರು ಸಂತೋಷದಿಂದ ಕೂಡಿದ್ದರೆ ಮಗದೊಂದೆಡೆಯಲ್ಲಿ ತಮ್ಮಲ್ಲಿರುವ ಸೊತ್ತನ್ನು ಚೋರರು ಅಪಹರಿಸಿದರೆಂಬ ಕೂಗು ಕೇಳುತಿತ್ತು. ವೇಶ್ಯಾವೃತ್ತಿಯ ತರುಣಿಯರು ಸುಂದರವಾಗಿ ತಮ್ಮ ಶರೀರಗಳನ್ನಲಂಕರಿಸಿಕೊಂಡು ಒಯ್ಯಾರದ ನಡಿಗೆಯಿಂದ ಬಂದು ಓರೆಗಣ್ಣಿನ ನೋಟದಿಂದ ದುರ್ಬಲ ಹೃದಯಿಗಳಾದ ನವ ಯುವಕರ ಮನಸ್ಸನ್ನಾಕರ್ಷಿಸುತ್ತಿದ್ದರು. ಒಂದು ಕಡೆಯಲ್ಲಿ ಅಯ್ಯೋ ನನ್ನ ಸರ್ವನಾಶವಾಯಿತೆಂದೊಬ್ಬನು ಮರುಗಲು ಮತ್ತೊಂದೆಡೆಯಲ್ಲಿ ಕೆಲವರು ಕಲೆತು ಸುಖದಿಂದ ಮಾತನಾಡಿ ಕಾಲ ಕಳೆಯುತ್ತಿದ್ದರು ಪ್ರಪಂಚದ ಧರ್ಮವೇ ಹಾಗೆಂದು ಕಾಣುತ್ತದೆಯಲ್ಲವೆ! ವಿಶ್ವದಲ್ಲೊಂದು ಕಡೆಯಲ್ಲಿ ಸುಖಸಂಪತ ಆರೋಗ್ಯಗಳು ಧಾರಾಳವಿದ್ದರೆ ಮತ್ತೊಂದೆಡೆಯಲ್ಲಿ ಎಲ್ಲವೂ ಸೊನ್ನೆ, ಸುಖ ಸಂಪದಾರೋಗ್ಯಗಳು ಚಿರಸ್ಥಾಯಿಗಳಾಗಿ ಎಲ್ಲಿಯೂ ಇರುವುದಿಲ್ಲ ದೈವಲೀಲೆಯಿಂದಲಾಗಿ ತಿಪ್ಪೆಯು ಉಪ್ಪರಿಗೆಯಾಗಿಯೂ ಉಪ್ಪರಿಗೆಯು ತಿಪ್ಪೆಯಾಗಿಯೂ ಆಗುವುದಿಲ್ಲವೆ? ವೈದಾಸಿನಲ್ಲಿ ಇಷ್ಟರವರೆಗೆ ಸಂತೋಷಸಾಗರದಲ್ಲಿ ಪಾನ ಮಾಡುತ್ತಿದ್ದ ಪ್ರಯಾಣಿಕರೆಲ್ಲರೂ ಈಗ ವಿಪತ್ಸಾಗರದಲ್ಲಾದರು. ಅನೇಕರು ದುಃಖಗೊಂಡು ಮರುಗಿ ಬೆಂದು ಬೇಗುದಿಗೊಳ್ಳಲು ಯಾವ ಕಾರಣವಿರಬಹುದು? ವಾಚಕರೆ! ಲೆಕ್ಕಕ್ಕೆ ಸಿಲುಕದ ಜನಸಮುದಾಯವು ವಿದ್ಯುತ್ ದೀಪಗಳೆಲ್ಲ ಫಕ್ಕನೆ ಆರಿಹೋಗಲು ಚಿಂತಾಗ್ನಿಯಲ್ಲಿ ಮುಳುಗಿತು. ಇಡೀ ಶಹರಿನ ವಿದ್ಯುತ್ ಸರಬರಾಯಿಯು ಅಕಸ್ಮಾತ್ತಾಗಿ ನಿಂತುಹೋಗಲು ಆಕಸ್ಮಿಕ ಕಾರಣವೇನು? ಆದರೆ ಆ ಕಾರಣವು ಜನ ಸಾಮಾನ್ಯರ ಕೈಗೆ ಸಿಲುಕದ ಮಾತಾಗಿತ್ತು.

ಮಲಬಾರಿನಲ್ಲಿ ಇದೊಂದೂರಿನ ಸಾಮಂತರಾಜನೊಬ್ಬನು ಸಪರಿವಾರವಾಗಿ ಮಂಗಳೂರಿಗೆ ಈ ದಿನ ರಾತ್ರಿ ೬ ಗಂಟೆಗೆ ಪೇಸೆಂಜರ್ ಟ್ರೈನ್‌ನಲ್ಲಿ ಅದಾವುದೋ ಕಾರಣಕ್ಕಾಗಿ ಬರಲಿರುವನು, ಎಂದು ಲೋಬೋನಿಗೆ ಹೇಗೋ ಗೊತ್ತಾಗಿದ್ದಿತು. ರಾಜಕುಟುಂಬವಲ್ಲವೆ! ಅಂದಮೇಲೆ ಅರಸನ ಸುತ್ತುಮುತ್ತಲೂ ಅನೇಕ ಸಿಪಾಯಿಗಳು ಕಾವಲುಗಾರರು ಮೊದಲಾದವರು ರಾಜನಿಗೇನೂ ಅಪಾಯ ಉಂಟಾಗದಂತೆ ನೋಡಿಕೊಳ್ಳಲು ಇರಬಹುದು ಎಂಬ ವಿಷಯವು ಎಲ್ಲರಿಗೂ ತಿಳಿದಿರಬಹುದಷ್ಟೆ! ಅರಸನೆಂದಮೇಲೆ ಅವನ ಪರಿವಾರದವರ ಶರೀರದಲ್ಲಿ ಅನೇಕ ಬೆಲೆಬಾಳುವ ಅಮೂಲ್ಯ ರತ್ನಾಭರಣಗಳು ಇರಲೇಬೇಕು; ಆದರೆ ಆ ಒಡವೆಗಳನ್ನು ತನ್ನ ಕೈವಶಮಾಡಿಕೊಳ್ಳುವುದೆಂತು? ಎಂದು ಚೋರ ಸಾರ್ವಭೌಮನಾದ ಲೋಬೋನು ಚಿಂತಿಸುತಿದ್ದನು. ಆ ದಿನ ಬೆಳಿಗ್ಗೆ ಅವನು ತನ್ನ ಬಲಗೈ ಬಂಟನೆನಿಸಿದ ಪಿಟ್ಟನೊಡನೆ ಮಂತ್ರಣಾಗಾರದಲ್ಲಿ ಯಾವ ಉಪಾಯದಿಂದ ಅರಸನ ಸಂಪತ್ತನ್ನಪಹರಿಸಬೇಕೆಂದು ಯೋಚಿಸುತಿದ್ದನು ಪಿಟ್ಟನು ಕೆಲವು ಯುಕ್ತಿಗಳನ್ನು ಹೇಳಿದರೂ ಲೋಬೋನು ಅದನ್ನು ಸಮರ್ಪಕವಾಗಿಲ್ಲವೆಂದು ನಿರಾಕರಿಸಿ ಆಲೋಚಿಸುತ್ತಿರಲು, ಅವನು ಅದೊಂದು ಯುಕ್ತಿಯನ್ನು ಪಿಟ್ಟನೊಡನೆ ಹೇಳಲವನು ಅದೇ ಉತ್ತಮವೆಂದು ಸೈಗುಟ್ಟಿದನು. ಪೇಸೇಂಜರ್ ಟ್ರೈನ್ ರೈಲ್ವೇಸ್ಟೇಷನಿಗೆ ತಲಪಿ ಜನರೆಲ್ಲ ಇಳಿದು ಹೊರಗಡೆ ಬರುತ್ತಿರಲು ನೀನು ನನಗೆ ಟೆಲಿಫೋನ್‌ನಲ್ಲಿ ತಿಳಿಸು ಎಂದು ಲೋಬೋನು ಪಿಟ್ಟನೊಡನೆ ಹೇಳಿ ಅನಂತರ ಮಾಡಬೇಕಾದ ಕೆಲಸಗಳನ್ನೆಲ್ಲ ಗುಟ್ಟಿನಲ್ಲಿ ತಿಳಿಸಿದನು ಲೋಬೋನ ಹೇಳಿಕೆಯ ಮೇರೆಗೆ ಪಿಟ್ಟನು ಜೋಸೆಫ್‌ನೊಡನೆ ಸಾಯಂಕಾಲ ೬|| ಗಂಟೆಗೆ ರೈಲ್ವೇ ಸ್ಟೇಷನ್‌ಗೆ ಬಂದನು ಟ್ರೈನ್ ಬರಲು ಇನ್ನೂ ಹದಿನೈದು ನಿಮಿಷವಿದ್ದಿತು. ಅವನು ಜೋಸೆಫ್‌ನೊಡನೆ ಪ್ಲೇಟ್ ಫೋರ್ಮ್‌ನಲ್ಲಿ ತಿರುಗಾಡುತ್ತಿರಲು ರೈಲಿನ ಸಿಳ್ಳು ಅವನಿಗೆ ಕೇಳಿಸಿತು. ಕೂಡಲೇ ಆತನು ಜೋಸೆಫ್‌ನನ್ನು ಸಂಕೇತದಿಂದ ಹತ್ತಿರ ಕರೆದು ಪಕ್ಕದ ಮಿತ್ರನ ಅಂಗಡಿಗೆ ಹೋಗಿ ಫೋನ್‌ನಲ್ಲಿ ಯಜಮಾನನಿಗೆ ತಿಳಿಸು ಎಂದು ಗುಟ್ಟಿನಲ್ಲಿ ಹೇಳಿದನು. ಜೋಸೆಫ್‌ನು ಮುಂಚಿನಂತೆ ಮಿತ್ರನ ಅಂಗಡಿಗೆ ಹೋಗಿ ಫೋನ್‌ನಲ್ಲಿ ತಿಳಿಸಲು ಲೋಬೋನು ತನ್ನ ಚಾತುರ್ಯದಿಂದ ಕಾರ್ಯಾಲಯದಲ್ಲಿರುವ ಯಾರೊಬ್ಬ ನೌಕರನಿಗೂ ಗೊತ್ತಾಗದಂತೆ

ವಿದ್ಯುತ್ ಉಪಕರಣಗಳಲ್ಲೊಂದನ್ನು ಕೆಡಿಸಲು ವಿದ್ಯುತ್ ಪ್ರವಾಹವು ಹರಿಯುವುದು ನಿಂತಿತು. ಆಗ ಪಟ್ಟಣದಲ್ಲೆಲ್ಲ ಗಲಭೆಯೋ ಗಲಭೆ!

ಕರಿಮುಖಂಡನು ನಿತ್ಯದಂತೆ ಸಾಯಂಕಾಲ ಆರುಗಂಟೆಗೆ ಈ ದಿನವೂ ಮೈದಾನಿಗೆ ತಿರುಗಾಡಲು ಹೋಗಿದ್ದನು. ಅತನು ಹೊರಟು ಹೋದ ನಂತರ ರಾಮದಾಸನು ಮಿತ್ರನೊಬ್ಬನೊಡನೆ ರೈಲ್ವೇ ಸ್ಟೇಸನ್ ಕಡೆಗೆ ಹೋಗಿದ್ದನು. ಅವನು ಪ್ಲೇಟ್‌ಫಾರ್ಮನಲ್ಲಿ ಬೆಂಚಿನಲ್ಲಿ ಕುಳ್ಳಿರಲು ಪಿಟ್ಟೆ ಮತ್ತು ಜೊಸೆಫ್‌ರನ್ನು ಕಂಡನು. ಟ್ರೈನ್ ಸಿಳ್ಳು ಕೇಳಿ ದೊಡನೆ ಪಿಟ್ಟನು ಜೊಸೆಫ್‌ನೊಡನೆ ಏನೋ ಹೇಳಿದುದು ಅಷ್ಟರಲ್ಲಿ ವನು ಸರಸರನೆ ಪಕ್ಕದ ಅಂಗಡಿಗೆ ಓಡಿಹೋದುದು ಕೂಡಲೇ ವಿದ್ಯುತ್ ಪ್ರವಾಹವು ನಿಂತು ದೀಪವೆಲ್ಲ ಆರಿದುದು ಇದರರ್ಥವೇನು? ಎಂದು ರಾಮ ದಾಸನ ತರ್ಕಕ್ಕೆ ನಿಲುಕದ ವಿಷಯವಾಯಿತು ಇದರಲ್ಲೇನೋ ಗುಪ್ತ ರಹಸ್ಯವಿದೆಯೆಂದವನೂಹಿಸಿ ಸುಮ್ಮನಿದ್ದು ಮುಂದೇನಾಗುತ್ತದೆಯೆಂದು ನೋಡಲು ಕುತೂಹಲ ಪಟ್ಟನು ಟ್ರೈನ್‌ನಿಂದ ಇಳಿದ ಜನರೆಲ್ಲ ವಿದ್ಯುತ್ ದೀಪವಿಲ್ಲದುದರಿಂದ ಕಳವಳಗೊಂಡು ಗಲಾಟೆ ಮಾಡುತ್ತ ಸ್ಟೇಶನ್‌ನಲ್ಲಿದ್ದರು. ಟೋರ್ಚ ಲೈಟಿದ್ದವರು ಅಲ್ಲಿಂದ ಹೇಗಾದರೂ ಹೊರಟು ಹೋದರು ದೂರದ ಪ್ರಯಾಣಿಕರೆಲ್ಲ ತಮ್ಮ ತಮ್ಮೊಳಗೆ ಆಕ ಸ್ಮಾತ್ತಾಗಿ ವಿದ್ಯುತ್ ದೀಪವಾರಲು ಕಾರಣವೇನೆಂದು ಮಾತನಾಡುತಿದ್ದರು. ಅರಸನ ಕುಟುಂಬವು ಆ ಕತ್ತಲೆಯಲ್ಲಿ ಒಂದು ಕಡೆಯಲ್ಲಿ ನಿಂತುಕೊಂಡಿ ದ್ದಿತು. ಆಗ ಪಿಟ್ಟನೂ ಜೊಸೆಫ್‌ನೂ ಆ ಕತ್ತಲೆಯಲ್ಲಿ ಅವರ ಬಳಿಗೆ ಬಂದು ಸ್ತ್ರೀಯರ ಕುತ್ತಿಗೆಯಿಂದ ಕೆಲವು ಅಮೂಲ್ಯ ರತ್ನಾಭರಣಗಳನ್ನ ಪ ಹರಿಸಿದರು; ಆದರೆ ಅಷ್ಟರಲ್ಲಿ ಒಂದು ವಿಚಿತ್ರ ನಡೆಯಿತು ಆಕಸ್ಮಾತ್ತಾಗಿ ವಿದ್ಯುತ್ ಉಪಕರಣಗಳು ಹಾಳಾಗಿ ಪ್ರವಾಹವು ನಿಲ್ಲಲು, ಅಸಿಸ್ಟೆಂಟ್ ಇಲೆಕ್ಟ್ರಿಕಲ್ ಎಂಜಿನೀಯರ್ ಅಲ್ಲಿಗೆ ಬಂದು ಹತ್ತು ನಿಮಿಷಗಳಲ್ಲಿಯೇ ಉಪಕರಣಗಳನ್ನು ಸರಿಪಡಿಸಲು ಪಟ್ಟಣವೆಲ್ಲ ಪುನಃ ಮೊದಲಿನಂತೆ ಬೆಳ ಗಿತು. ವಿದ್ಯುತ್ ದೀಪಗಳು ಬೆಳಗಲು ಚೋರರು ಅಲ್ಲಿಂದ ಮೆಲ್ಲನೆ ಕಾಲ್ತೆಗೆಯಲು ಅರಸು ಕುಟುಂಬದ ರಮಣಿಯರು ಕಳವು....ಕಳವು.... ಎಂದು ಕೋಮಲ ಕಂಠದಿಂದೊದರಲು ಕಾವಲುಗಾರರು ಹಿಡಿಯಿರಿ ಹಿಡಿ ಯಿರಿ ಎಂದು ಬೊಬ್ಬೆಹೊಡೆದರು: ಆದರೆ ಕಳ್ಳರೆಲ್ಲಿ? ಅವರಾ ಮೊದಲೇ

ಅಲ್ಲಿಂದ ಫರಾರಿಯಾಗಿದ್ದರು. ಕಾವಲುಗಾರರು ಅಲ್ಲೆಲ್ಲ ಹುಡುಕಾಡಿದರೂ ಕಳ್ಳರ ಸುಳಿವೇ ಸಿಕ್ಕಲಿಲ್ಲ! ಪಾತಕರೆ! ರಾಮುದಾಸನು ಪಿಟ್ಟೆಸೂ ಜೋಸೆಫ್‌ನೂ ಫರಾರಿಯಾಗುತ್ತಿರಲು ಅವರ ಬೆನ್ನಟ್ಟಿ ಹೋದನು. ಅವನು ಅನುಸರಿಸಿ ಬರುತಿದ್ದುದು ಅವರಿಗೆ ಸ್ವಲ್ಪ ಸಹ ತಿಳಿಯಲಿಲ್ಲ ಆ ಚೋರರು ಬಲ್ಮಠಕ್ಕೆ ತಲಪಿದರು. ಅಲ್ಲಿಂದವರು ಯಾವ ಬೀದಿಯಲ್ಲಿ ಹೋದರೆಂದು ರಾಮುದಾಸನಿಗೆ ತಿಳಿಯಲಿಲ್ಲ; ಆದ್ದರಿಂದವನು ಅಲ್ಲಿಂದ ಕದ್ರಿಗೆ ಹೋಗಿ ತನ್ನ ಮನೆ ಸೇರಿದನು ರಾಮುದಾಸನು ಮನೆಗೆ ತಲಪಿ ಹದಿನೈದು ನಿಮಿಷ ಸಹ ಆಗಿರಲಿಲ್ಲ. ಕರಮುಚಂದನಾಗ ವೈದಾಸಿನಿಂದ ಮನೆಗೆ ಬಂದನು. ರಾಮುದಾಸನವನೊಡನೆ ನಡೆದ ಸಂಗತಿಯನ್ನರುಹಿದನು ಕಳವಾದುದನ್ನು ತಿಳಿದು ಆ ಮಲಬಾರಿನ ಅರಸನು ಪೋಲೀಸ್ ಸುಪರಿಡೆಂಟ್ ಯಶವಂತನಿಗೆ ರೈಲ್ವೇ ಸ್ಟೇಷನ್‌ನಿಂದಲೇ ಫೋನ್‌ಮಾಡಿ ತಿಳಿಸಿದನು. ಯಶವಂತಸಿಂಹನು ಈ ವಿಚಿತ್ರ ಪ್ರಸಂಗವನ್ನು ಪತ್ತೆದಾರಿಗೆ ತಿಳಿಸಲು ಆತುರಪಟ್ಟು ಫೋನ್‌ನ ಬಳಿಗೆ ಹೋಗಿ ಮಾತನಾಡಲಾರಂಭಿಸಿದನು. ಫೋನ್‌ನ ಬೆಲ್ ಕೇಳಿ ಕರಮುಚಂದನು ರಿಸೀವರನ್ನು ಕಿವಿಗೆ ಹಿಡಿದಾಗ ಯಶವಂತಸಿಂಹನು ಮಾತನಾಡುತ್ತಿರುವನೆಂದು ಗೊತ್ತಾಯಿತು. ಅವನು ಕಳವಾದ ವಿಷಯವನ್ನು ತಿಳಿಸಲು ಪತ್ತೆದಾರಿಯು ಹೂಂ ಎಂದು ಹೊರಟಂದು ಅನಂತರ ರಾಮುದಾಸನೊಡನೆ ಬೇಗನೆ ಊಟ ತೀರಿಸಿದನು. ಕರಮುಚಂದನು ತನ್ನ ಕೋಣೆಗೆ ಹೋದನು. ರಾಮುದಾಸನು ಅವನ ಕೋಣೆಗೆ ಹೋಗಿ ಶ್ರೀಮಾನ್ ಬಾಲಸರಸ್ವತಿಯವರಿಂದ ಬರೆಯಲ್ಪಟ್ಟ "ಪಿಶಾಚಿ ಪರಿವಾರ" ಎಂಬ ಪತ್ತೆದಾರಿ ಕಾದಂಬರಿಯನ್ನು ಓದಲುಪಕ್ರಮಿಸಿದನು. ಅವನ ಮನಸ್ಸು ಪುಸ್ತಕವನ್ನೋದುವುದರಲ್ಲಿ ತಲ್ಲೀನವಾಗಿದ್ದುದರಿಂದ ಹೊರಗಿನ ಪರಿವೆಯೇ ಅವನಿಗಿರಲಿಲ್ಲವೆಂದರೂ ತಪ್ಪಾಗಲಾರದು.



ಪಾದ್ರಿಯೊಬ್ಬನು ಕದ್ರಿ ಮಾರ್ಗದಲ್ಲಿ ಮೆಲ್ಲಮೆಲ್ಲನೆ ಹೋಗುತಿದ್ದನು. ಅವನು ಕಪ್ಪಾದ ನಿಲುವಂಗಿಯನ್ನು ತೊಟ್ಟುಕೊಂಡು ಒಳಗಡೆಯಲ್ಲಿ ಶೂಟ್ ಧರಿಸಿದ್ದನು. ಅವನ ಕಪ್ಪಗಾದ ಗಡ್ಡವು ಐದಾರು ಇಂಚು ಉದ್ದವಾಗಿ ಬೆಳೆದಿದ್ದಿತು ಅವನ ತಲೆಯಲ್ಲಿ ಹೇಟ್ ಶೋಭಿಸುತಿತ್ತು. ಅವನ

ಉಡುಪುಗಳು ಶುಭ್ರವಾಗಿದ್ದುವು. ಕೈಯಲ್ಲಿ ಚರ್ಮದ ಬೇಗೊಂದು ಇತ್ತಲ್ಲದೆ ಟೋರ್ಚ್‌ಲೈಟ್ ಕೂಡಾ ಇದ್ದಿತು. ಅವನು ಸ್ವಲ್ಪ ದೂರ ವಾಗಕ್ರಮಣ ಮಾಡಿ ಅನಂತರ ಅಲ್ಲಿರುವ ಭವ್ಯವಾದ ಕಾಫಿಕ್ಲಬ್‌ಗೆ ಹೋದನು. ಆ ಕಾಫಿ ಕ್ಲಬ್ ಬಹಳ ಹೆಸರುವಾಸಿಯಾದುದು. ಎದುರಿನ ಹೊಲ್‌ನಲ್ಲಿ ಸಾಧಾರಣ ಜನರು ಉಪಾಹಾರ ಪಾನೀಯಗಳನ್ನು ಸೇವಿಸಲು ಕುಳಿತುಕೊಳ್ಳಲು ಅನೇಕ ಕುರ್ಚಿಗಳೂ ದುಂಡು ಮೇಜುಗಳೂ ಇದ್ದುವು. ಮಾಳಿಗೆಯಲ್ಲಿ ಒಂದು ಕೋಣೆಯಲ್ಲಿ 'ಏರ್ ಕಂಡೀಶನ್' ಅಂದರೆ ಚಳಿಗಾಲದಲ್ಲಿ ಬೆಚ್ಚಗಾಗಿಯೂ ಸೆಕೆಗಾಲದಲ್ಲಿ ತಂಪಾಗಿಯೂ ಇರುವಂತೆ ಏರ್ಪಾಡು ಮಾಡಿದ್ದರು. ಆ ಕೋಣೆಗೆ ಪ್ರವೇಶಿಸಲಿಕ್ಕೇ ಒಂದು ರೂಪಾಯಿ ತೆರಬೇಕಾಗಿದ್ದುದರಿಂದ ಸಾಮಾನ್ಯರಾರೂ ಅಲ್ಲಿಹೋಗಿ ಕಾಫಿ, ಚಹ ಕುಡಿಯುತ್ತಿರಲಿಲ್ಲ. ದೊಡ್ಡ ದೊಡ್ಡ ಶ್ರೀಮಂತರಾ ಕೋಣೆಗೆ ಬರುತಿದ್ದರಷ್ಟೆ! ಮೇಲೆ ಹೇಳಿದ ಪಾದ್ರಿಯು ಕ್ಲಬ್‌ಗೆ ಬಂದು 'ಏರ್‌ಕಂಡೀಶನ್' ಇರುವ ಕೋಣೆಗೆ-ಮಾಳಿಗೆಗೆ ಹೋದನು. ಆ ಕೋಣೆಯ ಪಕ್ಕದಲ್ಲೊಂದು ಚಿಕ್ಕದೊಂದು ದೀಪವಿದ್ದಿತು. ಪಾದ್ರಿಯು ಭವ್ಯವಾದ ಏರ್‌ಕಂಡೀಶನ್ ಇರುವ ಕೋಣೆಗೆ ಹೋಗಿ ಕುರ್ಚಿಯೊಂದರಲ್ಲಿ ಕುಳಿತನು. ಆ ಕೋಣೆಯಲ್ಲಿ ಸುತ್ತಲೂ ದೊಡ್ಡ ದೊಡ್ಡ ನಿಲುವುಗನ್ನಡಿಗಳಿದ್ದುದರಿಂದ ಒಬ್ಬನು ಅಲ್ಲಿ ಬಂದು ಕುಳಿತರೆ ಅವನ ಪ್ರತಿಬಿಂಬಗಳು ಎಲ್ಲಾ ಕನ್ನಡಿಗಳಲ್ಲಿಯೂ ಮೂಡಿ ಅನೇಕ ಪ್ರತಿಬಿಂಬಗಳಾಗುತಿದ್ದುವು. ಹಳ್ಳಿಯವರಾರಾದರೂ ಆ ಕೋಣೆಯನ್ನು ಪ್ರವೇಶಿಸಿದ್ದರೆ ಖಂಡಿತವಾಗಿಯೂ ಬೆಚ್ಚಿ ಇದೇನು ಭೂತದ ಆಟವೆ! ಎಂದು ತಿಳಿದು ಹೆದರಿ ಜ್ವರಕ್ಕೆ ತುತ್ತಾಗಿ ಹಾಸಿಗೆ ಹಿಡಿಯುತಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಅದಿರಲಿ. ಪಾದ್ರಿಯು ಆ ಕೋಣೆಯನ್ನು ಪ್ರವೇಶಿಸಿದೊಡನೆ ಒಬ್ಬ ಹುಡುಗನು ಬಂದು ತಿಂಡಿ-ತಿನಸುಗಳ ಹೆಸರಿನ ಪಟ್ಟಿಯನ್ನು ಮೇಜಿನ ಮೇಲಿಟ್ಟನು. ಪಾದ್ರಿಯು ಎರಡು ತಿಂಡಿಗಳನ್ನು ಗುರುತಿಸಲು ಆ ಹುಡುಗನು ಕೂಡಲೇ ದೋಸೆ ಮತ್ತು ಹೋಳಿಗೆಗಳನ್ನು ತಂದು ಮೇಜಿನ ಮೇಲಿಟ್ಟು ಹೋದನು; ಮತ್ತು ಸ್ವಲ್ಪ ಸಮಯದಲ್ಲಿಯೇ ಕಾಫಿ ತಂದು ಪಾದ್ರಿಯ ಮುಂದಿಟ್ಟನು. ಅವನು ತಿಂಡಿ ತಿಂದು ಕಾಫಿಕುಡಿದನಂತರ ಹುಡುಗನ ಹತ್ತಿರ ಚಾರ್ಜೆಷ್ಟಾಯಿತೆಂದು ಕೇಳಿ ಹಣ ಕೊಟ್ಟನು. ಅನಂತರ ಅವನು ಸ್ವಲ್ಪ ಸಮಯ ಅಲ್ಲಿಯೇ ಕುಳಿತನು.

ಪಿಟ್ಟನೂ ಜೋಸೆಫನೂ ಬಲ್ಮೃತದಿಂದ ಎಲ್ಲಿ ಹೋದರೆಂಬುದು ರಾಮ ದಾಸನಿಗೆ ಗೊತ್ತಾಗಲಿಲ್ಲವಷ್ಟೆ ! ಅವರೀರ್ವರೂ ಅಲ್ಲಿಂದ ಕದ್ರಿಗೆ ಬಂದು ಮೇಲೆ ಹೇಳಿದ ಕಾಫಿ ಕ್ಲಬ್‌ಗೆ ಬಂದರು. ಆ ಕ್ಲಬ್‌ನ ಪ್ರೊಪ್ರೈಟರ್ ಜಪ ಚಾರ್ಲಿಯು ಪಿಟ್ಟನ ಆಪ್ತ ಸ್ನೇಹಿತನಾಗಿದ್ದನು ಪಿಟ್ಟನೂ ಜೊಸೆಫ್‌ನೂ ಚಹ ಕುಡಿದು ಅನಂತರ ಮಾಳಿಗೆಯನ್ನೇರಿ ಏರ್ ಕಂಡೀಶನ್ ಇರುವ ಕೋಣೆಯ ಹತ್ತಿರವಿರುವ ಸಾಮಾನ್ಯ ಕೋಣೆಗೆ ಹೋಗಿ ಬಾಗಿಲನ್ನು ಭದ್ರ ಪಡಿಸಿ ಮುಂದೇನು ಮಾಡುವುದೆಂದು ಆಲೋಚಿಸುತ್ತಿದ್ದರು. ಪಾದ್ರಿಯು ಏರ್ ಕಂಡೀಶನ್ ಇರುವ ಕೋಣೆಗೆ ಬಂದುದವರಿಗೆ ತಿಳಿದಿರಲಿಲ್ಲ ಅವರು ಮೆಲ್ಲ ಮೆಲ್ಲನೆ ಮಾತನಾಡುತಿದ್ದರು. ಪಕ್ಕದ ಕೋಣೆಯಲ್ಲಿ ಏನೋ ಗುಟ್ಟಾಗಿ ಮಾತನಾಡುತಿದ್ದುದನ್ನು ಕೇಳಿ ಆ ಪಾದ್ರಿಯು ಮೆಲ್ಲನೆ ತಾನಿದ್ದ ಕೋಣೆಯಿಂದ ಬೂಟ್ಸಿನ ಶಬ್ದವಾಗದಂತೆ ಆ ಪಕ್ಕದ ಕೋಣೆಯ ಬಾಗಿಲಿನ ಹತ್ತಿರಹೋಗಿ ಪಿಟ್ಟನೂಜೋಸೆಫ್‌ನೂ ಮಾತನಾಡುತಿದ್ದುದನ್ನು ಕೇಳಲುಪಕ್ರಮಿಸಿದನು. ಅವರು ಮಾತನಾಡಿದುದೆಲ್ಲವೂ ಅವನಿಗೆ ಕೇಳಿ ಸದಿದ್ದರೂ ಅವರ ಸಂಭಾಷಣೆಯಿಂದವರು ಪಿಟ್ಟನೂ ಜೋಸೆಫ್‌ನೂ ಎಂದು ತಿಳಿಯಲು, ಕುತೂಹಲದಿಂದಲೂ ಬಹಳ ಎಚ್ಚರದಿಂದಲೂ ಅವರೀರ್ವರ ಮಾತುಗಳನ್ನಾಲೈಸಲಾರಂಭಿಸಿದನು. ಪಿಟ್ಟನು ಜೋಸೆಫ್‌ನೊಡನೆ ನಾನೀಗ ಈ ಆಭರಣಗಳನ್ನು ಸರಾಫನಲ್ಲಿಗೆ ಹೋಗಿ ಮಾರಿ ಬರುವೆನು; ನೀನಿಲ್ಲಿಯೇ ಕುಳಿತಿರು ಎಂದಾಗ ಅವನು ನೀನು ಹೋಗುವುದು ಬೇಡ; ನಾನು ಹೋಗಿ ನಗಗಳನ್ನು ವಿಕ್ರಯಿಸಿ ಬರುತ್ತೇನೆ, ನೀನಿಲ್ಲಿರು ಎಂದನು. ಅದಕ್ಕೆ ಪಿಟ್ಟರು ಒಪ್ಪದಿರಲು ಕಡೆಗೆ ಅವರು ಜಗಳವಾಡಲಾರಂಭಿಸಿದರು. ಆಗ ಪಿಟ್ಟನು ಹಾಗಾದರೆ ನಾವು ಜಗಳವಾಡುವುದು ಬೇಡ, ನಾವಿಬ್ಬರೂ ಸರಾಫನಲ್ಲಿಗೆ ಹೋಗಿ ಒಡವೆಗಳನ್ನು ಮಾರಾಟ ಮಾಡಿ ಬರುವ ಎಂದನು. ಇನ್ನಿವರು ಬೇಗನೆ ಇಲ್ಲಿಂದ ಹೊರಡಲಿಕ್ಕಿರುವರು ಎಂದು ಪಾದ್ರಿಯು ತಿಳಿದು ಶಬ್ದವಾಗದಂತೆ ಆದರೆ ಬೇಗನೆ ಅಲ್ಲಿಂದ ಕೆಳಗಿಳಿದು ಮಾರ್ಗವನ್ನು ಸೇರಿ ಈ ಚೋರರಿನ್ನು ಇನ್ನೆಲ್ಲಿಗೆ ಹೋಗುವರೆಂದು ತಿಳಿಯಲಿಕ್ಕಾಗಿ ಅಲ್ಲಿಯೇ ಮಾರ್ಗದ ಬದಿಯಲ್ಲಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಚಿತ್ರಪ್ರಚಾರ ಪಡಿಸಲು ಸಿನೆಮದವರಿಟ್ಟ ದೊಡ್ಡ ಪ್ರಕಟಣಾ ಹಲಿಗೆಯ ಹಿಂಬದಿಯಲ್ಲಿ ಅಡಗಿ ನಿಂತನು. ಪಿಟ್ಟನೂ ಜೊಸೆಫ್‌ನೂ ಮಾಳಿಗೆಯಿಂದ ಕೆಳಗಿಳಿದು

ಚಾರ್ಲಿಗೆ ನಮಸ್ಕಾರವನ್ನಿತ್ತು ಸಿಗರೇಟ್ ಸೇದುತ್ತಾ ಅಲ್ಲಿಂದ ಹೊರಟರು ಪಾದ್ರಿಯು ಮೆಲ್ಲ ಮೆಲ್ಲನೆ ಅವರನ್ನನುಸರಿಸುತ್ತಾ ಹೋದನು. ಪಾದ್ರಿಯು ತಮ್ಮನ್ನು ಬೆನ್ನು ಹತ್ತಿದ ಬೇತಾಳನಂತೆ ಹಿಂಬಾಲಿಸಿ ಬರುತ್ತಿರುವ ಸಂಗತಿಯು ದುಷ್ಟರಾದ ಆ ಜೋಡಿಗೆ ತಿಳಿಯಲೇ ಇಲ್ಲ. ಅವರು ಕದ್ರಿಯಿಂದ ಸೇಡಿ ಗುಡ್ಡೆಗೆ ಬಂದು ಇನ್ನು ಹಂಪನಕಟ್ಟೆಗೆ ಹೋಗುವ ಮಾರ್ಗದಲ್ಲಿ ತಿರುಗಲಿಕ್ಕಿರುವರು. ಅಷ್ಟರಲ್ಲಿ ಕೊಂಕಣಿ ಭಾಷೆಯಲ್ಲಿ ಯಾರೊ ಇವರನ್ನು ಕರೆದು ಮಣ್ಣ ಗುಡ್ಡೆಯ ಚರ್ಚಿಗೆ ಹೋಗಲು ದಾರಿ ತೋರಿಸಬೇಕೆಂದು ಹೇಳಿದುದು ಕೇಳಲು, ಪಿಟ್ಟನು ಕರೆದವರಾರೆಂದು ತಿರುಗಿ ನೋಡಿದನು. ಆಗ ಪಾದ್ರಿಯು ಪುನಃ ಮೊದಲಿನಂತೆ ಹೇಳಿದನು ಪಿಟ್ಟನಿಗೆ ಚರ್ಚಿಗೆ ದಾರಿ ತೋರಿಸಲು ಮನಸ್ಸಿಲ್ಲವಾದರೂ ತಮ್ಮ ಜಾತಿಯ ಗುರುವು ಚರ್ಚಿಗೆ ದಾರಿ ಕೇಳಿದಾಗ ತಾನು ದಾರಿ ತೋರಿಸದಿದ್ದರೆ ಯೇಸು ಕ್ರಿಸ್ತನು ಮೆಚ್ಚನೆಂದು ಆ ನೀಚ ಶಿಖಾಮಣಿಯು ತನ್ನ ಧರ್ಮದ ಮೇಲಿನ ಅಭಿಮಾನದಿಂದ ತಿಳಿದನು. ಆದರೆ ತಾನೀಗ ಒಡವೆಗಳನ್ನು ಮಾರಲು ಹೊರಟಿರುವನೆಂದವನು ತಿಳಿದೊಡನೆ ಅವನಿಗೆ ದಾರಿ ತೋರಿಸಲು ಎಳ್ಳಿನಷ್ಟು ಸಹ ಮನಸ್ಸುಉಂಟಾಗಲಿಲ್ಲ. ಆದರೂ ಅವನು ಪಾದ್ರಿಯೊಡನೆ ನಿಮಗಲ್ಲಿ ಯಾರನ್ನು ಕಾಣಬೇಕಾಗಿದೆಯೆಂದು ಕೇಳಲು, ಪಾದ್ರಿಯು ಅವನೊಡನೆ ನನಗೆ ಚರ್ಚಿನ ಮುಖ್ಯಗುರುಗಳನ್ನು ಕಾಣಬೇಕಾಗಿದೆಯೆಂದನಲ್ಲದೆ ಒಂದು ಸಲ ದಾರಿ ತೋರಿಸಿದರೆ ಒಳ್ಳೆಯದಿತ್ತೆಂದನು. ಪಿಟ್ಟನಾಗ ಮನವಿಲ್ಲದ ಮನದಿಂದ ಆಯಿತೆಂದೊಪ್ಪಿ ಜೊಸೆಫ್‌ನೊಡನೆ ನೀನಿಲ್ಲಿಯೇ ನಿಂತಿರು. ನಾನೀಗ ಇವರನ್ನು ಚರ್ಚಿಗೆ ಬಿಟ್ಟು ಬರುತ್ತೇನೆಂದು ಹೇಳಿ ದಾರಿ ತೋರಿಸಲು ಹೊರಟನು.

ಪಿಟ್ಟನು ಮಣ್ಣುಗುಡ್ಡೆಯ ಚರ್ಚಿಗೆ ಹೋಗುವ ಮಾರ್ಗದಲಿ ಹೋದನು ಅವನ ಹಿಂದಿನಿಂದ ಪಾದ್ರಿಯೂ ಹೋಗಲಾರಂಭಿಸಿದನು. ಅಲ್ಲಿಂದ ಸಾಧಾರಣ ಅರ್ಧ ಮೈಲು ಅವರು ಇದೇ ರೀತಿಯಿಂದ ಮುಂದುವರಿದರು. ಆಗ ರಾತ್ರಿ ಹತ್ತು ಗಂಟೆಯ ಸಮಯವಾಗಿರಬಹುದು. ಆಗ ಬೀದಿಯಲ್ಲಿ ಹೆಚ್ಚಿನ ಜನ ಸಂಚಾರವಿರಲಿಲ್ಲ. ಅಷ್ಟರಲ್ಲಿ ಪಾದ್ರಿಯು ಮೆಲ್ಲನೆ ತನ್ನ ಬ್ಯಾಗಿನಿಂದ ಒಂದು ಕಬ್ಬಿಣದ ಸರಳನ್ನು ತೆಗೆದು ಪಿಟ್ಟನ

ತಲೆಗೆ ಗುರಿಯಿಟ್ಟು ಹೊಡೆದನು. ತಲೆಗೆ ಬಲವಾಗಿ ಪೆಟ್ಟು ಬಿದ್ದುದರಿಂದ ಪಿಟ್ಟನು ಬವಳಿ ಬಂದು ಬಿದ್ದನು. ಪಾದ್ರಿಯು ಬೇಗನೆ ಪಿಟ್ಟನ ಕೈಯಲ್ಲಿ ರುವ ಚೀಲದಿಂದ ಆಭರಣಗಳನ್ನು ತೆಗೆದು ತನ್ನ ಜೇಬ್‌ನಲ್ಲಿ ಹಾಕುತ್ತಿದ್ದನು. ಆಗ ದೈವವಶಾತ್ ಗಸ್ತಿನ ಪೋಲೀಸನೊಬ್ಬನು ಅಲ್ಲಿಗೆ ಬಂದನು. ಒಬ್ಬನು ತಲೆಗೆ ಪೆಟ್ಟಾಗಿ ಸ್ಮೃತಿ ತಪ್ಪಿ ಬಿದ್ದಿರುವುದನ್ನೂ ಪಕ್ಕದಲ್ಲಿ ಪಾದ್ರಿಯೋರ್ವನು ಜೇಬ್‌ನಲ್ಲೇನನ್ನೋ ತುಂಬಿಸುತ್ತಿರುವುದನ್ನೂ ಕಂಡು ಆ ಗಸ್ತಿನವನು ಈ ಪಾದ್ರಿಯು ಚೋರನೆಂದೆಣಿಸಿ ಬೇಗನೆ ಬಂದು ಪಾದ್ರಿಯ ಕೈಯನ್ನು ಗಟ್ಟಿಯಾಗಿ ಹಿಡಿದನು. ಪಾದ್ರಿಯು ಕೈಯನ್ನವನ ಹಿಡಿತದಿಂದ ಬಿಡಿಸಲು ಪ್ರಯತ್ನ ಪಡುತ್ತಿರಲು ಈ ಪಾದ್ರಿಯು ಅತ್ಯಂತ ಬಲಿಷ್ಠನಾಗಿರುವನೆಂದು ಪೋಲೀಸ್‌ನು ತಿಳಿದು ತನ್ನಲ್ಲಿರುವ ಸಿಳ್ಳನ್ನೂದಿದನು. ಸಂಕೇತವಾದ ಆ ಸಿಳ್ಳಿನ ಶಬ್ದ ಕೇಳಿದೊಡನೆ ಬೇರೆ ಬೇರೆ ಗಲ್ಲಿಗಳಲ್ಲಿ ಗಸ್ತಿನಲ್ಲಿದ್ದ ಮೂರು ಜನ ಪೋಲೀಸರು ಅಲ್ಲಿಗೆ ವಾಯುವೇಗದಿಂದೋಡಿ ಬಂದರು. ಪಾದ್ರಿಯು ಒಬ್ಬನನ್ನು ಹೊಡೆದು ಸ್ಮೃತಿ ತಪ್ಪಿ ಬೀಳುವಂತೆ ಮಾಡಿ ಅವನ ಹತ್ತಿರವಿರುವ ಸೊತ್ತನ್ನಪಹರಿಸಲು ಹವಣಿಸಿರುವನೆಂದು ಆ ಯಾಮಿಕರು ತಿಳಿದು ಪಾದ್ರಿಯೊಡನೆ ಸ್ಟೇಷನ್‌ಗೆ ಬಾ ಎಂದರು. ಪಾದ್ರಿಯು ಏನೂ ಭಯಪಡದೆ ಆಯಿತೆಂದೊಪ್ಪಿದನು. ಇಬ್ಬರು ಪೋಲೀಸರು ಪಿಟ್ಟನನ್ನು ಹೊತ್ತುಕೊಂಡೂ ಮತ್ತಿರ್ವರು ಪಾದ್ರಿಯ ಕೈಯನ್ನು ಹಿಡಿದುಕೊಂಡೂ ಅಲ್ಲಿಯೇ ಇದ್ದ ಪೋಲೀಸ್ ಸ್ಟೇಷನಿಗೆ ಕರೆದುಕೊಂಡು ಹೋದರು. ಅಲ್ಲಿ ಪಿಟ್ಟನನ್ನು ಜಗಲಿಯಲ್ಲಿ ಮಲಗಿಸಿದರು. ಸಬ್ ಇನ್‌ಸ್ಪೆಕ್ಟರ್‌ರೊಡನೆ ಯಾಮಿಕರು ಪಾದ್ರಿಯು ಈ ವ್ಯಕ್ತಿಯನ್ನು ಹೊಡೆದು ಬವಳಿ ಬರುವಂತೆ ಮಾಡಿ ಅವನ ಹತ್ತಿರವಿರುವ ಸೊತ್ತನ್ನಪಹರಿಸಿದ್ದಾನೆಂದು ಹೇಳಿದರು. ಇನ್‌ಸ್ಪೆಕ್ಟರ್‌ನು ಪಾದ್ರಿಯನ್ನು ಹತ್ತಿರ ಕರೆದು ಆಂಗ್ಲ ಭಾಷೆಯಲ್ಲಿ ನಿಮ್ಮಂತಹ ಸರ್ವ ಸಂಗ ಪರಿತ್ಯಾಗಿಗಳಾಗಿ ಗುರು ಎನ್ನಿಸಿಕೊಂಡವರು ಇಂತಹ ನೀಚ ಕೆಲಸವನ್ನು ಮಾಡಬಹುದೆ? ಎಂದನು. ಆಗ ಪಾದ್ರಿಯು ಇಂಗ್ಲಿಷಿನಲ್ಲಿಯೇ ಈ ನೀಚನು ನನ್ನನ್ನು ಚೆನ್ನಾಗಿ ಬೈದನು. ಆದ್ದರಿಂದ ನಾನವನಿಗೆ ಹೊಡೆಯಲು ಬಿದ್ದು ಬವಳಿಗೊಂಡನು ಎಂದನು. ನೀನನ್ನುವುದು ಸುಳ್ಳು ಎಂದು ಇನ್‌ಸ್ಪೆಕ್ಟರ್‌ನು ಪಾದ್ರಿಯನ್ನು ಒಂದು ಕೋಣೆಯಲ್ಲಿರಿಸಿರೆಂದು ಪೋಲೀಸರೊಡನೆ ಹೇಳಿದನು; ಮತ್ತು ಮೂರ್ಛೆಗೊಂಡ ವ್ಯಕ್ತಿಗೆ ಪ್ರಜ್ಞೆ ಬರು

ವಂತೆ ಶುಶ್ರೂಷೆ ಮಾಡಿರೆಂದು ಹೇಳಲು, ಒಬ್ಬ ಯಾಮಿಕನು ಪಾದ್ರಿಯನ್ನು ಕೋಣೆಗೆ ಕರೆದುಕೊಂಡು ಹೋಗಿ ಬಾಗಿಲು ಹಾಕಿ ಬಂದನು. ಪೋಲೀಸರೆಲ್ಲ ನೀರು ತಂದು ಸಿಟ್ಟಿನ ಮೋರೆಗೆ ಚಿಮುಕಿ ಗಾಳಿ ಹಾಕಲು ಪ್ರಾರಂಭಿಸಿದರಾದರೂ ಸಿಟ್ಟಿನಿಗೆ ಪ್ರಜ್ಞೆ ಬಂದಿರಲಿಲ್ಲ.

ಪಾದ್ರಿಯನ್ನು ಕೋಣೆಯೊಳಗೆ ಬಂಧಿಸಿಟ್ಟಿದ್ದರಷ್ಟೆ! ಆದರಾ ಕೋಣೆಯು ಜೈಲಿನ ಕೋಣೆಯಾಗಿರದೆ ಅದರಲ್ಲಿ ಕೆಲವು ಕುರ್ಚಿಗಳೂ, ಬೆಂಚುಗಳೂ ಇದ್ದುವು. ಅಲ್ಲದೆ ವಿದ್ಯುತ್ ದೀಪವೊಂದು ಉರಿಯುತಿತ್ತು. ಪಾದ್ರಿಯು ತನ್ನ ನಿಲುವಂಗಿ ಮತ್ತು ಇನ್ನಿತರ ಉಡುಪುಗಳನ್ನು ಕಳಚಿ ತಾನೀ ಮೊದಲು ತೊಟ್ಟುಕೊಂಡ ದೊಡ್ಡ ಕೃತಕ ಗಡ್ಡ, ಮೀಸೆಗಳನ್ನು ತೆಗೆದು ಸಣ್ಣ ಗಡ್ಡ ಮೀಸೆಗಳನ್ನಿಟ್ಟನು. ಫಕೀರರುಡುವ ಬಟ್ಟೆಯನ್ನು ಉಟ್ಟು ಒಬ್ಬ ಮುಸಲ್ಮಾನ ಫಕೀರನ ವೇಷ ಧರಿಸಿದನು. ಅವನು ಪಾದ್ರಿಯ ವೇಷದ ಉಡಿಗೆ ತೊಡಿಗೆಗಳನ್ನು ಬೇಗ್‌ನಲ್ಲಿ ಹಾಕಿ ಕೂಡಲೇ ಬೊಬ್ಬೆ ಹೊಡೆಯಲು ಪ್ರಾರಂಭಿಸಿ ಸತ್ತೆನು....ಸತ್ತೆನು ಬದುಕಿಸಿರಿ, ಎಂದು ಚೀರಿದನು. ಆಗ ಸಬ್ ಇನ್‌ಸ್ಪೆಕ್ಟರನು ಬಂದು ಇವನೇನು ಹುಚ್ಚನೇ ಎಂದು ಹೇಳುತ್ತಾ ಬಾಗಿಲು ತೆರೆದನು. ಅವನು ಬಾಗಿಲು ತೆರೆದು ಒಳಗೆ ನೋಡಲು ಪಾದ್ರಿಯಿರದೆ ಒಬ್ಬ ಮುಸಲ್ಮಾನ ಫಕೀರನಿದ್ದನು. ಆಗವನು ಇದೇನು ಸೈತಾನನೇ! ಎಂದುದ್ಗಾರ ಮಾಡಲು ಪೋಲೀಸರು ಬಂದು ಫಕೀರನನ್ನು ನೋಡಿ ಗಲಿಬಿಲಿಯಾದರು. ಒಬ್ಬ ಧೈರ್ಯಶಾಲಿಯಾದ ಪೋಲೀಸ್ ಇದೇನು ನಾನೀಗ ಕನಸಿನಲ್ಲಿರುವೆನೇ? ಎಂದು ಭ್ರಮಿಸಿ ಕಣ್ಣೊರಸಿ ಇದು ಕನಸಲ್ಲ, ನನಸು ಎಂದು ತಿಳಿದು ಪಾದ್ರಿ ಮಾಯವಾಗಿ ಫಕೀರ ಬಂದುದು ಹೇಗೆ? ಎಂದು ತರ್ಕಿಸಲಸಾಧ್ಯನಾಗಲು ಹೇಡಿಯಾದೊಬ್ಬ ಯಾಮಿಕನು ಫಕೀರನನ್ನು ಕಂಡು ಕಣ್ಣುಮುಚ್ಚಿದನು. ಎಲ್ಲರ ಭ್ರಮೆ ವಿಕಾರಗಳನ್ನು ಕಂಡು ಫಕೀರನು ಗಹಗಹಿಸಿ ನಕ್ಕನು. ಆಗಲಂತೂ ಸಬ್ ಇನ್‌ಸ್ಪೆಕ್ಟರನ ಅವಸ್ಥೆಯನ್ನೇನೆನ್ನಲ್ಲಿ!! ಇದು ನಿಶ್ಚಯವಾಗಿಯೂ ಪಿಶಾಚಿಯ ಆಟವಾಗಿರಬೇಕು. ಆದ್ದರಿಂದ ಮಂತ್ರವಾದಿಯಾದವನು ಜೋಯಿಸನನ್ನು ಬೇಗನೆ ಬರ ಹೇಳಿ; ಇಲ್ಲದಿದ್ದರೆ ಈ ಪಿಶಾಚಿಯು ನಮ್ಮನ್ನು ನಾಶಪಡಿಸೀತು ಎಂದವನು ತೊಳಲುತ್ತಾ ಪೋಲೀಸರೊಡನೆ ಹೇಳಿದನು. ಆಚಾರೆ ಆಗ ಹನುಮ ಜೋಯಿಸನ

ಮನೆಗೆ ಹೋಗುವವರಾರು? ಎಲ್ಲರೂ ಹಿಂದಾದಾಗ ಇನ್‌ಸ್ಪೆಕ್ಟರನವರನ್ನು ಗದರಿಸಲು ಅವರು ನಾಲ್ವರೂ ಹೊರಡಲನುವಾದರು. ಆಗ ಇನ್‌ಸ್ಪೆಕ್ಟರನು ನನಗೊಬ್ಬನಿಗೇ ಇಲ್ಲಿ ನಿಲ್ಲಲು ಸಾಧ್ಯವಿಲ್ಲ. ಇಬ್ಬರು ಹೋದರೆ ಸಾಕು, ಇಬ್ಬರು ಇಲ್ಲಿ ನಿಲ್ಲಲಿ ಎಂದನು. ಇನ್‌ಸ್ಪೆಕ್ಟರನ ಆಜ್ಞೆಯನ್ನು ಮೀರಿದರೆ ಅವನ ಬೆದರಿಕೆಗೆ ಗುರಿಯಾಗಬೇಕಾದೀತಲ್ಲಾ? ಅಥವಾ ಈಗ ಹೋದರೆ ದಾರಿಯಲ್ಲಿ ಇದೇ ಪಿಶಾಚಿ ಬಂದರೆ ನಮ್ಮನ್ನು ನಾಶಪಡಿಸಿತಲ್ಲಾ? “ಹಿಂದೆ ದರಿ ಮುಂದೆ ಹುಲಿ” ಎಂಬಂತವರು ಹೆದರುತ್ತಾ ಹೋದರು. ಇಬ್ಬರು ಪೋಲೀಸರು ಹನುಮ ಜೋಯಿಸರ ಮನೆಯ ಕಡೆಗೆ ಹೋದರು. ವಾಚಕರ! ಪಾದ್ರಿ ವೇಷಧರಿಸಿದವನು ಈಗ ಫಕೀರನಾದವನು ಯಾರೆಂದು ತಿಳಿಯಲು ನೀವೀಗ ಆತುರಪಟ್ಟಿರಬಹುದು. ಅವನೇ ಇವನು; ಅಂದರೆ ಪತ್ತೆದಾರಿಯಾದ ಕರಮಚಂದನು ಇನ್ನು ಇನ್‌ಸ್ಪೆಕ್ಟರನನ್ನು ಹೆಚ್ಚಾಗಿ ಬೆದರಿಸುವುದು ಬೇಡವೆಂದು ಕರಮಚಂದನು ನಗುತ್ತಾ ಒಂದು ಕಾರ್ಡ ಕೊಟ್ಟನು. ಇನ್‌ಸ್ಪೆಕ್ಟರನು ಭಯದಿಂದ ಗಡಗಡನೆ ನಡುಗುತ್ತಾ ಆ ಕಾರ್ಡನ್ನೆತ್ತಿ ಮೆಲ್ಲನೆ ಕಣ್ಣನ್ನು ಹೊರಳಿಸಿ ಅದರಲ್ಲೇನು ಬರೆದಿದೆ? ಎಂದು ನೋಡಿದನು. ಅದರಲ್ಲಿದ್ದುದನ್ನು ನೋಡಿ ಇನ್‌ಸ್ಪೆಕ್ಟರನು ಕೂಡಲೇ ಕೋಣೆಯೊಳಗೆ ಹೋಗಿ ಫಕೀರನನ್ನು ತಬ್ಬಿಕೊಂಡನು. ಆಗ ಅಲ್ಲಿದ್ದ ಪೋಲೀಸರವಸ್ಥೆಯನ್ನು ಬಣ್ಣಿಸಲಸಾಧ್ಯ!!! ಇಷ್ಟುರವರೆಗೆ ಸೈತಾನ್ ಎಂದು ಹೇಳಿ ಆ ಪಿಶಾಚಿಗೆ ನಡುಗುತ್ತಿದ್ದ ಆ ಇನ್‌ಸ್ಪೆಕ್ಟರನು ಪಿಶಾಚಿಯ ಸಮೀಪಕ್ಕೆ ಹೋಗಿ ಅದನ್ನು ತಬ್ಬಿಕೊಂಡನಲ್ಲವೆ? ಅಯ್ಯೋ, ಪಿಶಾಚಿಯೇ ಎಂದು ಬೊಬ್ಬೆಹೊಡೆಯಲು ಪ್ರಯತ್ನಿಸಿದರೂ ಭಯದಿಂದ ಅವರ ಬಾಯಿಂದ ಒಂದಕ್ಷರವಾದರೂ ಹೊರಡಲಿಲ್ಲವೆನ್ನುವಾಗ ಅವರೆಷ್ಟು ಭೀತಿಗೊಂಡಿದ್ದರೆಂದು ವಾಚಕರೇ ಊಹಿಸಲು ಸಮರ್ಥರು.

ಪೋಲೀಸರ ಅವಸ್ಥೆಯನ್ನು ಕಂಡು ಸಬ್ ಇನ್‌ಸ್ಪೆಕ್ಟರ್‌ನು ಅವರನ್ನು ಪರಿಹಾಸ್ಯಮಾಡಲಿಕ್ಕಾಗಿ ಎಲೆ ಮಂಕುಗಳಿರಾ! ನೀವೇತಕ್ಕೆ ಬೆದರುವಿರಿ? ಇವರೇ ಪತ್ತೆದಾರಿ ಪ್ರಮುಖರಾದ ಕರಮಚಂದರು ಎಂದನು. ಕರಮಚಂದನೆಂದು ಗೊತ್ತಾದೊಡನೆ ಯಾವಿಕರು ಅವನ ಅದ್ಭುತ ಚಮತ್ಕಾರ ಕಂಡು ಬೆರಳುಕಚ್ಚಿದರು. ನೀವಿನ್ನು ಬೆದರಬೇಡಿರಿ ಎಂದು ಇನ್‌ಸ್ಪೆಕ್ಟರನು ಹೇಳುತ್ತಿರಲು, ಕರಮಚಂದನು ಇನ್‌ಸ್ಪೆಕ್ಟರ್‌ರೆ! ನೀವೇಕೆ ಮೊದಲು

ಬಿದಂದಿ? ಒಡೆಯರಾದ ನೀವು ಮೊದಲೇ ಭಯಗೊಂಡದುದರಿಂದ 'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ನಿಮ್ಮ ಸೇವಕರೂ ಭೀತಿ ಗೊಂಡರು. ಇದರಲ್ಲಿ ಆಶ್ಚರ್ಯವೇನು? ಎಂದನು. ಇನ್‌ಸ್ಪೆಕ್ಟರ್‌ನಾಗ ನಾಚಿಗೊಳ್ಳುತ್ತ ನಿಮ್ಮ ವೇಷ ಪಲ್ಲಟಿಸುವ ಚಮತ್ಕಾರವು ಬಹಳ ಅಪೂರ್ವ ವಾಗಿದೆಯೆಂದನು. ಅಷ್ಟರಲ್ಲಿ ಹನುಮಜೋಯಿಸನ ಮನೆಗೆ ಹೋದ ಪೋಲೀಸರು ಭಯದಿಂದ ಥರಗುಟ್ಟುತ್ತ ಬರುತಿದ್ದರು. ಸ್ಟೇಷನಿನಲ್ಲಿ ನಗೆಯ ಶಬ್ದವು ಕೇಳಿಸುತ್ತಿರಲಾ ಯಾಮಿಕರು ಅಲ್ಲಿದ್ದ ಪೋಲೀಸರೊಡನೆ ಪಿಶಾಚಿ ಓಡಿಹೋಯಿತೆ? ಎಂದು ಕೇಳಲವರು ನಗೆದಾಡಿದರು ಫಕೀರ ವೇಷಧಾರಿಯಾದ ಪತ್ತೆದಾರಿಯು ನಿಮ್ಮ ಮಂತ್ರವಾದಿಯಾದ ಹನುಮ ಜೋಯಿಸನೆಲ್ಲಿ? ಎಂದು ಕೇಳಲವರು ಪಿಶಾಚಿಯು ಹೋಗಲಿಲ್ಲವಲ್ಲಾ!! ಇವರೆಲ್ಲ ನಗೆದಾಡುತ್ತಿರುವುದೇತಕ್ಕೆ? ಎಂದಾಶ್ಚರ್ಯಪಡಲು ಪುನಃ ಫಕೀ ರನು ಅದೇ ಪ್ರಶ್ನೆಯನ್ನು ಕೇಳಲು ಅದುದಾಗಲಿ; ಎಂದವರು ಧೈರ್ಯ ಪಟ್ಟು ಮಂತ್ರವಾದಿಯು ಈಗ ಮನೆಯಲಿಲ್ಲ ಅವನು ಮಡಿಕೇರಿಗೆ ಹೋಗಿ ರುವನಂತೆ. ನಾಳೆ ಬೆಳಿಗ್ಗೆ ಬರಲಿಕ್ಕಿರುವನು ಎಂದರು. ಹಾಗಾದರೆ ನನ್ನನ್ನ ಟ್ಟೈಲವನು ನಾಳೆ ಇಲ್ಲಿಗೆ ಬರುವನೇ? ಎಂದು ಕೇಳಲು ನಾವೇನೂ ಹೇಳ ಲಿಲ್ಲವೆಂದರು. ಆಗ ಉಳಿದಿಬ್ಬರು ಪೋಲೀಸರು ಮಂತ್ರವಾದಿಯನ್ನು ಕರೆತರಲು ಹೋದ ಗಸ್ತಿನವರೊಡನೆ ನಿಜಸಂಗತಿಯನ್ನರುಹಿದಾಗ ಆಗ ಬಂದ ಯಾಮಿಕರ ಕೋಲಾಹಲವು ಮಾಯವಾಯಿತು. ಫಕೀರ ವೇಷ ಧಾರಿಯಾದ ಕರಮುಜಂದನು ಇನ್‌ಸ್ಪೆಕ್ಟರ್‌ನೊಡನೆ ನಾನೀಗಲೇ ಇನ್ನೊಬ್ಬ ಕಳ್ಳನನ್ನು ಹಿಡಿಯಲು ಹೋಗಬೇಕಾಗಿದೆಯೆಂದಂದು ಈ ನೀಚನು ಸ್ಮೃತಿಗೆ ಬಂದ ಮೇಲೆ ಫರಾರಿಯಾಗದಂತೆ ಎಚ್ಚರದಿಂದ ನೋಡಿಕೊಳ್ಳಲು ಪೋಲೀಸರೊಡನೆ ಹೇಳಬೇಕೆಂದು ಹೇಳಿ ಅಲ್ಲಿಂದ ಹೊರಟು ಹೋದನು.

ಗೆಳೆಯ ಪಿಟ್ಟನು ಅಪರಿಚಿತನಾದ ಯಃಕಶ್ಚಿತ್ ಪಾದ್ರಿಯೊಬ್ಬ ನಿಗೆ ದಾರಿತೋರಿಸಲು ಹೋದುದು ಜೊಸೆಫ್‌ನಿಗೆ ಇಷ್ಟವಿರಲಿಲ್ಲ. ಆದರಲ್ಲಿ ಯೂ ಬೇಗನೆ ಒಡವೆಗಳನ್ನು ಮಾರಾಟ ಮಾಡದಿದ್ದರೆ ಗುಪ್ತಚಾರರಾಗಲಿ, ಪೋಲೀಸರಾಗಲೀ ಸಂಶಯದ ಮೇಲಿನಿಂದ ತಮ್ಮನ್ನು ಹಿಡಿದರೆ ಮುಂದಿನ ಗತಿಯೇನು? ಎಂದವನು ಚಿಂತಿಸುತಿದ್ದನು. ಪಿಟ್ಟನು ಹೋಗಿ ಸುಮಾರು ಒಂದು ತಾಸು ಕಳೆಯಲು ಅವನು ಒಂದು ಸಿಗರೇಟ್ ಹೊತ್ತಿಸಿ ಸೇದ

ಪ್ರಾರಂಭಿಸಿದನು. ಸಿಗರೇಟಿನ ಹೊಗೆಯು ಸುರುಳಿಸುತ್ತುತ್ತಿರುವಾಗ ಹೋಗು ತ್ತಿದ್ದಂತೆ ಅವನ ವಿಚಾರ ತರಂಗಗಳು ಒಂದರಮೇಲೊಂದರಂತೆ ಬಿಡು ವಿಲ್ಲದೆ ಉದ್ಭವಿಸಿದುವು ಪಿಟ್ಟಿನೆಲ್ಲಿಯಾದರೂ ಅಚಾತುರ್ಯದಿಂದ ಪೋಲೀಸರ ಕೈಗೆ ಸಿಲುಕಿದನೆ? ಎಂದು ಅಥವಾ ಆ ಪಾದ್ರಿಯೇ ಒಂದು ವೇಳೆ ಛದ್ಮವೇಷಧಾರಿಯಾದ ಕರಮುಚಂಡನೋ? ಎಂದು ನಾನಾ ವಿಧ ವಾಗಿ ಶಂಕಿಸಲಾರಂಭಿಸಿದನು. ಕರಮುಚಂಡನು ಕಪಟೋಪಾಯದಿಂದ-ವೇಷಾಂತರದಿಂದ ಬಂದಿದ್ದರೆ? ಎಂದು ಅವನು ಆಲೋಚಿಸುತ್ತಿರಲು ಮೊದಲೇ ಅವನು ಅವನ ಅದ್ಭುತ ಪರಾಕ್ರಮವನ್ನು ಕೇಳಿ ಅರಿತಿದ್ದುದ ರಿಂದ ಮನಸ್ಸಿನಲ್ಲಿ ಭಯಗೊಂಡನು. ಪ್ರಚಂಡವಾದ ಸಮುದ್ರದ ನೀರು ಅತಿ ಭಯಂಕರವಾದ ಸುಳಿಗಾಳಿಯಿಂದ ಕೂಡಿದ ಬಿರುಗಾಳಿಯ ಪೆಸೆ ಯಿಂದ ಅಸ್ತವ್ಯಸ್ತವಾಗಿ ಅಲ್ಲೋಲಕಲ್ಲೋಲವಾಗುವಂತೆ ಅತಿ ಕ್ರೂರವಾದ ಬಲಿಷ್ಠವಾದ ಜೊಸೆಫ್‌ನ ಹೃದಯವು ತಲ್ಲಣಿಸಿತು. ಅವನು ಮನಸ್ಸಿ ನಲ್ಲಿಯೇ ಮಿತ್ರನಾದ ಲೋಬೋನು ಅತಿ ಸಾಹಸಿಯಾದ ಚಾತುರ್ಯವೇ ಮೂರ್ತಿಮತ್ತಾಗಿ ಜನ್ಮವೆತ್ತಿದ ಅದ್ಭುತ ಬುದ್ಧಿಸಾಮರ್ಥ್ಯಗಳುಳ್ಳ ವ್ಯಕ್ತಿ ಯೇನೋ ನಿಜ; ಆದರೆ ಕರಮುಚಂಡನು ಯಾವ ರೀತಿಯಲ್ಲಿಯೂ ಇವನಿ ಗಿಂತ ಕೀಳೆನಿಸಲಿಕ್ಕಿಲ್ಲ. ಅದಲ್ಲದೆ ನ್ಯಾಯ ಅನ್ಯಾಯ; ಸತ್-ಅಸತ್ ಇವುಗಳಲ್ಲಿ ಅನ್ಯಾಯ ಮಾಡುವಾತನು ಎಷ್ಟೇ ಬಲಿಷ್ಟನಿರಲಿ ಅವರೂ ನ್ಯಾಯಪಕ್ಷವೇ ಜಯ ಹೊಂದುವುದೆಂಬುದು ನಿರ್ವಿವಾದ. ರಾವಣನು ಘೋರ ತಪಸ್ಸು ಮಾಡಿ ವರಗಳನ್ನು ಪಡೆದು ಬಲವಂತನಾದರೂ ಅನ್ಯಾಯ ಅಸತ್ ಇವುಗಳನ್ನಾಚರಿಸಿದುದರಿಂದ ನಾಶವಾಗಲಿಲ್ಲವೆ! ಭಸ್ಮಾಸುರನೂ ಕೂಡ ತನ್ನ ಪಾಪಕೃತ್ಯದಿಂದಲಾಗಿ ತನ್ನಿಂದ ತಾನೇ ಅವಸಾನ ಹೊಂದಿದ ನಲ್ಲವೆ? ಹೇಗೂ ಇರಲಿ. ಅತಿ ಪ್ರಬಲನಾದ ಕರಮುಚಂಡನು ಈ ಮಂಗ ಳೂರಿನಲ್ಲಿರುವ ವರೆಗೆ ನಾವು ಮುಳ್ಳಿನ ಮೇಲಿದ್ದಂತೆ ಅಥವಾ ಹಸಿದ ಹೆಬ್ಬು ಲಿಯ ಗೂಡಿನಲ್ಲಿದ್ದಂತೆ ಎಂಬುದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದ ನಾವು ಎಚ್ಚರದಿಂದಿರಬೇಕು. ಆ ತಿಳಿಗೇಡಿಯಾದ ಪಿಟ್ಟನಿನ್ನೂ ಬರ ಲಿಲ್ಲವಲ್ಲಾ!! ಏನೆಲ್ಲ ಅನಾಹೂತವು ಈ ಅರೆಕ್ಷಣದಲ್ಲಿ ಜರಗಿತೋ ಬಲ್ಲವ ರಾರು?ಎಂದು ಚಿಂತಿಸುತಿದ್ದನು ಮತ್ತೂ ಅರ್ಧಗಂಟೆ ಕಳೆಯಿತು ಪಿಟ್ಟನ ಸುದ್ದಿಯೇ ಇಲ್ಲ. ಆ ಮಾರಿ ಹಿಡಿದ ಪಾದ್ರಿಯು ತನ್ನ ಅಕ್ಕರೆಯ ಸ್ನೇಹಿ

ತನನ್ನೆಲ್ಲಿ ಆಪಾಯುಕ್ತೀಡು ಮಾಡಿದನೋ? ಎಂದು ಹಂಬಲಿಸುತ್ತಾ ಕಡೆಗೆ ಪಿಟ್ಟನನ್ನು ಹುಡುಕಲು ಮಣ್ಣುಗುಡ್ಡೆಯ ಚರ್ಚಿನ ಮಾರ್ಗದಲ್ಲಿ ಹೋಗಲು ಕುಳಿತಲ್ಲಿಂದೆದ್ದನು.

ಜೊಸೆಫ್‌ನು ಇನ್ನೇನು ಹೊರಟನು, ಎನ್ನುವಷ್ಟರಲ್ಲಿ ವಿದ್ಯುತ್ ದೀಪದ ಮಂದಪ್ರಕಾಶದಲ್ಲಿ ಯಾರೋ ಬರುತ್ತಿರುವುದನ್ನು ಕಂಡ. ಪಿಟ್ಟನೇ ಬಂದನೆಂದೂಹಿಸಿ ಜೊಸೆಫ್‌ನು ಎಷ್ಟುಹೊತ್ತಾಯಿತೋ ಮಹಾರಾಯ ನೀನೆಲ್ಲಿಂದ ಹೋಗಿ? ಹೆಣಕಾಯುವಂತೆ ಕಾದು ಕಾದು ನನಗೆ ಬೇಸರ ಬಂದು ನಿನ್ನನ್ನು ಹುಡುಕಲು ನಾನು ಹೊರಡುವಷ್ಟರಲ್ಲಾದರೂ ಬಂದೆಯಾ ಪುಣ್ಯಾತ್ಮಾ! ಎಂದು ಹೇಳಿ ಇನ್ನು ಏನನ್ನೊ ಹೇಳಲು ಪ್ರಾರಂಭಿಸಿದನು; ಆದರೆ ಅವನ ಊಹೆಯು ಹುಸಿಯಾಗಿ ಫಕೀರನು ಅವನ ಹತ್ತಿರ ಬಂದಾಗ ಪುನಃ ಅವನು ಚಿಂತಾಸಾಗರದಲ್ಲಿ ಮುಳುಗಿದನು: ಆದರೆ ಹಾಗೆ ಚಿಂತಾ ಸಾಗರದಲ್ಲಿ ಮುಳುಗುತ್ತಲೂ ಏಳುತ್ತಲೂ ತೇಲಾಡಲು ಫಕೀರನು ಬಿಡಲಿಲ್ಲ. ಅವನು ಎಲೆ ನೀಚನೇ! ನಾನು ಹೇಳಿದಂತೆ ನನ್ನೊಡನೆ ಬಾ ಇಲ್ಲವಾದರೆ ನಿನ್ನನ್ನೀಗಲೇ ಯಮಸದನಕ್ಕಟ್ಟುವೆನು ಎಂದು ಹೇಳುತ್ತಾ ಪಿಸ್ತೂಲನ್ನು ತೆಗೆದು ಜೊಸೆಫ್‌ನ ಎದೆಗೆ ಗುರಿಹಿಡಿದು ನಿಂತುಕೊಂಡನು ಫಕೀರನನ್ನು ಕಂಡು ಮತ್ತವನ ಮಾತನ್ನು ಕೇಳಿ ಜೊಸೆಫ್‌ನು ಎಲೆ ಫಕೀರನೆ! ನೀನಾರು? ಎಲ್ಲಿಯೋ ಮಸೀದಿಯ ಮೂಲೆಯಲ್ಲಿ ಕುಳಿತು 'ಖುರಾನ್' ಓದುತ್ತಿರುವ ಬದಲು ನನ್ನಗೊಡವೆಗೇಕೆ ಬರುವೆ? ಎಂದು ಗರ್ಜಿಸಿದನು ಅವನು ಇವನಾರೋ ನಾಡಾಡಿ, ಉಂಡಾಡಿ ಫಕೀರನೆಂದೂಹಿಸಿದ್ದನೇ ಹೊರತು ಪತ್ತೆದಾರಿ ಕರಿಮುಖಿಂದನೇ ತನ್ನೆದುರು ನಿಂತಿರುವನೆಂದು ಸ್ವಲ್ಪ ಸಹಾ ತಿಳಿಯಲಿಲ್ಲ ಫಕೀರನು ಪಿಸ್ತೂಲನ್ನು ಹಿಡಿದುಕೊಂಡಿದ್ದುದರಿಂದ ಥಕ್ಕನೆ ಅವನ ಮೈಗೆ ಕೈಹಾಕಲು ಜೊಸೆಫ್‌ನಿಗೆ ಧೈರ್ಯಉಂಟಾಗಲಿಲ್ಲ. ಅವನು ಪಿಸ್ತೂಲನ್ನು ಫಕೀರನ ಕೈಯಿಂದ ತಪ್ಪಿಸಲು ಹವಣಿಸುತ್ತ ನಾನು ನಿನ್ನೊಡನೆ ಬರುತ್ತೇನೆ, ನೀನು ಮುಂದೆ ಹೋಗೆಂದು ಹೇಳಿ ಅವನ ಪಿಸ್ತೂಲನ್ನು ಹಿಡಿದೆಳೆಯಲು ಕೈಯೆತ್ತಿದನು. ಚಾಣಾಕ್ಷರಲ್ಲಿ ಅಗ್ರೇಸರನಾದ ಕರಿಮುಖಿಂದನು ಜೊಸೆಫ್‌ನು ಪಿಸ್ತೂಲಿನ ಹತ್ತಿರ ಕೈತರುವುದಕ್ಕಿಂತ ಮೊದಲೇ ಪಿಸ್ತೂಲನ್ನು ಕೆಳಗಡೆಗೆ ತಗ್ಗಿಸಲು ಜೊಸೆಫ್‌ನ ಪ್ರಯತ್ನವು ನಿಷ್ಫಲವಾಗಲು ಇನ್ನಿವನನ್ನು ಈ ರೀತಿ ಬಿಟ್ಟರಾಗದೆಂದು ಅವನು

ಫಕೀರನ ಕುತ್ತಿಗೆ ಹಿಡಿಯಲು ಮುಂದಾದನು. ಈ ಸಲವೂ ಅವನ ಪ್ರಯತ್ನವು ಸಫಲವಾಗದಿರಲು ಇವನು ಸಾಧಾರಣ ಫಕೀರನಲ್ಲ. ಸ್ತ್ರೈ ಜಳಕವುಳ್ಳ ಮತ್ತು ಚಾತುರ್ಯವುಳ್ಳ ವ್ಯಕ್ತಿಯೆಂದು ತಿಳಿದು ಜೋಸೆಫ್‌ನು ಕಾಲಿನಿಂದವನ ಕಾಲಿಗೆ ಹೊಡೆಯಲು ಪ್ರಯತ್ನಪಡಲು ಫಕೀರ ವೇಷಧಾರಿಯಾದ ಪತ್ತೇದಾರಿಯು ಪಿಸ್ತೂಲಿನಿಂದ ಜೋಸೆಫ್‌ನ ಕಾಲಿಗೆ ಹೊಡೆದನು. ಪೆಟ್ಟು ಚೆನ್ನಾಗಿ ಬಿದ್ದುದರಿಂದ ಅವನು ಕುಸಿದು ಬೀಳಲು ಕರಮುಚಂದನು ಅವನನ್ನು ಎತ್ತಿ ಹಿಡಿದು 'ದರದರನೆ' ಎಳೆಯುತ್ತಾ ಮಾರ್ಗದಲ್ಲಿ, ಹೋಗಲು, ಜೋಸೆಫ್‌ನು ಭುಸಭುಸನೆ ಭುಸುಗುಟ್ಟುತ್ತಾ ತನ್ನ ಅಶಕ್ತತೆಗಾಗಿ ಮರುಗುತ್ತಾ ಹಾವಾಡಿಗನ ಕೈಗೆ ಸಿಕ್ಕಿದ ಘೋರ ಘಟ ಸರ್ಪದಂತೆ ಸಿಟ್ಟುಗೊಂಡಿದ್ದರೂ ಬೂದಿ ಮುಚ್ಚಿದ ಕೆಂಡದಂತೆ ಸುಮ್ಮನಾಗಿ ಫಕೀರನು ಎಳೆದುಕೊಂಡು ಹೋಗುವಲ್ಲಿಗೆ ಹೋದನು.

ಕರಮುಚಂದನು ಪೋಲೀಸ್ ಸ್ಟೇಷನ್‌ನಿಂದ ಮರಳಿ ಹತ್ತು ಹದಿನೈದು ನಿಮಿಷ ಕಳೆಯಲು ಪಿಟ್ಟನಿಗೆ ಎಚ್ಚರವಾಯಿತು. ಆಗ ಇನ್‌ಸ್ಪೆಕ್ಟರನು ಅವನನ್ನು ಚೆನ್ನಾಗಿ ಕಾವಲು ಮಾಡುವಂತೆ ಪೋಲೀಸರಿಗೆ ಆಜ್ಞಾಪಿಸಿ ಜಗಲಿಯಲ್ಲಿ ತಿರುಗಾಡುತಿದ್ದನು. ಪತ್ತೆದಾರಿ ಜೋಸೆಫ್‌ನನ್ನು ಠಾಣೆಗೆ ಕರಕೊಂಡು ಬರುವಾಗ ನಟ್ಟಿರುಳಾಗಿತ್ತು. ಇವರೀರ್ವರನ್ನು ಜೈಲಿನಲ್ಲಿಡಿರೆಂದು ಇನ್‌ಸ್ಪೆಕ್ಟರ್‌ನೊಡನೆ ಹೇಳಿ ಪತ್ತೇದಾರಿಯು ಇನ್ನು ಚೋರರ ವಿಷಯ ನಾಳೆ ವಿಚಾರ ಮಾಡುವ ಎಂದು ಹೇಳಿ ತನ್ನ ಮನೆಗೆ ಹೊರಟು ಹೋದನು. ಅವನು ಹೋದ ಮೇಲೆ ಸಬ್ ಇನ್‌ಸ್ಪೆಕ್ಟರನು ಪಿಟ್ಟನೊಡನೆ ಜೋಸೆಫನ ಕಡೆಗೆ ಕೈತೋರಿಸಿ ಇವನದು ನಿನಗೆ ಗುರುತು ವಿದೆಯೇ ಎಂದು ಕೇಳಲು, ಪಿಟ್ಟನು ಇಲ್ಲವೆಂದು ಗೋಣನ್ನಲ್ಲಾಡಿಸಿದನು. ಅನಂತರ ಠಾಣೆಯ ಹತ್ತಿರವಿರುವ ಸಣ್ಣ ಜೈಲಿನಲ್ಲಿ ಬೇರೆ ಬೇರೆ ಕೋಣೆಗಳಲ್ಲಿ ಪಿಟ್ಟ ಮತ್ತು ಜೋಸೆಫ್‌ರನ್ನು ಬಂಧಿಸಿ ಇಬ್ಬರು ಕಾವಲುಗಾರರನ್ನಾಗಿ ಪೋಲೀಸರನ್ನು ನೇಮಿಸಿ ಇನ್‌ಸ್ಪೆಕ್ಟರನು ಮನೆಗೆ ತೆರಳಿದನು. ಪೋಲೀಸರು ಕೈದಿಗಳನ್ನು ಬಂಧಿಸಿ ಕೋಣೆಗಳಿಗೆ ಬಾಗಿಲು ಹಾಕಿ ಬಲವಾದ ಬೀಗಗಳನ್ನಿಕ್ಕಿ ಕೈದಿಗಳು ತಪ್ಪಿಸದಂತೆ ಕಾವಲು ಮಾಡುತ್ತಿದ್ದರು.

೦೦ ೦೦ ೦೦ ೦೦

ಪಿಟ್ಟನ ಕೋಪವು ವಡವಾನಲದಂತೆ ಉರಿಯುತಿತ್ತು; ಆದರೆ ವಡವಾನಲವು ಸಮುದ್ರದಲ್ಲಿ ಮುಳುಗಿದ್ದುದರಿಂದ ಪ್ರಚಂಡವಾಗಿ ಉರಿಯು ತ್ತಿದ್ದರೂ ಹೇಗೆ ಹೆಚ್ಚಿನ ಕಾಠಿಣ್ಯವನ್ನು ಹೊರಸೂಸಲು ಅಸಮರ್ಥವಾಗಿ ದ್ದಿತೋ ಅದೇ ರೀತಿಯಲ್ಲಿ ಬಂದಿಯಾಗಿ ಕಾವಲುಗಾರರಿಂದ ಕಾಯಲ್ಪ ಡುತ್ತಾ ಇದ್ದ ಕೋಪಾಗ್ನಿಯು ಉರಿದು ಏನೂ ಮಾಡಲು ಸಾಮರ್ಥ್ಯ ವಿಲ್ಲದೆ ತನ್ನಲ್ಲೇ ಶಾಂತವಾಗುತಿತ್ತು. ಹೇಗಾದರೂ ಮಾಡಿ ಈ ದಿನವೇ ಬಂಧನದಿಂದ ಫರಾರಿಯಾಗಬೇಕೆಂದು ಅವನು ಬದ್ಧಕಂಕಣನಾದನು. ಆವನಾಗಿನ ಮುಖವನ್ನು ನೋಡಿದರೆ ಅವನ ಕಣ್ಣುಗಳೆರಡೂ ಕಿಚ್ಚಿನ ಕೆಂಡಗಳೋ ಎಂದು ಭ್ರಾಂತಿಯುಂಟಾಗುತಿತ್ತು. ಪತ್ತೆದಾರಿಯು ಕಬ್ಬಿಣದ ಸಲಾಕೆಯಿಂದ ತಲೆಗೆ ಜೊಡೆದಿದ್ದುದರ ಆಪಘಾತದಿಂದಲಾಗಿ ಸ್ವಲ್ಪ ನಿಃಶಕ್ತನಾಗಿದ್ದರೂ ಕ್ರೋಧದಿಂದ ಮತ್ತನಾಗಿ ಹಸಿದ ಹೆಬ್ಬುಲಿಯಂತೆ ಗರ್ಜಿಸುತ್ತಾನೆಯೋ ಎಂಬಂತೆ ಬಿಸಿಯುಸಿರನ್ನು ಬಿಡುತಿದ್ದನು. ಸಂತಾ ಪದಿಂದಲೂ ದುಃಖದಿಂದಲೂ ಕೂಡಿದ ಆವನ ಉಡಿಗೆ-ತೊಡಿಗೆಗಳು ಮಲಿನ ವಾಗಿದ್ದು ಆಸ್ತವ್ಯಸ್ತವಾಗಿದ್ದುವು. ಅವನಾಗಿನ ಆಕರಾಳ ವಿಕರಾಳ ರೂಪ ವನ್ನು ಸಣ್ಣ ಮಕ್ಕಳಾದರೂ ಕಂಡಿದ್ದರೆ ಭಯದಿಂದ ಚಿಟ್ಟನೆ ಚೀರಿ ನಿಶ್ಚಯವಾಗಿಯೂ ಹಾಸಿಗೆ ಹಿಡಿಯುತಿದ್ದರೆಂಬುದರಲ್ಲಿ ಸಂಶಯವೇ ಇಲ್ಲ. ಜೊಸೆಫನು ಇಷ್ಟೆಲ್ಲ ವಿಪತ್ಪರಂಪರೆಗಳು ಬಂದುದು ಈ ಪಿಟ್ಟ ನಿಂದಲಾಗಿ ಎಂದು ಅವನ ಮುಂದ ಬುದ್ಧಿಗಾಗಿ ಪಿಟ್ಟನನ್ನು ತಿರಸ್ಕರಿಸಿ ದನು. ಇನ್ನು ನಮ್ಮ ಅವಸ್ಥೆಯು ಸಿಂಹದ ಗುಹೆಯೊಳಗೆ ಹೊಕ್ಕ ಹರಿಣದಂತೆಯೂ ಆನೆಯ ಸೊಂಡಿಲಿಗೆ ಸಿಕ್ಕಿದ ಕದಲೀ ಬಾಳೆಯಂ ತೆಯೂ ಆಯಿತೆಂದವನು ನಂಬಿ ಪಶ್ಚಾತ್ತಾಪ ಪಡುತಿದ್ದನು. ಎಲ್ಲಿಯಾ ದರೂ ಬ್ರಹ್ಮನು ತನ್ನ ತಲೆಯಲ್ಲಿ ಈ ಬಂಧನದಿಂದ ಬಿಡುಗಡೆಯಾಗು ವಂತೆ ಬಲವಾದ ಒನಕೆಯಿಂದ ಒರೆದಿದ್ದರೆ ನಾನಿನ್ನು ಈ ಚೋರ ವೃತ್ತಿಯನ್ನು ಬಿಟ್ಟು ಎಲ್ಲಾದರೂ ಪರ ಊರಿಗೆ ಹೋಗಿ ಯಾವುದಾದ ರೊಂದು ಸ್ವತಂತ್ರ ವೃತ್ತಿಯನ್ನವಲಂಬಿಸಿ ಜೀವನವನ್ನು ಸಾಗಿಸುವೆ ನೆಂದು ಅನೇಕ ಪ್ರಕಾರವಾಗಿ ಕನಸಿನಲ್ಲಿ ಮುಂಡಿಗೆ ತಿಂದಂತೆ ಏನೇನೋ ಗಾಳಿಗೋಪುರ ಕಟ್ಟುತಿದ್ದನು.

ಗಂಭೀರವಾದ ಕಾರಿರುಳು. ಜನ ಸಮುದಾಯವೆಲ್ಲ ಗಾಢ ನಿದ್ರೆ

ಯಿಂದ ಪೆಟ್ಟಿ ಮುಚ್ಚಿದ್ದಿತು. ಅಲ್ಲಲ್ಲಿ ಅಸ್ವಸ್ಥದವರು ಅಥವಾ ಮುಪ್ಪಿನಿಂದ ವೃದ್ಧರಾದವರು ನಿದ್ರೆ ಬಾರದೆ ಆಗಾಗ ಕೆಮ್ಮುತ್ತಿರಲು ಶಾಂತವಾತಾವರಣದಲ್ಲಿ ಪ್ರತಿಧ್ವನಿಯುಂಟಾಗುತಿತ್ತು. ಹೆಚ್ಚೇನು ಹೇಳಲಿ ? ಎಲ್ಲೆಲ್ಲೂ ನಿಃಶಬ್ದ ! ನೀರವ ! ! ಸಾಧಾರಣ ರಾತ್ರಿ ಎರಡು ತಾಸಾಗಿರಬಹುದು ಕೈದಿಗಳನ್ನು ಕಾಯುತ್ತಿದ್ದ ಪೋಲೀಸರು ನಿದ್ರೆ ತೂಕಡಿಸುತ್ತಿರಲು ತಮ್ಮ ತಮ್ಮೊಳಗೆ ಈ ರೀತಿ ಮಾತನಾಡಿಕೊಂಡರು. ಮೊದಲನೆಯವನು ಎರಡನೆಯವನ ಹತ್ತಿರ ನೀನು ಸ್ವಲ್ಪ ಸಮಯ ಚೆನ್ನಾಗಿ ನಿದ್ರಿಸು; ಆಗ ನಾನು ಕಾವಲು ಮಾಡುತ್ತೇನೆ. ಅನಂತರ ನೀನು ಜಾಗ್ರತೆಯಿಂದ ಕಾವಲು ಮಾಡುತ್ತಿರಲು ನಾನು ನಿದ್ರಿಸುವೆನೆಂದನು. ಅದಕ್ಕೆ ಆ ಯಾಮಿಕನು ಒಪ್ಪಿ ಆ ಕಟ್ಟಡದ ಜಗಲಿಯಲ್ಲಿ ಮಲಗಿಕೊಂಡನು. ಹತ್ತು ನಿಮಿಷಗಳಲ್ಲಿ ನಿದ್ರಾದೇವಿಯು ಅವನನ್ನಪ್ಪಿಕೊಳ್ಳಲು, ಅವನು ಗಾಢ ನಿದ್ರೆಯಿಂದ ಗೊರಕೆ ಹೊಡೆಯಲಾರಂಭಿಸಿದನು. ಪಿಟ್ಟನು ಎಚ್ಚರಿಕೆಯಿಂದಲೇ ಇದ್ದುದರಿಂದ ಕಾವಲುಗಾರರ ಮಾತನ್ನು ಕೇಳಿದ್ದನು. ಎರಡನೆಯವನು ಮಲಗಿ ನಿದ್ರೆ ಬಂದು ಗೊರಕೆ ಹೊಡೆಯುತ್ತಿರಲು ಪಿಟ್ಟನು ಮೊದಲನೆಯವನೊಡನೆ ಹೀಗೆಂದನು. ಕಾವಲುಗಾರನೇ ! ನೀನು ಈ ರೀತಿ ರಾತ್ರಿ ಇಡೀ ನಿದ್ದೆಗೆಟ್ಟು ಪ್ರತಿ ದಿವಸವೂ ಹೇಗೆ ಕಾವಲು ಮಾಡುತ್ತಿರುವೆ ? ಆಗ ಅವನು ನಾನು ಹೆಚ್ಚು ನಿದ್ರೆ ಬರಲು ಪ್ರಾರಂಭಿಸಿದಾಗ ನಸ್ಯವನ್ನೆಳೆಯುತ್ತಿರುವೆನು. ಆಗ ನಿದ್ರೆ ತೊಲಗಿ ಹೋಗುತ್ತದೆ; ಅಲ್ಲದೆ ಹಗಲಿನಲ್ಲಿ ನಾನು ಸ್ವಲ್ಪ ಸಮಯ ನಿದ್ರಿಸುತ್ತಿರುವೆನೆಂದನು. ಪಿಟ್ಟನಾಗ ಹಾಗಾದರೆ ನನಗೂ ಸ್ವಲ್ಪ ನಸ್ಯವನ್ನು ದಯಮಾಡಿ ಕೊಡುವೆಯಾ? ಎಂದು ಕೇಳಲು ಅವನು ನನ್ನ ಹತ್ತಿರವಿದ್ದ ನಸ್ಯವೆಲ್ಲ ಮುಗಿದಿದೆಯೆಂದನು. ಪಿಟ್ಟನ ಹತ್ತಿರ ಪರಿಮಳದಿಂದ ಕೂಡಿದ ಆದರೆ ವಿಷಯುಕ್ತವಾದ ಅದೊಂದು ಜಾತಿಯ ಚೂರ್ಣವಿದ್ದಿತು. ಅವನು ಈ ಕಾವಲುಗಾರನಿಗೆ ಮಂಕುಬೂದಿ ಹಚ್ಚಲು ಇದೇ ಒಳ್ಳೆಯ ಸಮಯವೆಂದು ತಿಳಿದು ಕಾವಲುಗಾರನೆ ! ನನ್ನ ಹತ್ತಿರ ಒಂದು ಜಾತಿಯ ಪರಿಮಳದ ಚೂರ್ಣವಿದೆ; ಕೆಲಸದಿಂದಾಲಸ್ಯವಾದಾಗ ಈ ಚೂರ್ಣವನ್ನು ಮೂಗಿಗೆ ತುರುಕಿಸಿದರೆ ಆಲಸ್ಯ ಹೋಗಿ ಹುರುಪುಂಟಾಗುವುದು ಎಂದು ಹೇಳಿದನು. ಕಾವಲುಗಾರನ ಹತ್ತಿರ ನಸ್ಯವಿಲ್ಲದುದರಿಂದವನು ಮೊದಲೇ ನಿಸ್ತೇಜನಾಗಿದ್ದನು. ಈಗ ಪಿಟ್ಟನು

ಬೇರೊಂದು ಚೂರ್ಣವಿದೆಯೆಂದು ಹೇಳಿದುದರಿಂದವನು ಸಂತೋಷಪಟ್ಟು ಹಾಗಾದರೆ ನನಗೆ ಸ್ವಲ್ಪ ಕೊಡು ಎಂದನು. ಪಿಟ್ಟನನ್ನು ಬಂಧಿಸಿದ ಕೋಣೆಯ ಗೋಡೆಗಳು ಬಹಳ ಎತ್ತರವಾಗಿದ್ದುವು ಮೇಲೆ ಒಂದು ಸಣ್ಣ ಗವಾಕ್ಷವಿದ್ದಿತಲ್ಲದೆ ಕೆಳಗಡೆಯಲ್ಲಿ ಕಿಟಿಕಿಗಳಿರಲಿಲ್ಲ. ಪಿಟ್ಟನು ನಾನು ನಿನಗೆ ಚೂರ್ಣವ ಹೇಗೆ ಕೊಡಲಿ! ಎಂದು ಕೇಳಿದಾಗ ಅವಕ್ಕೇನು ಬಾಗಿಲು ತೆರೆಯುತ್ತೇನೆ ಚೂರ್ಣ ತೆಗೆದುಕೊಂಡ ನಂತರ ಕದವನ್ನಿಕ್ಕಿದ ರಾಯಿತಷ್ಟೆ? ಎಂದು ಹೇಳಿ ಬಾಗಿಲು ತೆರೆದನು ಅನಂತರವನು ಆ ಕೋಣೆಯೊಳಗೆ ಹೋದನು. ಪಿಟ್ಟನು ಚೂರ್ಣವನ್ನು ಕೊಡಲು ಆ ಗಸ್ತಿನ ಯಾಮಿಕನು ಅದರ ಪರಿಮಳವನ್ನಾಘ್ರಾಣಿಸಿ ಆನಂದಪಟ್ಟು ಮತ್ತೂ ಸ್ವಲ್ಪ ಚೂರ್ಣವನ್ನು ತೆಗೆದು ಮೂಗಿಗೆ ತುರುಕಿದುದೇ ತಡ ತಲೆ ತಿರುಗಿ ಬವಳಿ ಬಂದು ನೆಲಕ್ಕೆ ಬಿದ್ದನು ಪಿಟ್ಟನು ಕೃತ ಕಾರ್ಯ ನಾಗಿ ಸಂತೋಷಪಟ್ಟು ಆ ಕೋಣೆಯಿಂದ ಹೊರಬಂದು ಸ್ಮೃತಿ ತಪ್ಪಿ ಬಿದ್ದ ಕಾವಲುಗಾರನ ಹತ್ತಿರದಿಂದ ಬೀಗದ ಕೀ ತೆಗೆದು ಜೋಸೆಫ್‌ನನ್ನು ಬಂಧಿಸಿಟ್ಟ ಕೋಣೆಯ ಬೀಗ ತೆಗೆದನು ಅಕಸ್ಮಾತ್ತಾಗಿ ಬಾಗಿಲು ತೆರೆದವರಾರೆಂಬುದು ಜಂಪು ಹತ್ತಿದುದರಿಂದ ಜೊಸೆಫನಿಗೆ ತಿಳಿಯಲಿಲ್ಲ' ಬಾಗಿಲು ತೆರೆದ ಶಬ್ದ ಕೇಳಿ ಅವನು ಬೇಗನೆ ಬಾಗಿಲಿನ ಹತ್ತಿರ ಬಂದಾಗ ಪಿಟ್ಟನು ಮಾತನಾಡಬೇಡ, ಬೇಗನೆ ಹೋಗುವ ಎಂದು ಹೇಳಿದನು. ಕೂಡಲೆ ಕೃಷ್ಣಹೃದಯಿಗಳಾದ ಆ ಕಳ್ಳರೀರ್ವರು ಕಗ್ಗತ್ತಲೆಯ ಅಂಥ ಕಾರದಲ್ಲಿ ತಮ್ಮವಾಸಸ್ಥಾನಕ್ಕೆ ತೆರಳಿದರು.

ಎರಡನೆಯ ಕಾವಲುಗಾರನು ನಿದ್ರಿಸಿದ್ದನಷ್ಟೆ? ಅವನಿಗೆ ಪ್ರಾತಃ ಕಾಲ ಐದು ಗಂಟೆಯಾದರೂ ಎಚ್ಚರವಾಗಲಿಲ್ಲ ಕೋಗಿಲೆಯೊಂದು ಮಾವಿನ ಮರದಲ್ಲಿ ಮಧುರವಾಗಿ ಕುಳಿತು ಹಾಡುತ್ತಲಿತ್ತು. ಹಕ್ಕಿಗಳ ಚಿಲಿ ಪಿಲಿ ಶಬ್ದದೊಡನೆ ಕೋಳಿಯ ಕ್ಕೊ ಕ್ಕೊ....ಕ್ಕೊ ಶಬ್ದವು ಬೆರೆಯು ತಿತ್ತು. ಮಂದ ಮಾರುತವು ಬೀಸುತಿತ್ತು ಬೆಳಗಿನ ಜಾವದ ತಂಗಾಳಿಯು ಬೀಸುತಿದ್ದಾಗ ಎರಡನೆಯ ಕಾವಲುಗಾರನಿಗೆ ಚಳಿಯಿಂದಲಾಗಿ ಎಚ್ಚರವಾಗುವಾಗಲೇ ಸ್ಟೇಶನಿನ ಗಂಟೆ ಐದು ಬಾರಿಸಲು ಬೆಳಿಗ್ಗೆ ಐದು ಗಂಟೆಯಾಯಿತೆಂದು ಅವನಿಗೆ ತಿಳಿಯಿತು. ಮೊದಲನೆಯ ಕಾವಲು ಗಾರನು ತನ್ನನ್ನೇಕೆ ಎಚ್ಚರಿಸಲಿಲ್ಲವೆಂದವನು ಆಶ್ಚರ್ಯಪಟ್ಟನು. ಸಹಿ

ಸಲು ಅಸಾಧ್ಯವಾದ ತಂಗಾಳಿಯು ಬೀಸುತ್ತಿರಲಾ ಕಾವಲುಗಾರನು ಲಾಂಪ್ರವನ್ನು ದೊಡ್ಡದಾಗಿ ಉರಿಯುವಂತೆ ಮಾಡಿದನು. ಆಗ ಕೈದಿ ಗಳನ್ನು ಬಂಧಿಸಿದ ಕೋಣೆಯ ಬಾಗಿಲುಗಳು ತೆರೆದಿರುವದನ್ನು ಕಂಡು ಕೈದಿಗಳು ತಪ್ಪಿಸಿ ಫರಾರಿಯಾಗಿದ್ದಾರೆಂದು ತಿಳಿದನು; ಮತ್ತು ಸಂಗಡಿ ಗನು ಪ್ರಜ್ಞೆಇಲ್ಲದೆ ಬಿದ್ದಿರುವುದನ್ನು ಕಂಡು ಅವನು ಹೇಗೆ ಸ್ಮೃತಿ ತಪ್ಪಿ ಬಿದ್ದನೆಂದು ತಿಳಿಯದೆ ಚಿಂತಿಸಿದನು ಮಿತ್ರನ ದುರವಸ್ಥೆಯ ಕಾರಣ ಯಾವುದೆಂದು ಆ ಸರ್ವ ಸಾಧಾರಣನಾದ ಕಾವಲುಗಾರನಿಗೆ ತರ್ಕಿಸಲ ಸಾಧ್ಯವಾದ ವಿಷಯವಾಗಿತ್ತು. ಯಾವುದಕ್ಕೂ ಪ್ರಥಮವಾಗಿ ಸ್ಮೃತಿ ತಪ್ಪಿ ಬಿದ್ದವನಿಗೆ ಪ್ರಜ್ಞೆ ಬರುವಂತೆ ಮಾಡುವುದು ಕರ್ತವ್ಯವಷ್ಟೆ? ಅದ್ದ ರಿಂದವನು ಶೈತ್ಯೋಪಚಾರ ಮಾಡಲು ಪ್ರಾರಂಭಿಸಿದನು. ಸ್ವಲ್ಪ ಸಮಯ ದಲ್ಲಿ ಮೊದಲನೆಯ ಕಾವಲುಗಾರನಿಗೆ ಪ್ರಜ್ಞೆಬಂದಿತು. ಅವನಿಗೆ ನಡೆದ ವಿಷಯವು ರಜತ ಪರದೆಯಲ್ಲಿ ಕಂಡ ಚಿತ್ರದಂತೆ ಒಂದೊಂದಾಗಿ ಜ್ಞಾಪ ಕಕ್ಕೆ ಬರಲಾರಂಭಿಸಿತು ಅವನು ಎಲ್ಲವನ್ನೂ ವಿವರಿಸಿ ಜೊತೆಯವನಿಗೆ ತಿಳಿಸಿದನು ಇವನ ಚಿಂತೆಯನ್ನು ಕಂಡು ಎರಡನೆಯವನು ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು? ಎಂದು ಹೇಳಿ ಮಿತ್ರನನ್ನು ಸಮಾಧಾನ ಪಡಿಸಿದನು ಮೊದಲನೆಯವನು ನಾನಿನ್ನು ಹೇಗೆ ಇನ್ ಸ್ಪೆಕ್ಟರ್‌ಗೆ ಮುಖ ತೋರಿಸಲಿ? ಹಾ! ಮೋಸವಾಯಿತು!! ಎಂದನು.

ಕರಮಚಂದನು ಪೋಲೀಸ್ ಸ್ಟೇಷನ್‌ನಿಂದ ತನ್ನ ಮನೆಗೆ ಬಂದನು. ಸಹೋದರನು ವೇಷಾಂತರದಿಂದ ಹೋದುದು ಪತ್ತೆದಾರಿ ಪುಸ್ತಕ ವನ್ನೋದುವುದರಲಿಯೇ ತಲ್ಲೀನನಾಗಿದ್ದ ರಾಮದಾಸನಿಗೆ ಗೊತ್ತಾಗಿರ ಲಿಲ್ಲ ಫಕೀರನ ವೇಷದಲ್ಲಿಯೇ ಕರಮಚಂದನು ತನ್ನ ಮನೆಗೆ ಬಂದನು. ಅವನು ತಮ್ಮನನ್ನು ಕರೆಯಲು ಅವನಿನ್ನೂ ಪುಸ್ತಕವೋದುತ್ತಲೇ ಇದ್ದು ದರಿಂದ ಯಾರೋ ಬಂದಿರುವರು ಎಂದು ತಿಳಿದು ಅವನು ತನ್ನ ಕೋಣೆ ಯಿಂದ ಹೊರಬಂದು ಜಗಲಿಯಲ್ಲಿರುವ ಇಲೆಕ್ಟ್ರಿಕ್ ಲೈಟನ್ನುರಿಸಿದನು ಆಗ ಫಕೀರನನ್ನು ಕಂಡು ರಾಮದಾಸನು ಇವನಾರಪ್ಪಾ! ಎಂದು ಆಲೋಚಿಸುತ್ತಿರಲು, ಕರಮಚಂದನು ಮನೆಯೊಳಗೆ ಬಂದು ರಾತ್ರಿ ತಾನು ಮಾಡಿದ ಕೆಲಸವನ್ನು ವಿವರಿಸಿ ಹೇಳಿದನು. ಅನಂತರವನು

ಫೋನ್‌ನಲ್ಲಿ ಸುಪರಿಡೆಂಟ್ ಯಶವಂತಸಿಂಹನಿಗೆ ಕಳ್ಳರು ಸಿಕ್ಕಿರುವರೆಂದೂ ಮಲಬಾರಿನ ಅರಸನ ಒಡವೆಗಳೀಗ ನನ್ನ ಸ್ವಾಧೀನವಿವೆ ನಾಳೆ ರಾಜರ ಕಡೆಯವರು ಇಲ್ಲಿಗೆ ಬರಲಿ; ಈಗ ಕೈದಿಗಳು ಜೈಲಿನಲ್ಲಿರುವರೆಂದೂ ತಿಳಿಸಲು ಯಶವಂತ ಸಿಂಹನು ಫೋನಿನಲ್ಲಿ ಪತ್ತೆದಾರಿಯ ಸಾಹಸಕ್ಕೆ ತಲೆದೂಗಿ ಅವನನ್ನು ಹೊಗಳಿ ಕೂಡಲೇ ಫೋನ್‌ನಲ್ಲಿ ಮಲಬಾರಿನ ಅರಸನು ತಂಗಿರುವ ನಿವಾಸಸ್ಥಳಕ್ಕೆ ತಿಳಿಸಿದನು

ಮರು ದಿವಸ ಪ್ರಾತಃಕಾಲ ಭಗವಾನ್ ಸೂರ್ಯನಾರಾಯಣನ ರಕ್ತವರ್ಣದ ಕಿರಣಗಳನ್ನು ಎಡೆಬಿಡದೆ ಕಳುಹಿಸುತ್ತಾ ಕತ್ತಲೆಯನ್ನಟ್ಟುತ್ತಿದ್ದನು. ಬರ ಬರುತ್ತಾ ಕಿರಣಗಳು ರಕ್ತವರ್ಣಗಳನ್ನು ಕಳೆದು ಬಿಳಿಯಾಗತೊಡಗಿದುವು ಸನಾತನಿಗಳು ತಮ್ಮ ನಿತ್ಯ ಕರ್ಮಗಳನ್ನು ಆಚರಿಸಲಾರಂಭಿಸಿದರು. ಸಾಧಾರಣ ಏಳು ಗಂಟೆಯಾದಾಗ ಪೋಲೀಸ್ ಇನ್‌ಸ್ಪೆಕ್ಟರ್‌ನು ಯಾಮಿಕ ಠಾಣೆಗೆ ಬಂದನು ಕಾವಲುಗಾರರ ವಿಷಣ್ಣ ವದನಗಳನ್ನು ಕಂಡು ಏನೋ ಅನಾಹುತವಾಗಿದೆಯೆಂದವನು ತಿಳಿದನು. ಅವನು ಮೊದಲನೆಯ ಕಾವಲುಗಾರನ ಹತ್ತಿರ ಕೈದಿಗಳು ಸುರಕ್ಷಿತರಾಗಿರುವರಷ್ಟೆ? ಎಂದು ಕೇಳಲು ಅವನು ದುಃಖದಿಂದಲೂ ಭಯದಿಂದಲೂ ಕೈದಿಗಳು........ಎಂದು ಹೇಳುತ್ತ ಮುಂದೆ ಮಾತನಾಡಲಶಕ್ತನಾಗಿ ಸುಮ್ಮನೆ ನಿಂತನು. ಆಗ ಇನ್‌ಸ್ಪೆಕ್ಟರನು ಮುಂದೇನು?ಮರೆಮಾಜದೆಹೇಳು ಎಂದಾಗ ಎರಡನೆಯವನು ಕೈದಿಗಳು ಮಂಕುಬೂದಿ ಹಚ್ಚಿ ಫರಾರಿಯಾದರೆಂದು ಭೀತಿಯಿಂದ ಹೇಳಿದನು ಅದನ್ನು ಕೇಳಿ ಇನ್‌ಸ್ಪೆಕ್ಟರನು ಕಾವಲುಗಾರರಿಗೆ ಕೈದಿಗಳು ತಪ್ಪಿಸದಂತೆ ನೋಡಿಕೊಳ್ಳಲು ನಿಮಗೇನು ಸಂಕಟ ಬಂತು ? ಎಂದು ಗದರಿಸಲು ಅವರು ಭಯದಿಂದ ಗಡಗಡನೆ ನಡುಗುತ್ತಾ ನಡೆದ ಸಂಪೂರ್ಣ ವೃತ್ತಾಂತ ಹೇಳಿದರು ಕರಮುಚಂದನು ಬಂದ್ರು ಬಂದಿಗಳೆಲ್ಲಿ? ಎನ್ನಲು ನಾನೇನು ಹೇಳಲಿ ! ಎಂದವನು ಚಿಂತಾಕ್ರಾಂತನಾಗಿ ಹಾ ! ಮೋಸವಾಯಿತು ! ! ಎಂದೆಂದು ಕೋಪಾಗ್ನಿಯನ್ನವರ ಮೇಲೆ ಕಾರಿದನು.

ಪೋಲೀಸ್ ವೇನೊಂದು ಅತಿ ರಭಸವಾಗಿ ಆ ಪೋಲೀಸ್ ಸ್ಟೇಷನ್‌ನ ಎದುರಗಡೆಯಲ್ಲಿ ನಿಂತಿತು. ಅದರ ಹಿಂದಿನಿಂದ ಭವ್ಯವಾದೊಂದು ಕಾರು ಕೂಡಾ ಬಂದು ನಿಂತುಕೊಂಡಿತು. ವೇನ್‌ನಿಂದ ಪೋಲೀಸ್

ಸುಪರಿಂಡೆಂಟ್ ಯುಶವಂತ ಸಿಂಹ ಪತ್ರೆದಾರಿ ಕರಮುಚಂದ ಇಬ್ಬರು ಪೋಲೀಸರು ಅಲ್ಲದೆ ಮಲಬಾರಿನರಸನ ಮೂರು ನಾಲ್ಕು ಸೇವಕರೂ ಇಳಿದರು. ಕಾರಿನಿಂದ ಮಲಬಾರಿನರಸನು ತನ್ನ ಆಪ್ತ ಮಿತ್ರರೊಡನೆ ಕೆಳಗಿಳಿದನು. ಪ್ರೊ. ಸುಪರಿಡೆಂಟ್ ಯುಶವಂತ ಸಿಂಹನನ್ನು ಕಂಡು ಸಬ್ ಇನ್ಸ್‌ಪೆಕ್ಟರನು ಬೆದರಿದನು_ ಯುಶವಂತನು ಅವನೊಡನೆ ಕೈದಿಗಳೀಚೆ ಬರಲಿ, ಎಂದು ಅಧಿಕಾರಯುಕ್ತವಾಣಿಯಿಂದಾಜ್ಞಾಪಿಸಿದನು. ಇನ್ಸ್‌ಪೆಕ್ಟರ್‌ನೇನೂ ಮಾತನಾಡಲಿಲ್ಲ ಆ ಬೆಳಗಿನ ಏಳು ಗಂಟೆಯ ಸಮಯದಲ್ಲಿಯೂ ಅವನ ಮುಖದಲ್ಲಿ ಬೆವರೊಡೆದು ಪ್ರವಾಹವಾಗಿ ಹರಿಯುತಿದ್ದುದನ್ನು ಕಂಡು ಕರಮಚಂದನು ಏನೋ ವಿಪತ್ತುಂಟಾಗಿರಬಹುದೆಂದು ತರ್ಕಿಸಿ ಬಂದಿಗಳನ್ನು ಬಂಧಿಸಿದ ಕೋಣೆಯ ಹತ್ತಿರ ಹೋದನು. ಅಲ್ಲಿನ ಕಾವಲುಗಾರರ ಹತ್ತಿರ ವಿಚಾರಿಸಿದಾಗ ನಡೆದ ವಿಷಯ ತಿಳಿಯಿತು. ಪತ್ತೆದಾರಿಯು ಯುಶವಂತಸಿಂಹನೊಡನೆ ಕೈದಿಗಳು ದುರದೃಷ್ಟದಿಂದ ಫರಾರಿಯಾಗಿರುವರಂತೆ. ಚಿಂತೆಯಿಲ್ಲ ಬೇಕಾದಾಗ ನಾನವರನ್ನು ಹಿಡಿಯಬಲ್ಲೆನೆಂದನು. ಕೈದಿಗಳು ಓಡಿಹೋದರೆಂದು ಕೇಳಿ ಸುಪರಿಂಡೆಂಟನು ಅವನನ್ನು ಚೆನ್ನಾಗಿ ತಿರಸ್ಕರಿಸಿ, ಅವನ ಮೇಲೆ ಕೆಟ್ಟ ರಿಮಾರ್ಕ ಬರೆಯಲು ಡೈರಿಯನ್ನು ತೆಗೆದಾಗ ಕರಮಚಂದನು ಅವನನ್ನು ಶಾಂತಪಡಿಸಿದನು. ಪಿಟ್ಟನಿಂದ ಕಳವಾದ ಆಭರಣಗಳನ್ನು ಕರಮುಚಂದನು ನಿನ್ನೆಯೇ ತೆಗೆದಿದ್ದನಷ್ಟೆ ? ಅದನ್ನವನೀಗ ಸಾಮಂತ ರಾಜನಿಗೊಪ್ಪಿಸಿದನು. ಕಳೆದು ಹೋದ ಆಭರಣಗಳು ಮರಳಿ ಸಿಕ್ಕಿದುದಕ್ಕಾಗಿ ಆ ಅರಸನು ಬಹುಮಟ್ಟಿಗೆ ಸಂತೋಷಪಟ್ಟು ತನ್ನ ಕೈಯಲ್ಲಿರುವ ಒಂದು ವಜ್ರದುಂಗುರವನ್ನು ಕರಮುಚಂದನಿಗೂ ಮತ್ತೊಂದನ್ನು ಯುಶವಂತ ಸಿಂಹನಿಗೂ ಕೊಟ್ಟು ಅವರಿಗೆ ಕೃತಜ್ಞತೆ ಸಲ್ಲಿಸಿ ಮಿತ್ರನೊಡನೆ ಕಾರನ್ನೇರಿ ಅಲ್ಲಿಂದ ತನ್ನ ನಿವಾಸ ಸ್ಥಳಕ್ಕೆ ತೆರಳಿದನು.

ಪಿಟ್ಟನೂ ಜೋಸೆಫ್‌ನೂ ಬಂದೀಖಾನೆಯಿಂದ ತಪ್ಪಿಸಿಕೊಂಡು ಅಲ್ಲಿಂದ ವಿಶ್ರಾಂತಿಭವನಕ್ಕೆ ಬಂದರು. ಲೋಬೋನು ಇವರನ್ನು ಕಾದು ಅಲ್ಲಿ ನೆಲಮಾಳಿಗೆಯಲ್ಲಿ ಕುಳಿತಿದ್ದನು. ಅವನು ತನ್ನನುಚರರಿಗೆ ಕಳವು ಮಾಡಲು ಹೇಳಿದುದು ಸಾಯಂಕಾಲ ಸಾಧಾರಣ ಏಳುಗಂಟೆಗಷ್ಟೆ? ಕಳವು ಮಾಡಿದ ನಗಗಳನ್ನು ಸರಾಫ ಅಂಗಡಿಯಲ್ಲಿ ಕೂಡಲೇ ವಿಕ್ರಯಿಸಬೇಕೆಂದ

ವನು ಹೇಳಿದ್ದನು. ಆದರೆ ಅವನು ರಾತ್ರಿ ಹನ್ನೆರಡು ಗಂಟೆಯಾದರೂ ಬಾರದೆ ಇರಲು ವಿಜ್ಞಾನಿಗೆ ಅನೇಕ ವಿಕಲ್ಪದ ವಿಚಾರಗಳುಂಟಾದವು. ಎಲ್ಲಿಯಾದರೂ ರೇಲ್ವೇಸ್ಟೇಷನ್‌ನಲ್ಲಿ ಕಳವು ಮಾಡುತ್ತಿರುವಾಗ ಪಿಟ್ಸ್ ಜೋಸೆಫ್‌ರು ಪೋಲೀಸರ ಕೈಗೆ ಸಿಲುಕಿದರೆ? ಛೆ! ಈ ನಗರದಲ್ಲಿರುವ ಯಾವ ಯಾವನಿಗೂ ಪಿಟ್ಸನಂತಹ ಚೋರ ಶಿಖಾಮಣಿಯನ್ನು ಹಿಡಿಯುವುದೆಂದರೆ ಅಸಾಧ್ಯವೇ ಸರಿ! ಆದರಿನ್ನೂ ಬಾರದಿರಲು ಕಾರಣ........??! ಹಾ! ನೆನಪಾಯಿತು: ಆ ಧೂರ್ತನಾದ ಕರಮುಚಂದನಿರುವನಷ್ಟೆ! ಅವನಿಂದೇನಾದರೂ ಅಪಾಯುಉಂಟಾಗಿರಬಹುದೆ? ಅಥವಾ ಒಡವೆಗಳನ್ನು ವಿಕ್ರಯಿಸುತಿದ್ದಾಗ ಪೋಲೀಸರು ಸಂಶಯದಿಂದಿವರನ್ನು ಬಂಧಿಸಿರಬಹುದೆ? ಹೀಗೆ ನಾನಾ ವಿಧವಾಗಿ ಚಿಂತಿಸುತಿದ್ದನು ಅನಂತರ ಅಲ್ಲಿಯೇ ಮಲಗಿ ನಿದ್ರಿಸಿದನು ರಾತ್ರಿ ಎರಡೂವರೆ ಗಂಟೆಯಾಗುವಷ್ಟರಲ್ಲಿ ಪಿಟ್ಸನು ಜೋಸೆಫ್‌ನೊಡನೆ ಅಲ್ಲಿಗೆ ಬಂದು ಲೋಬೋನನ್ನು ಎಚ್ಚರಿಸಿದನು. ಲೋಬೋನು ಪಿಟ್ಸನೊಡನೆ ಒಡವೆಗಳನ್ನು ಮಾರಿ ಬರಲು ಇಷ್ಟು ತಡವಾಗಲು ಕಾರಣವೇನು? ಎಂದು ಪ್ರಶ್ನಿಸಿದನು. ಪಿಟ್ಸನಾಗ ಎಲ್ಲವೂ ಮೋಸವಾಯಿತು, ಆ ಧೂರ್ತನಾದ ಪತ್ತೆದಾರಿಯು ನಮ್ಮನ್ನು ಕೈದಿಗಳನ್ನಾಗಿ ಮಾಡಿ ಬಂಧನದಲ್ಲಿಟ್ಟು ನಗಗಳನ್ನಪಹರಿಸಿದನು; ಎಂದನು. ಆಗ ಲೋಬೋನು ಹಾ! ನನ್ನ ಯುಕ್ತಿಯು ಸಫಲವಾಗದೆ ವಿಫಲವಾಯಿತಲ್ಲ. ಹಾ! ಮೋಸವಾಯಿತು ಎಂದು ಚಿಂತಿಸಿದನು. ಆಗಲಿ; ಕರಮುಚಂದನೇನೋ ಅತ್ಯಂತ ಬಲಿಷ್ಟನಿರಬಹುದಾದರೂ ನನ್ನೊಡನೆ ಅವನ ಚಮತ್ಕಾರ ನಡೆಯದು. ವಿವಾದಸ್ಯ ವಿವಾಹಸ್ಯ ಸಮಯೋರೇವ ಶೋಭತೆ ಎಂದು ಪ್ರಾಜ್ಞರು ಹೇಳುತ್ತಿದ್ದಾರೆ ಅದರಂತೆ ನನ್ನ ಶಕ್ತಿಯನ್ನು ಪ್ರಕಟಪಡಿಸಲು ಕರಮುಚಂದನಂತಹ ಅಸಮಾನ್ಯ ಪ್ರಬಲ ಎದುರಾಳಿಯು ಇದ್ದರೇನೇ ಒಳ್ಳೆಯದೆಂದು ಹೇಳಿದನು

೦೦ ೦೦ ೦೦ ೦೦

ಪತ್ತೆದಾರಿ ಕರಮುಚಂದನು ಯಾಮಿಕ ಠಾಣೆಯಿಂದ ತನ್ನ ಮನೆಗೆ ಬಂದಾಗ ಬೆಳಿಗ್ಗೆ ಎಂಟೂವರೆ ಗಂಟೆಯಾಗಿದ್ದಿತು. ರಾಮುದಾಸನು ಮಿತ್ರನಿಗಾಗಿ ಏನೋ ಪತ್ರವನ್ನು ಬರೆಯುತಿದ್ದನು. ಸೇವಕನಾದ ಲಿಂಗಪ್ಪನು ಅಂಗಡಿಗೆ ತರಕಾರಿ ತರಲು ಹೋಗಿದ್ದನು. ಕರಮುಚಂದನು ರಾಮು

ದಾಸನನ್ನು ಕರೆದನು. ಅನಂತರ ಆ ಪತ್ತೇದಾರಿ ಸಹೋದರರು ಮಾಳಿಗೆಗೆ ಹೋಗಿ ತಮ್ಮ ಆಲೋಚನಾ ಮಂದಿರ ಎಂಬ ಕೋಣೆಯೊಳಗೆ ಹೋಗಿ ಚೋರ ಸಾರ್ವಭೌಮನನ್ನು ಆದಷ್ಟು ಬೇಗನೆ ಹಿಡಿಯಬೇಕೆಂದು ಮಾತ ನಾಡುತ್ತಾ ಆ ವ್ಯಕ್ತಿಯು ಯಾರಾಗಿರಬಹುದೆಂದು ತರ್ಕಿಸಲಾರಂಭಿಸಿದರು. ರಾಮದಾಸನು ಅಣ್ಣನೊಡನೆ ರೀಲ್ವೆ ಸ್ಟೇಷನ್‌ನಲ್ಲಿ ಪೇಸೆಂಜರ್ ಟ್ರೈನ್‌ನ ಸಿಳ್ಳು ಕೇಳಲು ಬಿಟ್ಟನು. ಜೋಸೆಫ್‌ನೊಡನೆ ಏನೋ ಹೇಳಲವನು ಬೇಗನೆ ಹತ್ತಿರದ ಅಂಗಡಿಗೆ ಹೋದನು. ಕೂಡಲೇ ವಿದ್ಯುತ್ ದೀಪ ಗಳೆಲ್ಲ ಆರಿ ಹೋದುವು. ಬಿಟ್ಟನು ಜೋಸೆಫ್‌ನನ್ನು ವಿದ್ಯುತ್ ದ್ವೀಪ ವಾರಿಸಲು ಫೋನ್‌ನಲ್ಲಿ ಇಲೆಕ್ಟ್ರಿಕ್ ಸ್ಟೇಷನಿಗೆ ಅಲ್ಲಿರುವ ಅಪ್ತ ಚೋರ ನಿಗೆ ತಿಳಿಸಲು ಪಕ್ಕದ ಅಂಗಡಿಗೆ ಹೋಗಿರಬೇಕಲ್ಲವೆ? ಎಂದನು. ಕರಮಚಂದನಾಗ ನಿನ್ನ ಊಹೆಯೇನೋ ನಿಜ. ಆದರೆ ವಿದ್ಯುತ್‌ಪ್ರವಾಹ ವನ್ನುಂಟು ಮಾಡುವ ಉಪಕರಣಗಳು ಹಾಳಾಗಿ ಪ್ರವಾಹ ನಿಂತಿತೆಂಬ ವಾರ್ತೆಯಿದೆಯಷ್ಟೆ! ಸಾಧಾರಣವಾದ ಒಬ್ಬ ಕಾರಕೂನನಿಗೆ ವಿದ್ಯುತ್ ಸ್ಟೇಷನ್‌ನಲ್ಲಿರುವ ಉಪಕರಣಗಳನ್ನು ಯಾರಿಗೂ ತಿಳಿಯದಂತೆ ಹಾಳು ಮಾಡಲು ಸಾಧ್ಯವಿಲ್ಲ ಎಂದನು. ಸ್ವಲ್ಪ ಸಮಯ ಅವರಿಬ್ಬರೂ ಮೌನ ವಾಗಿದ್ದರು. ಅನಂತರ ಅವರೊಳಗೆ ಈ ರೀತಿ ಮಾತುಕಥೆ ನಡೆಯಿತು.

ರಾಮದಾಸ—'ಚೋರಸಾರ್ವಭೌಮ'ನೆಂಬ ಆ ಅದ್ಭುತ ಚಮತ್ಕಾರ ಉಳ್ಳ ವ್ಯಕ್ತಿಯು ಉಪಾಯಾಂತರದಿಂದ ಇಲೆಕ್ಟ್ರಿಕ್ ಸ್ಟೇಷನ್‌ಗೆ ಹೋಗಿ ಅಲ್ಲಿನ ಉಪಕರಣಗಳನ್ನು ಹಾಳು ಮಾಡಿದ್ದರೆ?

ಕರಮಚಂದ—ಅದು ಬಹಳ ಕಷ್ಟಕರವಾದುದು

ರಾಮದಾಸ—ಅಥವಾ ಇಲೆಕ್ಟ್ರಿಕ್ ಎಂಜಿನಿಯರರನ್ನೇ ಅವನು ವಂಚಿಸಿ ಏನಾದರೂ ಅವನ ವೇಷದಿಂದಲ್ಲಿಗೆ ಹೋಗಿ ಅನಾಹುತ ಮಾಡಿರ ಬಹುದು.

ಕರಮಚಂದ—ಆದಿರಲಿ. ನಮ್ಮ ನಗರದ ಮುಖ್ಯ ಇಲೆಕ್ಟ್ರಿಕ್ ಎಂಜಿನೀಯರ್‌ನಾದ ಲೋಬೋನ ವಿಷಯ ನಾವೀಗ ಚೆನ್ನಾಗಿ ತಿಳಿಯ ಬೇಕಾಗಿದೆ. ಯಾಕೆಂದರೆ ಅವನೊಬ್ಬ ಮೇಧಾವಿಯಾದ ವಿಜ್ಞಾನಿಯು. ನ್ಯೂಮೋಡೆಲ್ ಬೇಕ್‌ನಲ್ಲಿ ಯಾವುದೋ ಒಂದು ವಿಶೇಷ ತರದ ವಿಜ್ಞಾನದ ದಸ್ತುವಿದೆಯೆಂದು ನನಗೆ ಖಚಿತವಾಗಿದೆ; ಆದರೆ ಅದಾವುದು? ಎಲ್ಲಿದೆ?

ಎಂಬುದಿನ್ನೂ ಗೊತ್ತಾಗಲಿಲ್ಲ. ನಿನ್ನೆ ಮೈದಾನಿನಲ್ಲಿ ಕೆಲವರು ಮೆಲ್ಲನೆ ಲೋಬೋನ ವಿಷಯವಾಗಿ ಕೆಟ್ಟ ವಾರ್ತೆಗಳನ್ನು ಮಾತನಾಡುತ್ತಿದ್ದರು. ಅವರ ಮಾತುಗಳಲ್ಲಿ ಬಹುಶಃ ವಿಜ್ಞಾನಿಯು ದುಷ್ಟನಾಗಿ ತೋರುತ್ತಾನೆ. 'ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು' ಎಂಬಂತೆ ಯಾವುದಕ್ಕೂ ಈ ದಿನ ರಾತ್ರಿ ನಾವಿಬ್ಬರು ವೇಷಾಂತರದಿಂದ ಅವನಲ್ಲಿಗೆ ಹೋಗಿ ಅವನನ್ನು ಪರೀಕ್ಷಿಸಬೇಕಾಗಿದೆಯೆಂದನು ರಾಮದಾಸನದಕ್ಕೊಪ್ಪಿದನು.

---

# ಬೈರಾಗಿ

ಸಾಯಂಕಾಲ ಐದು ಗಂಟೆಯ ಸಮಯ. ಮಾರ್ಗದಲ್ಲಿ ವಾಹನಗಳ ಓಡಾಟದ ಎಡೆಯಲ್ಲಿ ಪ್ರಯಾಣಿಕರಿಗೆ ಕಾಲ್ನಡಿಗೆಯಿಂದ ನಡೆಯುವುದೆಂದರೆ ಬಹಳ ಕಷ್ಟವಾಗುತ್ತಿತ್ತು. ಬೀದಿಯನ್ನಡ್ಡದಾಟುವಾಗಲಂತೂ ಬಹಳ ಕಷ್ಟ. ಮೋಟಾರ್, ಬಸ್ಸು, ಕಾರ್, ಸೈಕಲ್, ಕುದುರೆ ಗಾಡಿ ಮೊದಲಾದ ವಾಹನಗಳು ಅಸಂಖ್ಯವಾಗಿ ಇಲ್ಲಿಂದತ್ತಲೂ ಅಲ್ಲಿಂದಿತ್ತಲೂ ಓಡಾಡುತ್ತಿದ್ದುವು ಕೆಲವು ಸಲ ಅಜಾಗರೂಕತೆಯಿಂದ ಅನೇಕ ಮಂದಿ ಜನರು ವಾಹನಗಳ ಅಡಿಗೆ ಬಿದ್ದು ಗತಪ್ರಾಣರಾಗಿ ಹೋದುದನ್ನು ಕಂಡು ಎಲ್ಲರೂ ಎಚ್ಚರಿಕೆಯಿಂದ ನಡೆಯುತ್ತಿದ್ದರು ಹಂಪನಕಟ್ಟೆಯ ಹತ್ತಿರದ "ಅನಾಥ ಮಂದಿರ"ದಲ್ಲಿ ಇಬ್ಬರು ಬೈರಾಗಿಗಳು ಹುಕ್ಕಾಸೇದುತ್ತಾ ಸಾಧಾರಣ ಐದು ಗಂಟೆಯವರೆಗಿದ್ದರು. ಅವರು ಮಧ್ಯಾಹ್ನ ಹನ್ನೆರಡು ಗಂಟೆಗೆ ಅಲ್ಲಿಗೆ ತಲಪಿದ್ದರು. ದೊಡ್ಡ ಬೈರಾಗಿಗೆ ಸಾಧಾರಣ ಮೂವತ್ತು ವರ್ಷವಾಗಿರಬಹುದು ಮತ್ತೊಬ್ಬನು ಅವನ ಶಿಷ್ಯನಾಗಿದ್ದನು ಶಿಷ್ಯನು ಇಪ್ಪತ್ತೈದು ವರ್ಷದವನಿದ್ದನು ಅವರಿಬ್ಬರ ಮುಖವೂ ತೇಜಸ್ಸಿನಿಂದ ತುಂಬಿ ಶೋಭಿಸುತ್ತಿತ್ತು ಅನಾಥಮಂದಿರದ 'ಕಾರುಭಾರಿ'ಯೊಡನೆ ಆ ದೊಡ್ಡ ಬೈರಾಗಿಯು ನಾವು ಗೋಕರ್ಣದಿಂದ ಬಂದವರೆಂದಿದ್ದನು ಬೈರಾಗಿಗಳಿಗೆ ತಕ್ಕ ವೇಷದಲ್ಲಿ ಅವರಿದ್ದರು ಶಿಷ್ಯನೊಡನೆ ಒಂದು ದೊಡ್ಡ ಚೀಲವಿದ್ದಿತು ಆ ಅನಾಥಾಲಯದಲ್ಲಿ ಅನೇಕ ಭಿಕ್ಷುಕರೂ ಗೋಸಾಯಿಗಳೂ ಅಲ್ಲದೆ ದಾರಿಹೋಕರೂ ಅಡಿಗೆ ಮಾಡಿ ಊಟ ತೀರಿಸಿ ವಿಶ್ರಮಿಸುತ್ತಿದ್ದರು. ಮೇಲೆ ಹೇಳಿದ ಬೈರಾಗಿಗಳು ಅಲ್ಲಿ ಅಡಿಗೆಯನ್ನೇನೂ ಮಾಡದೆ ಯಜಮಾನನ

ಹಿತ್ತಿರದಿಂದ ತಂಬಿಗೆ ಕೇಳಿ, ಬಾವಿಯಿಂದ ನೀರನ್ನಷ್ಟು ತೆಗೆದು ಕುಡಿದಿದ್ದರಷ್ಟೆ! ದೊಡ್ಡ ಬೈರಾಗಿಯು ಕುತ್ತಿಗೆಗೊಂದು ರುದ್ರಾಕ್ಷಮಾಲೆಯನ್ನು ಹಾಕಿಕೊಂಡಿದ್ದನು ಅವನ ಕೈಯಲ್ಲೊಂದು ಬಿದಿರಿನ ಬೆತ್ತವಿತ್ತು. ಆ ಬೈರಾಗಿಗಳು ತಮ್ಮತಮ್ಮೊಳಗೆ ಏನೂ ಮಾತನಾಡದೆ ಮೌನವಾಗಿದ್ದರು. ಅಗತ್ಯಬಂದಿದ್ದರೆ ದೊಡ್ಡ ಬೈರಾಗಿಯು ಅಲ್ಲಿದ್ದವರೊಡನೆ ಏನಾದರೂ ಮಾತನಾಡುತಿದ್ದನಷ್ಟೆ! ಅವನ ಶಿಷ್ಯನು ಅಲ್ಲಿಗೆ ಬಂದ ನಂತರ ತನ್ನ ಬಾಯಿಂದೊಂದಕ್ಷರವನ್ನಾದರೂ ಹೊರಗೆಡಹದಿದ್ದುದರಿಂದ ಅಲ್ಲಿದ್ದ ಬೇರೆ ಗೋಸಾಯಿಗಳು ಅವನೊಬ್ಬ 'ಮೂಕ'ನೆಂದು ತಿಳಿದುಕೊಂಡರು ವೃದ್ಧನಾದೊಬ್ಬ ಬೈರಾಗಿಯು ಆ ಶಿಷ್ಯನ ಹತ್ತಿರ ಬಂದು, ತಮ್ಮಾ, ನೀನೇಕೆ ಮೌನವಾಗಿ ಕುಳಿತಿರುವಿ? ಎಂದು ಕೇಳಿಯೇ ಬಿಟ್ಟನು. ಶಿಷ್ಯನು ತನಗೆ ಬಾಯಿ ಬರುವುದಿಲ್ಲವೆಂದು ಕೈ ಸಂಜ್ಞೆಯಿಂದ ತಿಳಿಸಲು ಆ ವೃದ್ಧನು ಸುಮ್ಮನಾಗಿ ಅಲ್ಲಿಂದ ತನ್ನ ಕಾರ್ಯಕ್ಕೆ ತೊಡಗಿ ಹೋದನು. ದೊಡ್ಡ ಬೈರಾಗಿಯ ಹತ್ತಿರ ಪಥಿಕನೊಬ್ಬನು ತಾವು ಇನ್ನೆಲ್ಲಿಗೆ ಹೋಗುವಿರಿ? ಎಂದು ಕೇಳಲು ಅದಕ್ಕವನು ನಾವಿನ್ನು ಎರಡು-ಮೂರು ದಿವಸ ಈ ನಗರದಲ್ಲಿದ್ದು ಅನಂತರ ರಾಮೇಶ್ವರ ಮಧುರೆ ಮೊದಲಾದ ಸ್ಥಳಕ್ಕೆ ಹೋಗಲಿರುವೆವು ಎಂದನು. ಬೈರಾಗಿಯ ಮುಖದ ತೇಜಸ್ಸನ್ನು ಕಂಡು ಪಥಿಕರು ಇವನೊಬ್ಬ ಮಹಾಪುರುಷನೆಂದು ತಿಳಿದು ಅವನ ಹತ್ತಿರ ಸ್ವಲ್ಪ ಸಮಯ ಮಾತನಾಡುತ್ತಿದ್ದರು. ಬೈರಾಗಿಯು ವಿದ್ವಾಂಸನಾದ ವಾಗ್ಮಿಯೂ ಸಾತ್ವಿಕನೂ ಎಂದು ತಿಳಿದುಕೊಂಡರು

ಮೇಲೆ ಹೇಳಿದ ಬೈರಾಗಿಗಳು ಅನಾಥಾಲಯದಿಂದ ಐದುಗಂಟೆಗೆ ಹೊರಟರು. ಅವರು ಮೈದಾನಿನ ಸಮೀಪ ಬಂದು ಆ ಮೇಲೆ ಸುಪ್ರಸಿದ್ಧ ವಿಜ್ಞಾನಿಯಾದ ಲೋಬೋನ ಕಂಪೌಂಡ್‌ನ ಹತ್ತಿರ ಹೋಗಿ ಗೇಟಿನಲ್ಲಿ ಒಳಹೊಕ್ಕರು. ಲೋಬೋನು ಆಗ ಪೋರ್ಚಿಕೇದಲ್ಲಿ 'ಹಿಂದೂ' ಪತ್ರಿಕೆಯನ್ನೋದುತಿದ್ದನು. ಬೈರಾಗಿಗಳು ಅಂಗಳಕ್ಕೆ ಬಂದುದು ಅವನ ಪ್ರೀತಿಯ ಟೈಗರ್ ನಾಯಿಯು ಬೊಗಳಲು ಅವನಿಗೆ ಗೊತ್ತಾಯಿತು. ಅವನು ಮುಖವೆತ್ತಿ ನೋಡಿ ಬೈರಾಗಿಗಳನ್ನು ಕಂಡು ನಿಮಗಿಲ್ಲೇನು ಕೆಲಸ? ಎಂದು ಸ್ವಲ್ಪ ಬೆದರಿಸುವಂತೆ ಮಾತನಾಡಲು, ದೊಡ್ಡ ಬೈರಾಗಿಯು ವಿನಯದಿಂದ ನಮಸ್ಕರಿಸಿ ಪೂಜ್ಯರೆ! ನಾವು ಬೈರಾಗಿಗಳು. ಈ ದಿನ ಊಳ

ಕೊಳ್ಳಲು ಸ್ವಲ್ಪ ಆಶ್ರಯ ಕೊಡಿರಿ. ನನ್ನ ಶಿಷ್ಯನಿಗೆ ಬಾಯಿ ಬರುವುದಿಲ್ಲ; ಅಲ್ಲದೆ ಈಗ ಇವನು ಹೊಟ್ಟೆನೋವಿನಿಂದ ಬಳಲಿರುವನು. ಈ ದಿನ ಮಧ್ಯಾಹ್ನ ಊಟವಾಗಿಲ್ಲವೆಂದು ಸವಿನಯದಿಂದ ವಿಜ್ಞಾಪಿಸಿದನು. ಲೋಬೋನು ಕ್ರೈಸ್ತ ಮತಾವಲಂಬಿಯೆಂದು ವಾಚಕರು ಊಹಿಸಿರ ಬಹುದು. ಅವನು ನಾನು ಕ್ರಿಶ್ಚನ್. ನಮ್ಮ ಮನೆಯಲ್ಲಿ ಹಿಂದುಗಳಾದ ನೀವು ಹೇಗೆ ಉಳಿಕೊಳ್ಳುವಿರಿ? ಎಂದು ಪ್ರಶ್ನಿಸಿದನು. ಅದಕ್ಕಾ ಬೈರಾಗಿಯು ಅವಕ್ಕೇನೂ ತೊಂದರೆಯಿಲ್ಲ. ನಮ್ಮೊಡನೆ ಅಕ್ಕಿಯಿದೆ. ಬೇಯಿಸಲು ಪಾತ್ರೆ ಮತ್ತು ಸ್ವಲ್ಪ ಸೌದೆ ಕೊಟ್ಟರೆ ನಾವು ಅಡುಗೆ ಮಾಡಿ ಆಯಾಸ ಪರಿಹರಿಸುವೆವೆಂದನು. ನೀವಿಲ್ಲಿ ಅಡುಗೆ ಮಾಡುವುದೆಲ್ಲಿ? ಎಂದು ವಿಜ್ಞಾನಿಯು ಕುತೂಹಲದಿಂದ ಕೇಳಲು ಬೈರಾಗಿಯು ನಿಮ್ಮ ಮನೆಯ ಹಿಂಬದಿಯ ಉದ್ಯಾನದಲ್ಲಿ ಒಂದು ಮೂಲೆಯಲ್ಲಿ ನೀವು ಒಪ್ಪಿದರೆ ಅಡುಗೆ ಮಾಡುವೆವೆಂದನು. ಲೋಬೋನು ಏನೂ ಮಾತನಾಡಲಿಲ್ಲ ಘನ ಹೊಂದಿದ ತನ್ನೊಡನೆ ಆಶ್ರಯಕೊಡಿರಿ, ಎಂದು ದೈನ್ಯದಿಂದ ಕೇಳುವಾಗ ಸಾಧ್ಯವಿಲ್ಲವೆಂದರೆ ತನ್ನ ದೊಡ್ಡಸ್ತಿಕೆಗೆ ಅವಮಾನವಾದಂತೆಯೆಂದವನು ತಿಳಿದು ಕಡೆಗೆ ಬೈರಾಗಿಯ ಹೇಳಿಕೆಯನ್ನು ಮನ್ನಿಸಿದನು. ಅವನ ಅಪ್ಪಣೆಯಂತೆ ಸೇವಕನೊಬ್ಬನು ಒಂದು ತಂಬಿಗೆ, ಅನ್ನ ಬೇಯಿಸಲು ಪಾತ್ರೆ ಮತ್ತು ಸ್ವಲ್ಪ ಬೇಳೆಯನ್ನು ಅಲ್ಲದೆ ಕಲ್ಲಿದ್ದಲನ್ನೂ ಬೆಂಕಿಪೆಟ್ಟಿಗೆಯನ್ನೂ ತಂದು ಬೈರಾಗಿಗಳ ಮುಂದಿಟ್ಟನು ಆಗ ಶಿಷ್ಯನಾದ ಬೈರಾಗಿಯು ಕೈ ಸಂಜ್ಞೆ ಮಾಡಿ ತನಗೆ ಉದರ ಶೂಲೆಯನ್ನು ಸಹಿಸಲಿಕ್ಕಾಗುವುದಿಲ್ಲವೆಂದು ತಿಳಿಸಲು ಬಳಲಿದವನಂತೆ ಗೋಚರಿಸಿದನು. ಬೈರಾಗಿಯು ನಾನವನಿಗೆ ಸ್ವಲ್ಪ ಮಲಗಲು ಈ ಜಗಲಿಯಲ್ಲಿ ಬಟ್ಟೆಹಾಸಿಕೊಟ್ಟರೆ ಅಡ್ಡಿಯಿಲ್ಲವಷ್ಟೆ! ಎಂದು ಕೇಳಲು, ಲೋಬೋನು ಅದು ಸಾಧ್ಯವಿಲ್ಲ. ಬೇಕಾದರೆ ಉದ್ಯಾನದಲ್ಲಿ ಆ ಗೋಳೀ ಮರದಡಿಯಲ್ಲಿ ಅವನನ್ನು ಮಲಗಿಸು ಎಂದನು.

ಬೈರಾಗಿಯು ಅನಂತರ ಶಿಷ್ಯನನ್ನು ಆ ಮನೆಯ ಹಿಂಬದಿಯಲ್ಲಿರುವ ಉದ್ಯಾನದ ಒಂದು ಬದಿಯಲ್ಲಿರುವ ಗೋಳೀ ಮರದಡಿಯಲ್ಲಿ ಬಟ್ಟೆಹಾಸಿ ಮಲಗಿಸಿದನು. ಶಿಷ್ಯನು ತನಗೆ ವಿಪರೀತ ಹೊಟ್ಟೆನೋವಾಗುತ್ತಿದೆಯೆಂದು ಕೈಸನ್ನೆಯಿಂದ ತಿಳಿಸಿ ಕಣ್ಣೀರು ಸುರಿಸುತ್ತಿದ್ದನು. ಆಗ ವಿಜ್ಞಾನಿಯು ಅಲ್ಲಿಗೆ ಬಂದು ಸಣ್ಣ ಬೈರಾಗಿಯ ದುರವಸ್ಥೆಯನ್ನು ಕಂಡು

ಮನೆ ಕರಗಿ ದೊಡ್ಡ ಬೈರಾಗಿಯೊಡನೆ ಹೀಗೆಂದನು:— ನಿನ್ನ ಶಿಷ್ಯನು ಉದರ ಶೂಲೆಯಿಂದ ಒಳಲಿ ಬಂದು ಹೋಗಿ ಸಂಕಟಪಡುತಿದ್ದಾನೆಂದು ತೋರುತ್ತಿದೆ. ನನ್ನ ಹತ್ತಿರ ಒಂದು ಉತ್ತಮ ಔಷಧವಿದೆ; ಇದನ್ನು ನೀರಿನಲ್ಲಿ ಹಾಕಿ ಕದಡಿ ಕುಡಿಯಲಿಕ್ಕೆ ಕೊಡು ಎಂದು ಹೇಳಿ, ಒಂದು ಮದ್ದಿನ ಪುಡಿಯನ್ನು ಕೊಟ್ಟು ಅಲ್ಲಿಂದ ಹೋದನು ದೊಡ್ಡ ಬೈರಾಗಿಯು ಬಟ್ಟಲಿನಲ್ಲಿ ಆ ಪುಡಿಯನ್ನು ಹಾಕಿ ನೀರಿನಲ್ಲಿ ಕದಡಿ ಶಿಷ್ಯನಿಗೆ ಕುಡಿಯಲು ಕೊಟ್ಟು ಕಣ್ಣು ಸನ್ನೆ ಮಾಡಲು ಗುರುವಿನ ಅಭಿಪ್ರಾಯ ತಿಳಿದ ಆ ಶಿಷ್ಯನು ಮೆಲ್ಲನೆ ಎದ್ದು ಬಟ್ಟಲಿನಲ್ಲಿದ್ದ ದ್ರಾವಕವನ್ನು ಬಹಳ ಚಮತ್ಕಾರದಿಂದ ಯಾರಿಗೂ ಅರಿಯದಂತೆ ಚೆಲ್ಲಿ ಅನಂತರ ಕುಡಿದಂತೆ ಮಾಡಿದನು ವಿಜ್ಞಾನಿಯು ಸ್ವಲ್ಪ ಸಮಯ ಕಳೆದು ಬಂದು ನಿನ್ನ ಶಿಷ್ಯನಿಗೆ ಹೊಟ್ಟೆ ನೋವು ಹೇಗಿದೆಯೆಂತೆಂದು ಬೈರಾಗಿಯೊಡನೆ ಕೇಳಲು, ಅವನು ನಿಮ್ಮ ಔಷಧದಿಂದ ನಮ್ಮ ಶಿಷ್ಯನು ಗುಣಹೊಂದಿದನು ಎಂದು ಹೇಳಿ ಕೃತಜ್ಞತೆಯನ್ನು ಸಲ್ಲಿಸಿದನು. ಲೋಬೋನು ಯಾವುದೋ ಕೆಲಸಕ್ಕಾಗಿ ಹೊರಟನು.

ಲೋಬೋನು ಮನೆಯಿಂದ ಹೋದ ನಂತರ ಸ್ವಲ್ಪ ಹೊತ್ತಿನಲ್ಲಿ ದೊಡ್ಡ ಬೈರಾಗಿಯೂ ಅವನ ಶಿಷ್ಯನೂ ಊಟ ತೀರಿಸಿದರು. ಅನಂತರ ಅವರಿಬ್ಬರೂ ತಂಬಾಕು ಸೇದುತ್ತಾ ಕುಳಿತುಕೊಂಡಿದ್ದರು. ಲೋಬೋನು ದೊಡ್ಡ ಅಧಿಕಾರದಲ್ಲಿರುವ ಹುದ್ದೇದಾರನಲ್ಲವೇ ? ಅವನ ಮನೆಯ ಗೇಟಿನ ಬಾಗಿಲಿನಲ್ಲಿ ಇಬ್ಬರು ಪೋಲೀಸರು ಯಾವಾಗಲೂ ರಾತ್ರಿ ಕತ್ತಿ ಬಂದೂಕುಗಳನ್ನು ಹಿಡಿದುಕೊಂಡು ಕಾವಲು ಮಾಡುತ್ತಿದ್ದರು. ಅವರೊಡನೆ ದೊಡ್ಡ ಬೈರಾಗಿಯು ಹರಟೆ ಹೊಡೆಯಲು ಪ್ರಾರಂಭಿಸಿದನು. ಅವನು ತನಗೆ ಸಾಮುದ್ರಿಕಾ ಶಾಸ್ತ್ರಗೊತ್ತಿದೆಯೆಂದು ಹೇಳಲು ಆ ಯಾವಿ ಕರಲ್ಲೊಬ್ಬನು ತನ್ನ ಹಸ್ತವನ್ನು ಬೈರಾಗಿಯ ಕಡೆಗೆ ನೀಡಿದನು. ಬೈರಾಗಿಯು ಕೆಲವು ವಿಷಯಗಳನ್ನು ಹೇಳಿದನು. ಅವುಗಳೆಲ್ಲ ಸರಿಯಾಗಿದ್ದುದರಿಂದ ಪೋಲೀಸರು ಆ ಗೋಸಾಯಿಯ ಪಾಂಡಿತ್ಯವನ್ನು ಹೊಗಳಿದರು. ಆಗ ಲೋಬೋನು ಮನೆಯಲ್ಲಿರಲಿಲ್ಲ. ಬೈರಾಗಿಯು ಅನಂತರ ಒಂದು ಕಾಗದದ ತುಂಡನ್ನು ಪೋಲೀಸರ ಕೈಗೆ ಕೊಡಲು ಅವರು ಅದರಲ್ಲೇನಿದೆಯೆಂದು ನೋಡಿದಾಗ ಆ ಕಾಗದದಲ್ಲಿರುವ

ದನ್ನು ಕಂಡು ಏನು ತಿಳಿಕೊಂಡರೋ ಒಲ್ಲವರಾರು? ಆದರೆ ಅನಂತರ ಅವರು ಜೈರಾಗಿಯನ್ನು ಬಹಳ ಗೌರವದಿಂದ ಕಾಣುತ್ತಾ ಅವನ ವಿಷಯ ವಾಗಿ ಭಯದಿಂದ ಮಾತನಾಡಲಾರಂಭಿಸಿದರು. ಸಾಧಾರಣ ಸಾಯಂ ಕಾಲ ಏಳೂವರೆ ಗಂಟೆಗೆ ವಿಜ್ಞಾನಿಯು ಅಲ್ಲಿಗೆ ಬಂದನು. ಜೈರಾ ಗಿಯು ಅನಂತರ ಆ ಮನೆಯ ಹಿಂಬದಿಯ ಉದ್ಯಾನಕ್ಕೆ ಹೋಗಿ ಬಟ್ಟೆ ಹಾಸಿ ಶಿಷ್ಯನ ಸಮೀಪ ಮಲಗಿದನು

ವಾಚಕ ವೃಂದ! ವಿಜ್ಞಾನಿಯ ಮನೆಯು ಬಹಳ ದೊಡ್ಡದಾ ಗಿಯೂ ರಮ್ಯವಾಗಿಯೂ ಇದ್ದಿತು. ಅದಕ್ಕೆ ಮಾಳಿಗೆಯಿದ್ದು ದಕ್ಷಿಣ ದಲ್ಲಿಯೂ ಉದ್ಯಾನವಿದ್ದಿತು. ರಾತ್ರಿ ಉದ್ಯಾನವು ವಿದ್ಯುತ್ ದೀಪಗಳ ಉರಿಯುತಿದ್ದಾಗ ಬಹಳ ಸೌಂದರ್ಯವಾಗಿ ಪ್ರೇಕ್ಷಕರ ಮನಸನ್ನಾ ಕರ್ಷಿಸುವಂತೆ ಶೋಭಿಸುತಿತ್ತು ಬಣ್ಣ ಬಣ್ಣದ ಹೂ ಗಿಡಗಳು ಅದರೆಡೆ ಯಲ್ಲಿ ತಳ ತಳಿಸಿ ಶೋಭಿಸುತಿದ್ದ ಅರೆ ಬಿರಿದ ಹೂ ಗೊಂಚಲಗಳು ಇನ್ನು ಈಗ ತಾನೇ ಚಿಗುರಿದ ಎಳೆಹಸುರು ನಸುಗೆಂಪು ಚಿಗುರುಗಳು ಕುಲು ಕುಲನೆ ನಗುತಿದ್ದಂತೆ ಕಾಣುತಿದ್ದುವು ಚಿತ್ರ ವಿಚಿತ್ರ ಬಣ್ಣಗಳುಳ್ಳ ಗಿಡ ಗಳು ಹಿಂಡು ಹಿಂಡಾಗಿದ್ದು ಬಣ್ಣ ಬಣ್ಣದ ಕುರಿ ಹಿಂಡಿನಂತೆ ಶೋಭಿ ಸುತಿತ್ತು. ಅಲ್ಲಲ್ಲಿ ಅನೇಕ ಕಾರಂಜಿಗಳಿಂದ ನೀರು ಚಿಮ್ಮುತ್ತಿದ್ದಾಗ ಅಡಕೆ ಮರದ ಎಳತಾದ ಬಿಳಿ ಸಿಂಗಾರದಂತೆ ಕಾಣುತಿತ್ತು. ಪಡು ಗಡೆಯ ಹೂ ತೋಟದಲ್ಲಿ ಸುಂದರ ಕೃತಕ ಸರೋವರವಿದ್ದಿತು ಆ ಸರೋವರದ ವಿಷಯ ವಾಚಕರು ಅದನ್ನು ಅದೊಂದು ದಿನ ನೋಡಿರ ಬಹುದು. ತೆಂಕಣ ದಿಕ್ಕಿನ ಉದ್ಯಾನದಲ್ಲಿ ಒಂದು ಮಂಟಪವಿತ್ತು. ಆ ಮಂಟಪವು ಚಂದ್ರಕಾಂತ ಶಿಲೆಯಿಂದ ನಿರ್ಮಿಸಲ್ಪಟ್ಟ ಯೇಸುಕ್ರಿಸ್ತನ ಪ್ರತಿಮೆಯಿಂದಲಾಗಿ ಕಂಗೊಳಿಸುತಿತ್ತು. ಆ ವಿಗ್ರಹವನ್ನು ಒಂದು ಪೀಠದ ಮೇಲೆ ನಿಲ್ಲುವಂತೆ ಮಾಡಿದ್ದರು. ಪೀಠದ ಸುತ್ತಲೂ ಹೂ ಗಿಡಗಳ ಪಾತ್ರೆಗಳನ್ನಿಟ್ಟಿದ್ದಲ್ಲದೆ ಪೀಠದ ಸುತ್ತಲೂ ರಾತ್ರಿ ಯಾವಾ ಗಲೂ ಕಸ್ತೂರಿ, ಕರ್ಪೂರ ಮೊದಲಾದ ಸುಗಂಧ ವಸ್ತುಗಳನ್ನಿಡುತಿದ್ದರು ಪೀಠದ ಸುತ್ತಲೂ ಎರಡು ಮೂರಡಿ ಜಾಗ ಬಿಟ್ಟು ಕಬ್ಬಿಣದ ವೃತ್ತಾ ಕಾರದ ಬೇಲಿಯನ್ನು ಹಾಕಿದ್ದರು ವಿದ್ಯುತ್ ದ್ವೀಪದ ಉಜ್ವಲವಾದ ಪ್ರಭೆಯಲ್ಲಿ ವಿಗ್ರಹವು ಥಳ ಥಳಿಸುತಿತ್ತು. ಆ ಕಂಪೌಂಡಿನ ಸುತ್ತಲೂ

ಬಲವಾದ ಗೋಡೆಗಳಿದ್ದುವು. ಕೆಲವು ಪರಿಮಳದ ಹೂವಿನ ಲತಾ ಬಳ್ಳಿಗಳು ಗೋಡೆಯನ್ನಾಕ್ರಮಿಸಿದ್ದುವು. ಅಲ್ಲಿರುವ ಪಾರಿಜಾತ ಮರದಲ್ಲಿ ಅನೇಕ ಹಕ್ಕಿಗಳ ಗೂಡಿದ್ದುವು. ಅವುಗಳಿಂದ ಮರಿಗಳು ಚಿಲಿಪಿಲಿ ಶಬ್ದವನ್ನುಂಟು ಮಾಡುತಿದ್ದುವು. ಆ ಉದ್ಯಾನದ ಸೌಂದರ್ಯವನ್ನು ಬೈರಾಗಿಗಳು ಬಹಳ ಕುತೂಹಲದಿಂದ ನೋಡುತಿದ್ದರು. ಆಗ ಲೋಬೋನು ದೊಡ್ಡ ಬೈರಾಗಿಯೊಡನೆ ನೀನು ಅಲ್ಲಿ ತಿರುಗಾಡುತ್ತಾ ನೋಡುತ್ತಿರುವುದೇನನ್ನು ? ಎಂದು ಮಂದಹಾಸದಿಂದ ಕೇಳಲು ಆ ಗೋಸ್ವಾಯಿಯು ಸ್ವಾಮಿ, ನಿಮ್ಮ ಉದ್ಯಾನದ ಶೋಭೆಯನ್ನು ಭಾವನಾ ಪರವಶರಾಗಿ ನೋಡುತ್ತಿರುವೆವು ಎಂದನು ಆಗ ವಿಜ್ಞಾನಿಯು ಗೋಸಾಯಿಗಳೇ ನೀವು ಮನತಣಿವಷ್ಟು ಸಮಯ ಉದ್ಯಾನದಲ್ಲಿಯೇ ಸಂಚರಿಸಿರಿ. ಎಂದು ಹೇಳಿ ಮನೆಯ ಮಾಳಿಗೆಯನ್ನೇರಿದನು. ಬೈರಾಗಿಗಳಿಬ್ಬರೂ ಉದ್ಯಾನದ ಸೊಬಗನ್ನೀಕ್ಷಿಸುತ್ತಾ ಕಡೆಗೆ ಆ ಮಂಟಪದ ಹತ್ತಿರ ಬಂದರು. ಮಂಟಪಕ್ಕೆ ಚಿತ್ರ ವಿಚಿತ್ರವಾದ ಹೂಗಳುಳ್ಳ ಬಳ್ಳಿಗಳು ಹಬ್ಬಿಕೊಂಡಿದ್ದುವು ಗಾಳಿಯೊಡನೆ ಕಸ್ತೂರಿಯ ಪರಿಮಳವು ಬೆರೆತಿದ್ದಿತು ದೊಡ್ಡ ಬೈರಾಗಿಯು ಮಂಟಪದಲ್ಲಿದ್ದ ವಿಗ್ರಹವನ್ನು ಟಕ ಮಕನೆ ನೋಡುತ್ತಿರಲು ಶಿಷ್ಯನು ಆ ವಿಗ್ರಹದ ಸುತ್ತಲೂ ಇರುವ ಬೇಲಿಯಿಂದ ಹೊರಗಡೆ ಸುತ್ತಲೂ ಚೆನ್ನಾಗಿ ಲಕ್ಷ್ಯವಿಟ್ಟು ನೋಡುತಿದ್ದನು. ವಿಗ್ರಹದ ಪೀಠದ ಸುತ್ತಲೂ ಅನೇಕ ಪುಷ್ಪ ಪಾತ್ರೆಗಳಿದ್ದುವಷ್ಟೆ? ಅವುಗಳಲ್ಲೊಂದು ಎರಡಡಿ ವ್ಯಾಸವುಳ್ಳದಾಗಿದ್ದು ಇತರ ಹೂ ಪಾತ್ರೆಗಳಿಗಿಂತ ದೊಡ್ಡದಾಗಿತ್ತು. ಸಣ್ಣ ಬೈರಾಗಿಯು ಆ ಪಾತ್ರೆಯನ್ನು ಕಂಡು ಆಶ್ಚರ್ಯಗೊಂಡು ಮೆಲ್ಲನೆ ಬೇಲಿಯೊಳಗಿನಿಂದ ತನ್ನ ಕಾಲನ್ನು ಒಳಗಿಟ್ಟು ಆ ಪಾತ್ರೆಯ ಹತ್ತಿರ ಒದೆದನು. ಆಗ ಒಳಗಡೆಯಲ್ಲಿ ಟೊಳ್ಳಾಗಿರುವಂತೆ ಅವನಿಗೆ ಶಬ್ದದಿಂದ ತಿಳಿಯಲು ಗುರುವನ್ನು ಸಂಕೇತದಿಂದ ಕರೆದು ತನ್ನ ಸಂಶಯವನ್ನು ಸನ್ನೆಯಿಂದ ತಿಳಿಸಿದನು ಅನಂತರ ಅವರಿಬ್ಬರೂ ತಾವು ಮೊದಲಿದ್ದ ಸ್ಥಳಕ್ಕೆ ಬಂದು ಮಲಗಿಕೊಂಡರು.

ರಾತ್ರಿ ಸಾಧಾರಣ ಹತ್ತೂವರೆ ತಾಸಾಗಿರಬಹುದು. ಎಲ್ಲೆಲ್ಲೂ ನೀರವ. ಉದ್ಯಾನದಲ್ಲಿ ಮಲಗಿಕೊಂಡಿರುವ ಬೈರಾಗಿಗಳಿಬ್ಬರೂ ಗಾಢ ನಿದ್ರೆಯಿಂದ ಗೊರಕೆ ಹೊಡೆಯುತಿದ್ದರು. ವಿದ್ಯುತ್ ದೀಪಗಳನ್ನೆಲ್ಲ

ಆರಿಸಿ ಈಗ ಒಂದು ತಾಸಾಯಿತು. ಜೋಜೋನ ಮನೆಯಲ್ಲಿದ್ದ ಎಲ್ಲಾ ದೀಪಗಳಾರಿದ್ದರೂ ಮಾಳಿಗೆಯಲ್ಲಿ ಆದೊಂದು ಕೋಣೆಯಲ್ಲಿ ದೀಪ ವಿದ್ದಿತೆಂದು ಕಿಟಕಿಯಿಂದ ಹೊರಟ ಕಿರಣಗಳಿಂದ ವ್ಯಕ್ತವಾಗುತಿತ್ತು. ಸ್ವಲ್ಪ ಸಮಯದಲ್ಲಿ ಕಾಲ ಸಪ್ಪಳ ಕೇಳಲಾರಂಭಿಸಲು ಆ ದೀಪವಾರಿತು. ವೈರಾಗಿಗಳಿಬ್ಬರೂ ನಿದ್ರೆ ಬಂದವರಂತೆ ನಟಿಸುತಿದ್ದರಲ್ಲದೆ ನಿಜವಾಗಿಯೂ ಅವರು ನಿದ್ರಿಸಿರಲಿಲ್ಲ. ಆ ಕಗ್ಗತ್ತಲೆಯಲ್ಲಿಯೂ ಆದಾರೋ ಆ ಮನೆ ಯಿಂದ ದಕ್ಷಿಣದ ಉದ್ಯಾನಕ್ಕೆ ಮೆಲ್ಲ ಮೆಲ್ಲನೆ ಬರುತ್ತಿರುವುದು ಆ ವೈರಾಗಿ ಗಳಿಗೆ ಗೊತ್ತಾಗಿರಬೇಕು ಇರಲಿ. ಆ ವ್ಯಕ್ತಿಯು ವೈರಾಗಿಗಳು ಮಲ ಗಿದಲ್ಲಿಗೆ ಬಂದು ಒಂದು ಕ್ಷಣ ಆಲೈಸಿತು ಗೋಸಾಯಿಗಳು ಗೊರಕೆ ಹೊಡೆಯುತಿದ್ದುದ್ದರಿಂದ ಸಮಾಧಾನಗೊಂಡ ಆ ವ್ಯಕಿಯು ಅನಂತರ ಮೆಲ್ಲನೆ ಮಂಟಪದ ಸಮೀಪಕ್ಕೆ ಸರಿಯಿತು ಅನಂತರ ಅಲ್ಲಿ ನಾಲ್ಕೈದು ನಿಮಿಷ ನಿಂತು ಸುತ್ತಲೂ ತೀಕ್ಷ್ಣ ದೃಷ್ಟಿಯಿಂದ ನೋಡಿ ಆದಾರೂ ತನ್ನನ್ನು ನೋಡುತ್ತಿಲ್ಲವೆಂದು ತಿಳಿದು ಮೆಲ್ಲನೆ ವಿಗ್ರಹದ ಸುತ್ತಲಿರುವ ಜೇಲಿ ಯನ್ನು ಸದ್ದಾಗದಂತೆ ಹಾರಿತು - ಇಷ್ಟರವರೆಗೆ ಸುಮ್ಮನಿದ್ದ ವೈರಾಗಿ ಗಳೀಗ ಮೆಲ್ಲನೆ ಎದ್ದು ಆ ವ್ಯಕ್ತಿಗೆ ಗೋಚರವಾಗದಂತೆ ಲತಾಬಳ್ಳಿಗಳೆ ಡೆಯಲ್ಲಿ ಮೆಲ್ಲನೆ ಮೈಮರೆಸಿಕೊಂಡು ಮಂಟಪದ ಹಿಂಬದಿಯಲ್ಲಿ ಬಂದು ನಿಂತರು. ಮೇಲೆ ಹೇಳಿದ ವ್ಯಕ್ತಿಯು ದೊಡ್ಡ ಹೂ ಪಾತ್ರೆಯನ್ನು ಸ್ವಲ್ಪ ದೂರದಲ್ಲಿಟ್ಟಿತು. ಅನಂತರ ಏನನ್ನೋ ತಿರುಗಿಸಲು ಅಲ್ಲೊಂದು ದ್ವಾರ ಉಂಟಾಯಿತು. ಕೂಡಲೇ ಆ ವ್ಯಕ್ತಿಯು ಆ ದ್ವಾರದಲ್ಲಿ ನೆಲ ದೊಳಗಿಳಿಯಿತು. ಈಗ ವೈರಾಗಿಗಳು ಸಂದೇಹದಲ್ಲಿ ಬಿದ್ದರು. ಈಗ ಆ ವ್ಯಕ್ತಿಯನ್ನನುಸರಿಸಿ ಹೋಗಲೆ! ಹಾಗಾದರೆ ಎಲ್ಲಿಯಾದರೂ ಅಪಾಯ ಉಂಟಾದರೆ? ಆಗಲಿ. ನಮ್ಮ ಸದುದ್ದೇಶವನ್ನು ಸಾಧಿಸುವಾಗ ಎಂತಹ ವಿಘ್ನವೊದಗಿದರೂ ಚಿಂತೆಯಿಲ್ಲ ಎಂದು ಸಮಾಧಾನಪಟ್ಟು ಅವರು ಮುಂದೆ ಹೋದ ವ್ಯಕ್ತಿಯು ನೆಲದೊಳಗೆ ಹೋದ ದ್ವಾರದ ಹತ್ತಿರ ಬಂದು ಮೆಲ್ಲನೆ ಇಣಿಕಿ ನೋಡಲು ಸೋಪಾನ ಪಂಕ್ತಿಗಳು ಮಸುಕಾಗಿ ಕಾಣಿಸಿದುವು. ಆ ಮೆಟ್ಟಿಲುಗಳಲ್ಲಿ ವೈರಾಗಿಗಳು ಸದ್ದಾಗದಂತೆ ಕೆಳಗಿಳಿದರು. ಸಾಧಾ ರಣ ಹತ್ತು ಹದಿನೈದು ಮೆಟ್ಟಿಲುಗಳನ್ನು ಇಳಿದ ನಂತರ ವಿಸ್ತಾರವಾ ದೊಂದು ಕೋಣೆಯು ಅವರಿಗೆ ಕಾಣಿಸಿತು. ಸಣ್ಣ ವೈರಾಗಿಯು ಇಷ್ಟರ

ವರೆಗೆ ಅಡಗಿಸಿಟ್ಟುಕೊಂಡಿದ್ದ ಟೋರ್ಚ್ ಲೈಟನ್ನು ಹೊರ ತೆಗೆದು ಉರಿಸಲು ದೊಡ್ಡ ಬೈರಾಗಿಯು ಆ ಕೋಣೆಯನ್ನು ಬಹಳ ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸಿ ನೋಡಿದನು. ಅವರು ಬಂದ ದಾರಿಯಲ್ಲದೆ ಬೇರಾವ ದ್ವಾರವೂ ಆ ಕೊಠಡಿಗೆ ಇಲ್ಲವೆಂದು ತಿಳಿಯಲು ಅವರಿಬ್ಬರೂ ಸಖೇದಾಶ್ಚರ್ಯಗೊಂಡರು. ಹಾಗಾದರೆ ಮೊದಲು ಬಂದ ವ್ಯಕ್ತಿಯು ಇಲ್ಲಿಂದೆಲ್ಲಿಗೆ ಹೋಯಿತು ? ಎಂದವರು ತಿಳಿಯದೆ ದಿಙ್ಮೂಢರಾದರು. ಆದರೆ ಧೈರ್ಯಗೆಡದೆ ಏನಾದರೂ ಗುಪ್ತದ್ವಾರವಿರುವುದೋ ಎಂದು ಪರೀಕ್ಷಿಸುತ್ತಿದ್ದರು. ಟೋರ್ಚ್ ಲೈಟಿನ ಪ್ರಕಾಶದಲ್ಲಿ ಅಲ್ಲಿ ಬಿದ್ದಿರುವ ಧೂಳಿಯಲ್ಲಿ ಕಾಲಿನ ಗುರುತುಗಳು ಚೆನ್ನಾಗಿ ಮೂಡಿರುವುದನ್ನು ಕಾಣಲು ಬೈರಾಗಿಯು ಆ ಹೆಜ್ಜೆಗಳ ಗುರುತುಗಳನ್ನು ನೋಡಲು ಅವು ತನ್ನವಲ್ಲವೆಂದು ತಿಳಿದನು. ಹಾಗಾದರೆ ಆ ಕಾಲಿನ ಗುರುತುಗಳು ಮೊದಲು ಬಂದ ವ್ಯಕ್ತಿಯವುಗಳವೆಂದು ನಿರ್ವಿವಾದವಾಗಿ ತಿಳಿಯಬಹುದಷ್ಟೆ ? ಆ ಹೆಜ್ಜೆಯ ಗುರುತುಗಳನ್ನು ನೋಡುತ್ತಾ ಅವರು ಕೋಣೆಯಲ್ಲಿ ತಿರುಗುತ್ತಿರಲು ಆ ಕೋಣೆಯ ಉತ್ತರ ದಿಕ್ಕಿನಲ್ಲಿ ಒಂದು ಕಡೆಯಲ್ಲಿ ಅದೇ ವ್ಯಕ್ತಿಯ ಕಾಲಿನ ಹೆಜ್ಜೆಗಳು ಅನೇಕ ಮೂಡಿರುವುದನ್ನು ಕಂಡು ಅವರಾ ಕಡೆಯಲ್ಲಿ ಏನೋ ರಹಸ್ಯವಾದ ದಾರಿಯಿದೆಯೆಂದು ತರ್ಕಿಸಿದರು. ಅವರಲ್ಲಿ ಎಷ್ಟು ಪ್ರಯತ್ನ ಪಟ್ಟು ನೋಡಿದರೂ-ಏನೂ ರಹಸ್ಯಮಾರ್ಗದ ವಿಷಯ ಗೊತ್ತಾಗದಿರಲು ಒಂದು ಸಲ ಸಣ್ಣಬೈರಾಗಿಯು ಟೋರ್ಚ ಲೈಟಿನ ಪ್ರಕಾಶವನ್ನು ಆ ಕೋಣೆಯ ಮೇಲ್ಭಾಗಕ್ಕೆ ಬೀಳುವಂತೆ ಮಾಡಿದನು. ಆಗ ಅಲ್ಲೊಂದು ಸಣ್ಣ ಲೋಹದ ಸರಿಗೆ ನೇತಾಡಿಕೊಂಡಿರುವುದು ಅವನಿಗೆ ಕಾಣಿಸಲು ಅವನದನ್ನು ದೊಡ್ಡ ಬೈರಾಗಿಯೊಡನೆ ಹೇಳಿದನು. ಆಗ ಆ ಗೋಸಾವಿಯು ಈ ಸರಿಗೆಯನ್ನೆಳೆದರೆ ಗುಪ್ತ ಮಾರ್ಗವುಂಟಾಗಬಹುದೆಂದು ಆ ಸರಿಗೆಯನ್ನೆಳೆಯಲು ಅದು ಎತ್ತರದಲ್ಲಿರುವುದರಿಂದ ಮೊದಲು ಬಂದ ವ್ಯಕ್ತಿಯು ಮೇಲಕ್ಕೆ ಹಾರಿ ಸಫಲನಾಗಿ ಉಂಟಾದ ಮಾರ್ಗದಿಂದ ತನ್ನ ಸಂಕೇತ ಸ್ಥಾನಕ್ಕೆ ಹೋಗಿರಬಹುದು ಎಂದು ತರ್ಕಿಸಿದನು. ದೊಡ್ಡ ಬೈರಾಗಿಯು ಶಿಷ್ಯನೊಡನೆ ನೀನು ನನ್ನ ಹೆಗಲ ಮೇಲೇರಿ ಆ ಸರಿಗೆಯನ್ನೆಳೆಯೆಂದನು. ಅದರಂತವನು ಸರಿಗೆಯನ್ನೆಳೆಯಲು ಆ ಕೋಣೆಯ ಉತ್ತರ ದಿಕ್ಕಿನ ಗೋಡೆಯಲ್ಲಿ ಒಬ್ಬ ಮನುಷ್ಯನಿಗೆ ಹೋಗುವಷ್ಟು ದೊಡ್ಡ ಕಿಂಡಿಯುಂಟಾಗಿ ಗೋಡೆಯು

ಪಕ್ಕಕ್ಕೆ ಸರಿಯಿತು. ಅವರಿಬ್ಬರೂ ಆ ದ್ವಾರದಲ್ಲಿ ಮುಂದುವರಿದ ಕೂಡಲೇ ಆ ದ್ವಾರವು ಮಾಯವಾಗಿ ಗೋಡೆಯು ಮೊದಲಿನಂತಾಯಿತು. ಆ ದಾರಿಯು ಸುರಂಗ ಒಂದರಲ್ಲಿ ಉದ್ದಕ್ಕೆ ಚಾಚಿಕೊಂಡಿದೆಯೆಂದವರಿಗೆ ತಿಳಿಯಿತು. ಅವರು ಮುಂದುವರಿದು ಸಾಧಾರಣ ಒಂದು ಮೈಲು ಹೋಗಲು ಆ ದಾರಿಗೆ ಅಡ್ಡವಾಗಿ ಮತ್ತೊಂದು ಸುರಂಗ ಮಾರ್ಗ ಹಾದು ಹೋಗುತ್ತಿದ್ದುದನ್ನು ಕಂಡು ಇನ್ನಾವ ದಾರಿಯಲ್ಲಿ ಹೋಗಲಿ ಎಂದವರು ಆಲೋಚನಾಮಗ್ನರಾದರು; ಆದರವರು ಲೈಟ್‌ನ ಬೆಳಕಿನಲ್ಲಿ ಕಾಲಿನ ಹೆಜ್ಜೆಗಳು ಮೂಡಿರುವ ದಾರಿಯನ್ನು ಕಂಡು ಅದರಲ್ಲಿಯೇ ಮುಂದುವರಿದರು

ಅಲ್ಲಿಂದ ಆ ಬೈರಾಗಿಗಳು ಸಾಧಾರಣ ಎರಡು ಫರ್ಲಾಂಗ್ ದೂರ ಹೋದರು. ಆಗಾ ದಾರಿಯು ಸಮಾಪ್ತವಾಗಿ ಅಲ್ಲಿಂದ ಸೋಪಾನಗಳು ಮೇಲೇರಿ ಹೋಗಿದ್ದುದರಿಂದ ಅದರಲ್ಲಿ ಅವರಿಬ್ಬರೂ ಮೇಲೇರಿ ಹೋದರು ಆಗ ಎದುರಿನಲ್ಲೊಂದು ಗೋಡೆಯಿರುವುದು ಅವರಿಗೆ ಕಾಣಿಸಿತು. ಅಲ್ಲಿ ಲೈಟಿನ ಪ್ರಕಾಶದಲ್ಲಿ ಒಂದು ಕೊಂಡಿ ಕಾಣಿಸಿತು ದೊಡ್ಡ ಬೈರಾಗಿಯು ಅದನ್ನೊತ್ತಲು ಬಾಗಿಲುಂಟಾಗಲು ಆ ಬಾಗಿಲಿನಲ್ಲವರು ಮುಂದೆ ಹೋದರು. ಆಗ ಅಲ್ಲೊಂದು ಕೋಣೆ ಸಿಕ್ಕಿತು. ಆ ಕೋಣೆಯಿಂದ ಮೇಲೇರಿ ಹೋಗಲು ಒಂದು ಏಣಿಯಿದ್ದಿತು ಅದರಲ್ಲವರು ಮೇಲೇರಿ ಹೋಗಲು ವಿಶಾಲವಾದೊಂದು ಹೋಲ್‌ಗೆ ತಲಪಿದರು. ಆ ಹೋಲ್ ಬಹಳ ಅಲಂಕರಿಸಲ್ಪಟ್ಟಿದ್ದಿತು. ಅನೇಕ ತರುಣ-ತರುಣಿಯರ ಹಾವ ಭಾವಗಳಿಂದ ಕೂಡಿದ ಚಿತ್ರಪಟಗಳನ್ನೂ ದೇಶಭಕ್ತರ ಭಾವಚಿತ್ರಗಳನ್ನೂ ಆ ಗೋಡೆಯಲ್ಲಿ ನೇತಾಡಿಸಿದ್ದರು ಒಂದು ದುಂಡುಮೇಜಿನ ಸುತ್ತಲೂ ಮೂರು ನಾಲ್ಕು ಕುರ್ಚಿಗಳಿದ್ದುವು. ಶಿಷ್ಯನು ಸ್ವಿಚ್ ಒತ್ತಲು ವಿದ್ಯುತ್ ದೀಪಗಳು ಬೆಳಗಿದುವು. ದೊಡ್ಡ ಬೈರಾಗಿಯು ಆ ಮೇಜಿನ ಡ್ರವರ್‌ನಲ್ಲೇನಾದರೂ ಗುಪ್ತ ಪತ್ರಗಳಿರುವವೋ ಎಂದು ಪರೀಕ್ಷಿಸಲಾರಂಭಿಸಿದನು. ಅಷ್ಟರಲ್ಲೊಂದು ಘಟನೆ ನಡೆಯಿತು. ಮೊದಲು ಬಂದ ವ್ಯಕ್ತಿಯು ಆ ಹೋಲ್‌ನ ಪಕ್ಕದ ಕೋಣೆಯಲ್ಲಿದ್ದನು ಇಷ್ಟರವರೆಗೆ ಅವನಿಗೆ ಬೈರಾಗಿಗಳು ತನ್ನನ್ನು ಅನುಸರಿಸಿ ಬಂದದು ಸ್ವಲ್ಪಸಹಾ ತಿಳಿಯಲಿಲ್ಲ ಈಗ ಹೋಲ್‌ನಲ್ಲಿ ಬೆಳಕು ಕಾಣಲು ಅವನು ತನ್ನ ಕೋಣೆಯಲ್ಲಿದ್ದ ಕೊಂಡಿಯೊಂದ

ನ್ನೊತ್ತಿದನು. ಆಗ ಆ ಕೋಣೆಯ ಗೋಡೆಯು ಒಂದು ಕಡೆಯಲ್ಲಿ ಸ್ವಲ್ಪ ವಾಯವಾಗಿ ಅಲ್ಲಿಂದು ಆಯಾಕಾರದ ಕನ್ನಡಿಯುಂಟಾಯಿತು. ಅವನಾ ಕನ್ನಡಿಯಲ್ಲಿ ನೋಡಲು ಬೈರಾಗಿಗಳು ಮೇಜಿನ ಹತ್ತಿರ ಏನನ್ನೋ ಹುಡುಕುತ್ತಿದ್ದುದನ್ನು ಕಂಡನು. ಬೈರಾಗಿಗಳಾಗಿದ್ದ ವೇಷಧಾರಿಗಳಾದ ಪತ್ತೆದಾರಿ ಸಹೋದರರೇ ಎಂದವನು ಈಗ ತಿಳಿದನು. ವಾಚಕರು ಗೋಸಾಯಿಗಳ ವೇಷದಲ್ಲಿ ಬಂದವರೇ ಕರಮುಚಂದ, ರಾಮದಾಸರೆಂದು ಮೊದಲೇ ಊಹಿಸಬಹುದಾದುದರಿಂದ ಈಗ ಬೇರೆ ಹೇಳುವ ಅಗತ್ಯವಿಲ್ಲ ವಷ್ಟೆ! ಮುಂದಿನಿಂದ ಬಂದ ವ್ಯಕ್ತಿಯೇ ವಿಜ್ಞಾನಿಯಾದ ಲೋಬೋನೆಂದು ತೈಲಬುದ್ಧಿಯ ಪಾಠಕರು ತರ್ಕಿಸಬಹುದು. ಇರಲಿ.

ಲೋಬೋನು ಕರಮುಚಂದನ ಅದ್ಭುತ ವೇಷಪಲ್ಲಟಿಸುವ ವಿದ್ಯೆಗೆ ಆಶ್ಚರಿಪಟ್ಟನು. ಇವನು ತನ್ನ ಗುಪ್ತರಹಸ್ಯವನ್ನು ಬಯಲಿಗೆಳೆಯುದಿರ ಲಾರನೆಂದು ತಿಳಿದು ಹೇಗಾದರೂ ಅವನನ್ನಿಲ್ಲಿಂದ ಹೊರಹೋಗದಂತೆ ಮಾಡಬೇಕೆಂದು ದೃಢಸಂಕಲ್ಪ ಮಾಡಿದನು ಕೂಡಲೆ ಅವನು 'ಟಿಪ್ ಟಿಪ್'ನೆ ಬಟನ್ನು ಶಬ್ದಿಸುತ್ತಿರಲು ಆ ಕೋಣೆಯಿಂದ ಮತ್ತೊಂದು ಕೋಣೆಗೆ ಹೋದನು. ಆ ಕೋಣೆಯು ಬಹಳ ದೊಡ್ಡದಾಗಿತ್ತು. ಅದರ ಗೋಡೆ ಗಳಲ್ಲಿ ಅನೇಕ ಕೊಂಡಿಗಳಿದ್ದುವು ಅವನು ಒಂದು ದೊಡ್ಡ ಕೊಂಡಿಯು ನ್ನೊತ್ತಲು ಹಾ, ಏನೆಂದು ಹೇಳಲಿ!!! ಬೈರಾಗಿಗಳ ವೇಷದಲ್ಲಿದ್ದ ಪತ್ತೆದಾರಿ ಸಹೋದರರು ನಿಂತಿದ್ದ ಆ ದೊಡ್ಡ ಹೊಲ್ ಫಕ್ಕನೆ ಕೆಳಗೆ ಕುಸಿದು ಬಿದ್ದು ಒಂದು ಬದಿಗೆ ಮಾಗಲು ಅವರಿಬ್ಬರೂ ಕೆಳಗಡೆ ಬೀಳಲು ಪುನಃ ಆ ಹೋಲ್ ತನ್ನ ಮೊದಲಿನ ಸ್ಥಾನದಲ್ಲಿ ನಿಂತಿತು. ಅವರು ತಮ್ಮ ಅಜಾ ಗರೂಕತೆಗಾಗಿ ಪರಿತಪಿಸಿದರು, ಆದರೆ ಆ ರೀತಿ ಹೆಚ್ಚುಸಮಯ ಚಿಂತಿ ಸುತ್ತಾ ಕುಳಿತುಕೊಳ್ಳುವವರು ಅವರಾಗಿರಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಮಾತನಾಡುವ ಶಬ್ದ ಕೇಳಿಸಿತು. ಆ ಸ್ವರವನ್ನು ಕೇಳಿ ಮಾತನಾಡುತ್ತಿ ರುವ ವ್ಯಕ್ತಿಯು ವಿಜ್ಞಾನಿಯೆಂದು ಅವರಿಗೆ ತಿಳಿಯಿತು. ಲೋಬೋನು ಪತ್ತೆದಾರಿಗಳೇ, ನೀವೀಗ ಬೋನಿನಲ್ಲಿ ಸಿಕ್ಕಿದ ಸಿಂಹಗಳಂತಿರುವಿರಿ. ಇನ್ನು ನಿಮ್ಮಾಟವು ನಡೆಯಲಾರದು, ಎಂದು ಹೇಳಿ ಗಹಗಹಿಸಿ ನಕ್ಕನು. ಕರಮುಚಂದನು ಪಿಟ್ಟೆಂದು ಮಾತನಾಡಲಿಲ್ಲ. ರಾಮುದಾಸನು ಎಲೆ! ದುಷ್ಟನೆ, ಅಡಗಿನಿಂತು ಬೊಗಳುವಿಯೇಕೆ? ಎದುರಿಗೆ ಬಾ, ಎನ್ನಲು ಕರಮು

ಚಂದನು ತಮ್ಮನೊಡನೆ ಸುಮ್ಮನಿರೆಂದನು. ಆಗ ಘಣ....ಘಣ....ಘಣ ವೆಂದು ನಾಲ್ಕೈದು ಸಾರಿ ಶಬ್ದವಾಯಿತು ಕರಮಚಂದನು ಶಬ್ದಾರ್ಥವೇ ನೆಂದು ತಿಳಿಯದೆ ಆ ಕೋಣೆಯ ಸುತ್ತಲೂ ಎವೆಯಿಕ್ಕದೆ ನೋಡುತಿದ್ದನು. ಅಷ್ಟರಲ್ಲಿ ಆ ಕೋಣೆಯ ಮೇಲ್ಭಾಗದಲ್ಲಿ ಒಂದು ಸರಳಿನ ಕಿಟಿಕಿಯುಂಟಾ ಯಿತು. ಪತ್ತೆದಾರಿ ಸಹೋದರರು ಆ ಕಿಟಕಿಯನ್ನು ನೋಡುತ್ತಿರಲು, ಸ್ಮಿತವದನನಾಗಿದ್ದ ಲೋಬೋನ ಮುಖವು ಅವರಿಗೆ ಅಲ್ಲಿ ಕಾಣಿಸಿತು. ಲೋಬೋನು ಕರಮಚಂದನೊಡನೆ ಪತ್ತೆದಾರಿಯೇ, ನೀನಿನ್ನು ದೇವರನ್ನು ನೆನೆಯುತ್ತಾ ಸುಮ್ಮನಿರು. ನಿನಗಿನ್ನು ಆಯುಸ್ಸು ಬರೀ ಒಂದು ತಿಂಗ ಳೆಂದನು ಕರಮಚಂದನಾಗ ಏನೂ ಮಾತನಾಡದಿರಲು, ವಿಜ್ಞಾನಿಯು ಏನು ತುಟಿ ಬಿಚ್ಚುವದಿಲ್ಲವಲ್ಲಾ! ಎಂದನು. ರಾಮದಾಸನಾಗ ಎಲೆ ನೀಚ ವಿಜ್ಞಾನಿಯೆ! ಬಾಯಿಗೆ ಬಂದಂತೆ ಒದರಬೇಡ. ನೀನೀಗ ನಮ್ಮನ್ನು ನಾಶಪಡಿಸಿದರೂ ನಿನ್ನ ಹೇಯ ಕಾರ್ಯಗಳಿಂದ ನೀನು ತನ್ನಿಂದ ತಾನೆ ನಾಶಹೊಂದುವಿ. ಜ್ಞಾಪಕವಿರಲಿ, ಎಂದನು. ಆಗ ಲೋಬೋನು ಎಲೆ! ಹುಡುಗನೆ! ಸ್ವಲ್ಪ ಸಮಯದ ವೊದಲು ಬಾಯಿ ಬಾರದೆ ಇದ್ದ ನಿನಗೀಗ ಮಾತುಗಳು ಬರಲಾರಂಭಿಸಿದವಲ್ಲಾ! ಒಳ್ಳೆಯದು. ಈಗ ನಿನಗೆ ಹೇಗೆ ಬಾಯಿಬಂತೆಂದಣಕಿಸಿದನು. ಆ ಮೇಲೆ ಲೋಬೋನು ಪತ್ತೆದಾರಿ ಸಹೋದರರೊಡನೆ ನೀವು ಚಿಂತಿಸಬೇಕೆಂದಿಲ್ಲ ನಿಮಗೆ ಓದಲು ಕಾದಂಬರಿ ಗಳನ್ನು ಮತ್ತು ವಾತಾವರಣ ಪತ್ರಿಕೆಗಳನ್ನು ನಾನು ಕೊಡುವೆನು; ಅಲ್ಲದೆ ಸಮಯಕ್ಕೆ ಸರಿಯಾಗಿ ಊಟೋಪಚಾರಗಳು ನಿಮಗೆ ಯೋಗ್ಯರೀತಿಯಲ್ಲಿ ಆಗುವಂತೆ ಏರ್ಪಾಡು ಮಾಡುವೆನು, ಎನ್ನಲು, ರಾಮದಾಸನು ಆಯಿತು ಮಹಾರಾಯಾ, ಈ ರೇಶನ್‌ಕಾಲದಲ್ಲಿ ಊಟ ಸಹ ನೀನು ನಮಗೆ ಕೊಡ ಬೇಕಾಯಿತಲ್ಲಾ! ನಮಸ್ಕಾರ ನಿನ್ನ ಉದಾರಚಿತ್ತಕ್ಕೆ, ಎಂದು ಹೇಳಲು ಲೋಬೋನಲ್ಲಿಂದ ಹೊರಟು ಹೋಗಲು, ಕೂಡಲೇ ಘಣ....ಘಣ....ಘಣ ಶಬ್ದಉಂಟಾಗಲು ಆ ಸರಳಿನ ಕಿಟಕಿ ಮಾಯವಾಯಿತು.

● ● ○ ● ●

ಬೆಳಗಿನ ಸಮಯ ಕರಮಚಂದನು ಸುಮ್ಮನೆ ನೆಲದಲ್ಲಿ ಕಳಿ ತಿದ್ದನು ರಾಮದಾಸನಿನ್ನೂ ನಿದ್ರೆಯಿಂದೆಚ್ಚತ್ತಿರಲಿಲ್ಲ ನಿನ್ನಿನಂತೆ ಈ ದಿನವೂ ಲೋಬೋನು ಕಿಟಿಕಿಯಲ್ಲಿ ಮುಖವಿಟ್ಟು ಪತ್ತೆದಾರಿಯನ್ನು ಕರೆ

ದನು. ಕರಮಚಂದನು ಮೇಲೆ ನೋಡಲು ಲೋಹಜೋನ ಮುಖ ಕಂಡಿತು. ಅವನು ಪತ್ರಿಕಾರಿಯೊಡನೆ ನೀನಿರುವ ಈ ಕೋಣೆಯ ದಕ್ಷಿಣ ದಿಕ್ಕಿನಲ್ಲಿರುವ ಕಪ್ಪಾದ ಅಣಿಯನ್ನೊತ್ತು. ಆಗ ಇನ್ನೊಂದು ಕೋಣೆ ಕಾಣಿಸುವುದು, ಅಲ್ಲಿ ಮುಖ ತೊಳೆಯಲು ಪಂಪಿನ ನೀರಿದೆ. ಅಲ್ಲಿರುವ ಇಲೆಕ್ಟ್ರಿಕ್ ಬೆಲ್ಲನ್ನೊತ್ತಿದಾಗ ನಿನಗೆ ಕಾಫಿ ತಿಂಡಿಗಳು ಬರುವವು. ಅಲ್ಲದೆ ಅಲ್ಲಿ ಕೈಯಲ್ಲಿ ಪುಸ್ತಕ ಹಿಡಿದಿರುವ ಒಂದು ವಿಗ್ರಹವಿದೆ. ಆ ಪುಸ್ತಕದಲ್ಲಿ ಕಥೆ-ಕಾದಂಬರಿ ಪುಸ್ತಕಗಳ ಹೆಸರು ಮತ್ತು ಅವುಗಳ ನಂಬ್ರವಿದೆ. ಆ 'ಕೆಟಲಾಕ್'ನ್ನು ನೋಡಿ ನಿನಗೆ ಬೇಕಾದ ಪುಸ್ತಕದ ನಂಬ್ರದ ಸಂಖ್ಯೆಯಷ್ಟು ಸಲ ಅಲ್ಲಿರುವ ಕಬ್ಬಿಣದ ಸಲಾಕೆಯಿಂದ ಆ ವಿಗ್ರಹದ ತಲೆಗೆ ಹೊಡೆದರೆ ಆಗ ನಿನಗೆ ಬೇಕಾದ ಪುಸ್ತಕಗಳು ಆ ವಿಗ್ರಹದ ಮತ್ತೊಂದು ಕೈಯಲ್ಲಿ ಕಾಣಿಸುವವು ಎಂದು ಹೇಳಿ ಆ ಕಿಟಕಿಯ ಮುಖಾಂತರ ಒಂದು 'ಹಿಂದೂ' ಪೇಪರನ್ನು ಕೆಳಗೆ ಹಾಕಿ ಅಲ್ಲಿಂದ ಹೋದನು.

ಅಷ್ಟರಲ್ಲಿ ರಾಮದಾಸನಿಗೆ ಎಚ್ಚರವಾಯಿತು. ಅನಂತರ ವಿಜ್ಞಾನಿಯು ಹೇಳಿದ ವಿಷಯಗಳನ್ನೆಲ್ಲ ಅಣ್ಣನಿಂದ ಅವನು ತಿಳಕೊಂಡು ಗೋಡೆಯಲ್ಲಿರುವ ಅಣಿಯನ್ನೊತ್ತಿದನು. ಕೂಡಲೇ ಅಲ್ಲಿ ಬಾಗಿಲುಂಟಾಗಲು ಪಕ್ಕದ ಕೋಣೆ ಅವರಿಗೆ ಕಾಣಿಸಿತು. ಅವರಿಬ್ಬರೂ ಆ ಕೋಣೆಗೆ ಹೋಗಿ ಪಂಪಿನ ನೀರಿನಲ್ಲಿ ಮುಖತೊಳೆದು ಇಲೆಕ್ಟ್ರಿಕ್ ಬೆಲ್ಲನ್ನೊತ್ತಿದರು. ದೊಡ್ಡದಾದ ಆ ಕೋಣೆಯಲ್ಲಿ ಒಂದು ಮೇಜೂ ಮೂರು-ನಾಲ್ಕು ಕುರ್ಚಿಗಳೂ ಇದ್ದುವು. ಅವರು ಕುರ್ಚಿಯಲ್ಲಿ ಕುಳಿತು ಹಿಂದೂ ಪತ್ರಿಕೆಯನ್ನೋದುತ್ತಿರಲು ಅಲ್ಲಿ ನಡೆದ ವಿಚಿತ್ರ ಸಂಗತಿಯನ್ನು ಕಂಡು ರಾಮದಾಸನ ಆಶ್ಚರ್ಯವನ್ನು ಹೇಳತೀರದು. ಗೋಡೆಯಿಂದ ಉದ್ಭವಾದ ಲೋಹದ ಕೈಗಳಲ್ಲಿ ಚಾದಾನಿಯಲ್ಲಿ ಕಾಫಿ ತುಂಬಿದ ಎರಡು ಲೋಟಗಳೂ ಮತ್ತೊಂದು ತಟ್ಟೆಯಲ್ಲಿ ಕೆಲವು ಇಡ್ಲಿಗಳೂ ಪಾತ್ರೆಯಲ್ಲಿ ಮೊಸರೂ ಅಲ್ಲದೆ ಎರಡು ಪ್ಲೇಟ್‌ಗಳೂ ನಾಲ್ಕು ಚಮಚಗಳೂ ಇದ್ದು ಆ ಲೋಹದ ಕೈಗಳು ಮೇಜಿನ ಮೇಲೆ ಬಂದು ನಿಂತುಕೊಂಡುವು. ಆ ಲೋಹದ ಕೈಗಳಲ್ಲಿ ದಪ್ಪವಾದೊಂದು ಕಾರ್ಡಿತ್ತು. ಆ ಕಾರ್ಡನ್ನು ಕರಮಚಂದನು ತೆಗೆದು ನೋಡಿದನು. ಅದರಲ್ಲಿ ಉಪಾಹಾರ ತೀರಿಸಿದ ನಂತರ ಸ್ವಿಚ್‌ನ್ನು ಒತ್ತಿರಿ, ಎಂದಿದ್ದಿತು. ಅವರಿಬ್ಬರೂ ಉಪಾಹಾರ ತೀರಿಸಿದ ನಂತರ ಸ್ವಿಚ್‌ನ್ನೊತ್ತಲು

ಆ ಪಾತ್ರೆಗಳನ್ನೆಲ್ಲ ತೆಗೆದುಕೊಂಡು ಲೋಹದ ಕೈಗಳು ಮಾಯವಾದುವು. ಅನಂತರ ರಾಮದಾಸನು ವಿಗ್ರಹದ ಕೈಯಲ್ಲಿರುವ 'ಕೆಟ್‌ಲಾಕ್'ನ್ನು ತೆಗೆದು ನೋಡಿ ಶ್ರೀಮಾನ್ ಕಾಳೆಯವರಿಂದ ರಚಿಸಲ್ಪಟ್ಟ ಒಂದು ಐತಿಹಾಸಿಕ ಪುಸ್ತಕವನ್ನೋದಬೇಕೆಂದು ಆತುರಪಟ್ಟು ಕೆಟಲಾಕ್‌ನಲ್ಲಿ ಆ ಪುಸ್ತಕದೆದುರಿದ್ದ 'ನಾಲ್ಕು' ಎಂಬ ಸಂಖ್ಯೆಯನ್ನು ಕಂಡು ಕೂಡಲೇ ವಿಗ್ರಹದ ಹತ್ತಿರವಿದ್ದ ಕಬ್ಬಿಣದ ಸಲಾಕೆಹೊಡೆದು ಪುಸ್ತಕ ಓದಲುಪಕ್ರಮಿಸಿದನು. ಸ್ವಲ್ಪ ಸಮಯದಲ್ಲಿ ವಿಜ್ಞಾನಿಯಲ್ಲಿಗೆ ಬಂದು ಕರಮುಚಂದದೊಡನೆ ನೀವು ಉಪಾಹಾರ ತೀರಿಸಿದ ನಂತರ ಮೊದಲಿದ್ದ ಕೋಣೆಗೆ ಹೋಗಬೇಕೆಂದನು. ಆಗ ಪತ್ತೆದಾರಿಯು ಮಂದಹಾಸದಿಂದ ಹೋಗದಿದ್ದರೆ....? ಎಂದು ಕೇಳಲವನು, ಒಂದು ಸ್ಪ್ರಿಂಗನ್ನೊತ್ತಿದನು ಆಗ ಅವರಿದ್ದ ಕೋಣೆಯ ಅರ್ಧಾಂಶ ಮಾಯವಾಗಿ ಅಲ್ಲಿ ಪ್ರವಾಹ ಹರಿಯುತಿದ್ದುದನ್ನು ಆ ಸಹೋದರರು ಕಂಡರು ನೀವೀಗಲೇ ಇಲ್ಲಿಂದ ಮೊದಲಿದ್ದ ಕೋಣೆಗೆ ಹೋಗದಿದ್ದರೆ ನಿಮ್ಮನ್ನು ಪ್ರವಾಹ ಪತಿತರನ್ನಾಗಿ ಮಾಡುವೆನೆಂದು ಲೋಬೋನು ಹೇಳಿದನು. ಅನಂತರ ಪತ್ತೆದಾರಿ ಸಹೋದರರು ಮೊದಲಿದ್ದ ಕೋಣೆಗೆ ಹೋಗಲು ದ್ವಾರವು ಮುಚ್ಚಿಹೋಗಿ, ಅವರು ನೆಲದಲ್ಲಿಯೇ ಕುಳಿತು ಕೊಂಡಿರಬೇಕಾಯಿತು.

ರಾಮದಾಸನು ಕರಮುಚಂದನೊಡನೆ ಲೋಬೋನು ಎಷ್ಟು ದುಷ್ಟನಾದರೂ ಅವನ ಬುದ್ಧಿವಂತಿಕೆಯನ್ನು ಪ್ರಶಂಸಿಸತಕ್ಕದ್ದೇ ಸರಿ. ಎಷ್ಟು ವಿಚಿತ್ರವಾಗಿ ವಿಜ್ಞಾನದ ಸಹಾಯದಿಂದವನೀ ಮನೆಯನ್ನು ನಿರ್ಮಿಸಿರುವನು! ಎಂದನು. ಕರಮುಚಂದನು ಹೌದೆಂದು ತಲೆದೂಗಿದನು. ಅವರಿದ್ದ ಕೋಣೆಯಲ್ಲೊಂದು ಬೆಂಚು ಮಾತ್ರವಿದ್ದಿತಷ್ಟೆ! ಆ ದಿನ ಮಧ್ಯಾಹ್ನವೂ ಸಾಯಂಕಾಲವೂ ಪಕ್ಕದ ಕೋಣೆಯಲ್ಲಿ ಊಟ ಮಾಡಿ ಪುನಃ ಮೊದಲಿದ್ದ ಕೋಣೆಗೆ ಬಂದರು. ಕರಮುಚಂದನು ಅಲ್ಲಿಂದ ಹೇಗೆ ತಪ್ಪಿಸಿಕೊಂಡು ಹೋಗಲಿ? ಎಂದು ಚಿಂತಿಸುತ್ತಿರಲು ಮಗ್ಗುಲಿನ ಕೋಣೆಯಲ್ಲೇನಾದರೂ ಗುಪ್ತ ಮಾರ್ಗವಿರಬಹುದೆಂದವನಿಗೆ ತೋರಿತು ಮರು ದಿವಸ ಮೊದಲಿನ ದಿನದಂತೆ ಪಕ್ಕದ ಕೋಣೆಗೆ ಲೋಬೋನು ದ್ವಾರ ಉಂಟು ಮಾಡಲು ಪತ್ತೆದಾರಿ ಸಹೋದರರು ಹೋಗಿ ಕಾಫಿ ಕುಡಿದರು ಕೂಡಲೇ ಕರಮುಚಂದನು ಆ ಕೋಣೆಯಲ್ಲಿರುವ ಎಲ್ಲಾ ವಸ್ತುಗಳನ್ನು ಸೂಕ್ಷ್ಮವಾಗಿ

ಪರೀಕ್ಷಿಸಲಾರಂಭಿಸಿದನು. ಗೋಡೆಯಲ್ಲಿ ಬಹಳ ದೊಡ್ಡ ನಿಲುವುಗನ್ನ ಡಿಯು ತೂಗಿಸಲ್ಪಟ್ಟಿದ್ದನ್ನು ಕಂಡು ಆ ಕನ್ನಡಿಯ ಹತ್ತಿರ ಹೋದನು. ಅವನು ಕನ್ನಡಿಯ ಹಿಂದೆ ಇಣಿಕಿ ನೋಡಲು ಅಲ್ಲೊಂದು ಗಿಳಿಯು ಬೊಂಬೆಯಿರುವುದನ್ನು ಕಂಡನು. ಅದನ್ನವನು ಮುಟ್ಟಿ ಸ್ವಲ್ಪ ದೂಡಲು ಘಡ....ಘಡ....ಘಡವೆಂದು ಶಬ್ದವುಂಟಾಗಿ ಬಾಗಿಲುಂಟಾಯಿತು. ಕೂಡಲೇ ಅವನು ರಾಮದಾಸನನ್ನು ಕರೆದು ಅನಂತರ ಅವರಿಬ್ಬರೂ ಆ ದಾರಿಯಲ್ಲಿ ಹೋಗಿ ಅಲ್ಲಿ ಏಣಿಕಾಣಿಸಲು ಅದರಲ್ಲಿ ಮೇಲೇರಿ ಹೋದರು. ಮೇಲೊಂದು ಕೋಣೆಗೆ ತಲುಪಿ ಟೋರ್ಚ್ ಲೈಟಿನ ಪ್ರಕಾಶದಲ್ಲಿ ಅಲ್ಲಿಂದ ಹೊರಟು ಹೋಗಲು ದಾರಿಯಿದೆಯೋ ಎಂದವರು ನೋಡುತ್ತಿರಲು ರಮಣಿ ಯೋರ್ವಳ ಚೀತ್ಕಾರಧ್ವನಿಯು ಅವರಿಗೆ ಕೇಳಿಸಿತು. ಮೂರುನಾಲ್ಕುಸಲ ಅಳುವ ಶಬ್ದ ಕೇಳಿಸುತ್ತಿರಲು ಕರಿಮುಖೇಂದ್ರನು ಇಲ್ಲಿ ಹತ್ತಿರದಲ್ಲಿ ಸ್ತ್ರೀ ಯೋರ್ವಳು ಅಳುತಿದ್ದಾಳೆ ಎಂದು ತಿಳಿದು ಶಬ್ದಕೇಳುವ ಕಡೆಗೆ ಕಿವಿ ಗೊಟ್ಟು ಕೇಳುತ್ತಿರಲು ಆ ಕೋಣೆಯ ಪೂರ್ವದಿಕ್ಕಿನಿಂದ ರೋದನಧ್ವನಿಯು ಕೇಳಿಸುತ್ತಿದೆಯೆಂದು ಖಚಿತವಾಗಿ ತಿಳಿದು ಅವರು ಆ ಸ್ತ್ರೀಯಿರುವಲ್ಲಿಗೆ ಹೋಗಲು ಆತುರಪಟ್ಟರು. ಅನಂತರ ಅವರು ಸೂಕ್ಷ್ಮದೃಷ್ಟಿಯಿಂದ ರಸುತ್ತಿರಲು ಒಂದು ಸ್ವಿಚ್ ಕಾಣಿಸಿತು. ಇದನ್ನೊತ್ತಲುಂಟಾದ ಬಾಗಿಲಿ ನಲ್ಲಿ ಅವರು ಮುಂದೆ ಹೋಗಿ ನೋಡುವಾಗ ಭವ್ಯವಾದ ಆ ಕೋಣೆ ಯಲ್ಲಿ ಸುಂದರ ಮಂಚದಲ್ಲಿ ಕುಳಿತುಕೊಂಡು ಚಿಂತಾಗ್ನಿಯಿಂದ ಬೆಂದು ಹೋದ ರಮಣಿಯೋರ್ವಳು ಅವನತವದನ ಉಳ್ಳವಳಾಗಿ ಅಸ್ತವ್ಯಸ್ತ ವಾಗಿದ್ದ ಮುಂಗುರುಳುಗಳ ಪರಿವೆಯಿಲ್ಲದೆ ಅಳುತ್ತಿರುವುದನ್ನು ಕಂಡರು. ಶರತ್ಕಾಲದ ಚಂದ್ರಿಕೆಯಂತೆ ಮನೋಹರವಾದ ದಿವ್ಯ ಬೆಳಕು ಅಲ್ಲಿ ಇಲೆ ಕ್ಟ್ರಿಕ್ ಲೈಟ್‌ನಿಂದಲಾಗಿ ಉಂಟಾಗಿದ್ದಿತು. ಪತ್ತೆದಾರಿ ಸಹೋದರರಿಗಾ ತರುಣಿಯ ಪರಿಚಯವಾಯಿತು. ಆ ಯುವತಿಯೇ ಕುಸುಮಳೆಂದು ವಾಚಕರೂಹಿಸಿರಬಹುದು. ಕರಿಮುಖೇಂದ್ರನನ್ನು ಕಂಡು ಆವಳು ಗುರುತು ಹಿಡಿಯಲಾರದೆ ಕಕ್ಕಾಬಿಕ್ಕಿಯಾಗಿ ನೋಡುತ್ತಿರಲು ಪತ್ತೆದಾರಿಯು ನನ್ನ ಗುರುತು ಸಿಗಲಿಲ್ಲವೆ? ಎಂದು ಕೇಳಿದನು. ಆಗ ಕುಸುಮಳಿಗೆ ಪತ್ತೆ ದಾರಿಯ ಗುರುತು ಸಿಕ್ಕಲವಳು ನನ್ನನ್ನು ಈ ನೀಚ ಲೋಬೋನ ಉಪ ಟಳದಿಂದ ಬದುಕಿಸಿರಿ ಎಂದಳು. ಕರಿಮುಖೇಂದ್ರನು ಅವಳೊಡನೆ ನೀನೀಗ

ಮಾತನಾಡಬೇಡ. ಬೇಗನೆ ಇಲ್ಲಿಂದ ಕಾಲ್ತೆಗೆಯುವ ಎಂದು ಹೇಳಿ ರಾಮ ದಾಸನೊಡನೆ ಕೋಣೆಯಿಂದ ಹೊರ ಹೋಗಲು ದಾರಿಯಲ್ಲಿದೆಯೆಂದು ಹುಡುಕೆಂದನು ರಾಮದಾಸನು ಉತ್ತರದಿಕ್ಕಿನ ಗೋಡೆಯಲ್ಲೊಂದು ಆಣಿಕಾಣಲು ಅದನ್ನು ತಿರುಗಿಸಲು ಅಲ್ಲಿ ದ್ವಾರಉಂಟಾಯಿತು ಆಗ ಮೂವರೂ ದ್ವಾರದ ಮುಖಾಂತರ ಅಲ್ಲಿಂದ ಹೊರಟು ಮತ್ತೊಂದು ಸಣ್ಣ ಕೋಣೆಗೆ ಬಂದರು. ಅಲ್ಲಿಂದ ಒಂದು ಗುಹೆಯ ದ್ವಾರದ ಮೂಲಕ ಸುರಂಗದಲ್ಲಿಯೇ ಟೋರ್ಚ ಲೈಟ್‌ನ ಪ್ರಕಾಶದಲ್ಲಿ ಮೆಲ್ಲಮೆಲ್ಲನೆ ಮುಂದು ವರಿದು ಹೋದರು ಸಾಧಾರಣ ಎರಡು ಫರ್ಲಾಂಗ್ ಹೋಗಲು ಆ ಗುಹೆಯಿಂದ ಮೇಲೇರಲು ಮೆಟ್ಟಲುಗಳಿದ್ದುವು. ಮೆಟ್ಟಲುಗಳನ್ನೇರಿ ಮೇಲೆ ಬರಲು ಅವರು ಘೋರಾರಣ್ಯದ ಮಧ್ಯದಲ್ಲಿನ ಅದೊಂದು ಕಾಳಿ ಗುಡಿಯ ಹಿಂಬದಿಗೆ ತಲಪಿದರು ಕರಮಚಂದನು ಆ ಗುಡಿಯಿಂದ ರಾಮದಾಸ, ಕುಸುಮರನ್ನು ಕರೆದುಕೊಂಡು ಕಾಡಿನ ದಾರಿಯಲ್ಲಿ ಹೇಗಾದರೂ ನಡೆದು ಮನೆಗೆ ಬಂದು, ಕೂಡಲೇ ಯಶವಂತಸಿಂಹನಿಗೆ ಫೋನ್ ಮಾಡಿದನು.

ಸಾಧಾರಣ ಮಧ್ಯಾಹ್ನ ಹನ್ನೊಂದು ತಾಸಾಗಿರಬಹುದು. ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನು ಕಾರಿನಿಂದಿಳಿದು ಕರಮಚಂದನ ಮನೆಯ ಮುಖ ಮಂಟಪಕ್ಕೆ ಬಂದು ಆರಾಮ ಕುರ್ಚಿಯಲ್ಲಿ ಕುಳಿತನು. ಕರಮಚಂದನು ಆಗತಾನೆ ಒಳಗಿನಿಂದ ಬಂದು ನಮಸ್ಕಾರವಿತ್ತು ಸಿಗರೇಟ್ ಪೇಕ್‌ನ್ನು ಯಶವಂತನ ಹತ್ತಿರವಿಟ್ಟನು. ಕರಮಚಂದನು ಅವನೊಡನೆ ನಾನು ನಿಮ್ಮನ್ನು ಬರಹೇಳಿದುದು ಯಾಕೆಂದು ಗೊತ್ತಿದೆಯೇ ? ಎಂದು ಕೇಳಲವನು ತಲೆಯನ್ನಾಡಿಸಿದನು. ಕರಮಚಂದನು ಕೂಡಲೇ ಒಳಗೆ ಹೋದನು ಯಶವಂತನಿಗೆ ಅವನು ಯಾಕಾಗಿ ಪುನಃ ಒಳಗೆ ಹೋದನೆಂದು ತಿಳಿಯಲಿಲ್ಲ ಸ್ವಲ್ಪ ಹೊತ್ತಿನಲ್ಲಿಯೇ ಕರಮಚಂದನು ಕುಸುಮಳೊಡನೆ ಪೋರ್ಟಿಕೊವಿಗೆ ಬಂದನು ತನ್ನ ಅಚ್ಚುಮೆಚ್ಚಿನ ಕುವರಿಯನ್ನು ನೋಡಿ ಯಶವಂತನ ಕಣ್ಣಿನಲ್ಲಿ ಆನಂದಾಶ್ರುಗಳುಂಟಾದವು. ಸಂತೋಷದಿಂದ ಅವನ ಬಾಯಿಂದ ಮಾತೇ ಹೊರಡಲಿಲ್ಲ ತನ್ನ ಮಗಳು ಪ್ರಾಯಭರಿತಳೊಂದದಗಿರುವಳೆಂದು ಗಣನೆಗೆ ತಾರದೆ ಅವಳನ್ನು ತಬ್ಬಿಕೊಂಡನು ಅನಂತರವನು ತನ್ನ ನಿಜ ತನುಜೆಯೊಡನೆ

ನೀನಿಷ್ಟು ದಿನ ಎಲ್ಲಿ ಬಂಧನದಲ್ಲಿದ್ದಿ? ಎಂದು ಕೇಳಲವಳು ಏನ ಹೇಳಲೂ ತಿಳಿಯದೆ ಪತ್ತೆದಾರಿಗಳೊಡನೆ ಕೇಳಿರಿ; ಎಂದು ಚುಟುಕಾಗಿ ಉತ್ತರಿಸಿದಳು. ಯಶವಂತನು ಪತ್ತೆದಾರಿಯೊಡನೆ ಕೇಳಲು ಅವನು ನಿಮ್ಮ ಮಗಳನ್ನು ಲೋಬೋನು ಯಾವುದೋ ಒಂದು ಸ್ವಿಚನ ಮನೆ ಯಲ್ಲಿ ನೆಲಮಾಳಿಗೆಯಲ್ಲಿ ಬಂಧಿಸಿಟ್ಟಿದ್ದನೆನ್ನಲು ಹಾಗಾದರೆ ನಾಹೀಗಲೇ ಪೋಲೀಸರೊಡನೆ ಅಲ್ಲಿಗೆ ಹೋಗಿ ಲೋಬೋನನ್ನು ಕೈದು ಮಾಡುವೆ ನೆಂದನು ಆಗ ಕರಮುಚಂದನು ಅವಸರ ಪಡಬೇಡಿ ನಮಗೆ ಸಾಕಷ್ಟು ಆಧಾರಗಳು ದೊರೆತ ನಂತರ ಅವನ ಅಪರಾಧಗಳನ್ನು ಬಯಲಿಗೆಳೆಯುವ ಎಂದನು. ಅನಂತರ ಪತ್ತೇದಾರಿಯು ಸುಪರಿಡೆಂಟನೊಡನೆ ಪಿಟ್ಟನೂ ಜೋಸೆಫ್‌ನೂ ಈಗೆಲ್ಲಿ ಮಾಯವಾದರೊ? ಎನ್ನಲು ಅವನು ನಾವಿಬ್ಬರೂ ಈ ದಿನ ರಾತ್ರಿ ಆ ಸ್ವಿಚನ ಮನೆಗೆ ಹೋಗಿ ಪರೀಕ್ಷಿಸುವಾ ಎನ್ನಲು ಕರಮು ಚಂದನು ಬೇಡ, ನಾವಲ್ಲಿಂದೀಗ ತಪ್ಪಿಸಿ ಬಂದುದರಿಂದ ಚೋರರು ಈ ದಿನ ಬಹಳ ಜಾಗರೂಕತೆಯಿಂದ ಇರಬಹುದುದಾದುದರಿಂದ ನಾವು ಹೋದರೆ ವಿಪತ್ತುಂಟಾಗಬಹುದೆಂದನು. ಸ್ವಲ್ಪ ಸಮಯ ತಮಾಷೆ ಮಾತನಾಡುತ್ತಾ ಕಾಲ ಕಳೆದು ಯಶವಂತನು ನಮಸ್ಕರಿಸಿ ಮಗಳಾದ ಕುಸುಮಳೊಡನೆ ಕಾರಿನಲ್ಲಿ ಮನೆಗೆ ಹೋದನು.

---

## ಚೋರರ ಕಾರಸ್ಥಾನ

ವಾಚಕರೆ! ಬೆಳಿಗ್ಗೆ ಒಂಬತ್ತು ತಾಸಾಗಲು ಲೋಬೋನು ಕರಮ್ಮ ಚಂದ ರಾಮುದಾಸರನ್ನು ಬಂಧನದಲ್ಲಿಟ್ಟ ಕೋಣೆಯ ಮೇಲ್ಭಾಗದಲ್ಲಿ ಕಿಟಕಿಯಲ್ಲಿ ಇಣಕಿ ನೋಡಲು ಪತ್ತೆದಾರಿಗಳನ್ನು ಕಾಣದೆ ಇರಲು ಶಂಕಿತ ನಾದನು. ಅವನು ಗಟ್ಟಿಯಾಗಿ ಪತ್ತೇದಾರಿಗಳ ಹೆಸರೆತ್ತಿ ಕೂಗಿದರೂ ಉತ್ತರ ಬಾರದೆ ಇರಲು, ಅವರು ಪಲಾಯನ ಮಾಡಿರುವರೆಂದು ತರ್ಕಿಸಿ ದನು. ಕೂಡಲೇ ಅವನೊಂದು ಸ್ವಿಚ್‌ನ್ನು ಒತ್ತಲು ಆ ನೆಲದಡಿಯಲ್ಲಿದ್ದ ಕೋಣೆಯು ಮೇಲೆ ಬಂದಿತು. ಲೋಬೋನು ಆ ಮನೆಯ ಎಲ್ಲಾಕಡೆ ಗಳಲ್ಲಿ ಹುಡುಕಿದರೂ ಏನೂ ಪ್ರಯೋಜನವಾಗದಿರಲು ಕಟ್ಟ ಕಡೆಗೆ ಕುಸುಮಳನ್ನು ಬಂಧಿಸಿದ ಕೋಣೆಗೆ ಬಂದನು. ಅಲ್ಲಿ ಕುಸುಮಳಿರಲಿಲ್ಲ.

ಘೂರ್ತನಾದ ಕರಮುಚಂದನನ್ನು ಬಂಧಿಸಿದುದಕ್ಕೆ "ಬಂದ ಸೀರು ಇದ್ದು ದನ್ನು ಕಿತ್ತಿಕೊಂಡು ಹೋಯಿತು" ಎಂಬಂತೆ ಹಕ್ಕಿಯನ್ನು ಹಾರಿಸಿ ಕೊಂಡು ಹೋದನಲ್ಲವೆ ? ಎಂದು ದ್ವಾರವೆತ್ತಿದನು. ಅನಂತರವನು ಪಕ್ಕದ ಕೋಣೆಗೆ ಹೋಗಿ ನೋಡಲು ಗುಹೆಯ ಬಾಗಿಲು ತೆರೆದಿದ್ದುದನ್ನು ಕಂಡು ಒಡ್ವಾಷರು ಈ ಗುಹೆಯಿಂದ ಪಲಾಯನ ಮಾಡಿರುವರೆಂದು ಕರಮುಚಂದನನಿನ್ನು ನನ್ನ ರಹಸ್ಯವನ್ನು ಬಯಲಿಗೆಳೆದು ನಾಗರೀಕ ಪ್ರಪಂಚದಲ್ಲಿ ನನ್ನ ಮಾನಕಳೆದು ಹೋಗುವಂತೆ ಮಾಡದಿರಲಾರನು ಎಂದೂಹಿಸಿ ಚಿಂತಿಸಿದನು ಹೇಗಾದರೂ ಮಾಡಿ ಪತ್ತೆದಾರಿಯನ್ನು ಕೊಲ್ಲಬೇಕೆಂದು ಹವಣಿಸಿ ಕೂಡಲೇ ಅಲ್ಲಿಂದ ಮತ್ತೊಂದು ಕೋಣೆಗೆ ಹೋದನು. ಅಲ್ಲಿ ಒಂದು ಇಲೆಕ್ಟ್ರಿಕ್ ಬೆಲ್ನ್ನೊತ್ತಿದೊಡನೆ ಪಿಟ್ಸನೂ ಜೋಸೆಫ್‌ನೂ ಅಲ್ಲಿಗೆ ಬಂದರು ಓದುಗರೆ ! ಪಿಟ್ಸ್, ಜೋಸೆಫ್‌ರೀರ್ವರನ್ನು ಕರಮುಚಂದನೊಂದು ದಿನ ಬಂಧಿಸಿದ್ದಾಗ ಅವರು ಪಲಾಯನ ಮಾಡಿದ ನಂತರ ಅಜ್ಞಾತರಾಗಿ ಈ ಸ್ವಿಚನ ಮನೆಯಲ್ಲಿದ್ದರು. ಲೋಬೋನು ಪಿಟ್ಸನೊಡನೆ ಯಾವ ರೀತಿಯಲ್ಲಿ ಕರಮುಚಂದನನ್ನು ನಾಶಪಡಿಸಲಿ ? ಎಂದಾಲೋಚಿಸುತಿದ್ದನು. ಆಗ ಪಿಟ್ಸನು ಅವನೊಡನೆ ಯಜಮಾನರೆ ! ಅವನೀಗ ನಮ್ಮ ರಹಸ್ಯವನ್ನೆಲ್ಲ ಸಂಪೂರ್ಣವಾಗಿ ಅರಿತಿರಲಿಕ್ಕಿಲ್ಲ ಆದುದರಿಂದ ಇನ್ನು ಪುನ: ಇಲ್ಲಿಗವನು ಬರಬಹುದು ಆಗ ನಾವು ಅತಿ ಜಾಗರೂಕತೆಯಿಂದವನನ್ನು ಹಿಡಿದು ಅನಂತರ ಅವನ ಮೇಲೆ ವಿದ್ಯುತ್ ಪ್ರವಾಹವನ್ನು ಬಿಟ್ಟು ಕೊಲ್ಲುವುದುತ್ತಮವೆನ್ನಲು, ಜೋಸೆಫ್‌ನು ಅದಾಗದು. ಆ ಧೂರ್ತನನ್ನು ಚಿತ್ರಹಿಂಸೆಗೆ ಗುರಿಪಡಿಸಿ ಕೊಲ್ಲಬೇಕೆಂದನು ಲೋಬೋನಾಗ ಅದೆಲ್ಲ ಆ ಮೇಲೆ. ಈಗ ಮೊದಲವನನ್ನು ಹಿಡಿಯುವುದೆಂತೆಂದು ತೋರುವುದಿಲ್ಲವಲ್ಲಾ ! ! ! ಎಂದನು. ಕಡೆಗೆ ವಿಜ್ಞಾನಿಯು ಅವರೊಡನೆ ಹೀಗೆಂದನು:- ಈ ದಿನವೇ ನೀವಿಬ್ಬರೂ ಯಾರಿಗೂ ಅರಿಯದಂತೆ ವೇಷಾಂತರದಿಂದ ಹಡಗಿನಲ್ಲಿ ಮುಂಬಾಯಿಗೆ ಹೋಗಿರಿ ಪಿಟ್ಸನು ಮಾತುಂಗದಲ್ಲಿ ಎರಡನೆಯ ಬೀದಿಯ ಕಡೆಗಿರುವ ನ್ಯೂ ಬಿಲ್ಡಿಂಗ್‌ನಲ್ಲಿ ಒಬ್ಬ ಡಾಕ್ಟರ್‌ನಂತೆ ನಟಿಸುತ್ತಾ ಇರಲಿ. ಜೋಸೆಫ್, ನೀನು ಅವನ ಕಾರಿನ ಡ್ರೈವರ್‌ನಂತಿರು ಎಂದು ಹೇಳಿ ಅನಂತರ ಅತಿ ಗುಪ್ತವಾದ ವಿಷಯಗಳನ್ನು ಅವರಿಬ್ಬರ ಕಿವಿಯಲ್ಲಿ ಮೆಲ್ಲನುಸಿರಿದನು. ಅತಿ ರಹಸ್ಯವಾದ ಸಂಗತಿಯು ನಮಗೀಗ ತಿಳಿಯದಿ

ದ್ದರೂ ಕ್ರಮೇಣ ತಿಳಿಯುವುದು. ಕೂಡಲೇ ಸಿಟ್ಟನೂ ಜೋಸೆಫ್‌ನೂ ಅಲ್ಲಿಂದ ತೆರಳಲು ಲೋಬೋನು. ಕೆಲವು ದಿನಗಳಿಗೆ ರಜೆಯು ಅಗತ್ಯವಿದ್ದು ದರಿಂದ ರಜೆಯ ಅರ್ಜಿಯನ್ನು ತನ್ನ ಆಫೀಸಿಗೆ ಕಳುಹಿಸಿದನು.

ಪಾಠಕರೆ! ರಾತ್ರಿ ಸಾಧಾರಣ ಹನ್ನೆರಡು ಗಂಟೆಯ ಸಮಯ, ಜನರು ದಣಿವಿನಿಂದ ಆಯಾಸ ಪರಿಹಾರಕ್ಕಾಗಿ ನಿದ್ರಾಂಗನೆಯ ಒಳಗಾಗಿದ್ದ ಸಮಯವದು. ಎಲ್ಲೆಲ್ಲೂ ನಿಃಶಬ್ದ, ನೀರವ, ಬೀದಿಯಲ್ಲಿನ ಪೆಟ್ರೋಲ ದೀಪಗಳಾರಿದ್ದರೂ ಅಲ್ಲಲ್ಲಿ ಕೆಲವು ಉಜ್ವಲವಾಗಿ ಉರಿಯುತಿದ್ದುವು. ವಿಜ್ಞಾನಿಯ ಮನೆಯ ಅದೊಂದು ಚಿಕ್ಕಕೋಣೆಯಲ್ಲಿ ದೀಪದ ಪ್ರಕಾಶವಿತ್ತಲ್ಲದೆ ಆ ಮನೆಯಲ್ಲಿ ಬೇರಾವ ಕಡೆಯಲ್ಲಿಯೂ ಬೆಳಕಿರಲಿಲ್ಲ. ಬೆಳಕಿದ್ದ ಕೊಠಡಿಯ ಬಾಗಿಲು—ಕಿಟಕಿಗಳೆಲ್ಲ ಮುಚ್ಚಿಕೊಂಡಿದ್ದುವು. ವಾಚಕರೆ! ಕಿಟಕಿಯ ಸೆರೆಯಲ್ಲಿ ಮೆಲ್ಲನೆ ಒಳಗೇನು ನಡೆಯುತ್ತಿದೆಯೆಂದು ನೋಡುವ. ಆದರೆ ಈ ರೀತಿ ಅಡಗಿ ನಿಂತು ನೋಡುವುದು ಅಸಭ್ಯ ವರ್ತನೆಯೆಂದು ತಿಳಿದು ಮಾನನಿಧಿಗಳಾದ ನೀವು ಹಿಂದುರಗಬೇಡಿರಿ ಕೆಲವು ಸಲ ನಾವು ಯಾವ ದಾರಿಯಿಂದಲಾದರೂ ಹೋಗಿ ಗುಪ್ತರಹಸ್ಯಗಳನ್ನು ತಿಳಿಯಬೇಕಾಗುತ್ತದೆ. ಸಾದಾ ರೀತಿಯಿಂದ ಹೋಗಲು ಅಸಾಧ್ಯವಾದ ಸಂದರ್ಭದಲ್ಲಿ ಕಪಟೋಪಾಯದಿಂದಲಾದರೂ ಸತ್ಯವನ್ನು ತಿಳಿಯಲೇ ಬೇಕಾಗುತ್ತಿದೆಯಲ್ಲವೆ? ಇದರಲ್ಲಿ ಪಾಪವಿಲ್ಲ. ಯಾಕೆಂದರೆ ಒಬ್ಬ ಕಳ್ಳನು ನಮ್ಮ ಸೊತ್ತನ್ನಪಹರಿಸಿಕೊಂಡರೆ ಆಗ ನಮಗೆ ಆ ವ್ಯಕ್ತಿಯ ಮೇಲೆ ಗುಮಾನಿಯುಂಟಾದರೆ ನಾವು ಅವನಿಗೆ ತಿಳಿಯದಂತೆ ನಮ್ಮಿಂದವನು ಅಪಹರಿಸಿದ ಸೊತ್ತುಗಳನ್ನೆಲ್ಲಿಟ್ಟಿರುವನೆಂದು ಕಂಡು ಹಿಡಿದರೆ ಅವನನ್ನು ಅಪರಾಧಕ್ಕೆ ಗುರಿಪಡಿಸಬಹುದಾಗಿದೆ; ಅಲ್ಲದೆ ಸಂಶಯ ಉಂಟಾದೊಡನೆ ಅವನೊಡನೆ ಕೇಳಿದರೆ ಅವನು ಕದ್ದ ವಸ್ತುಗಳ ಪತ್ತೆ ನಮಗಾಗದಂತೆ ಮಾಡುವನಲ್ಲದೆ ನಮ್ಮನ್ನು ಗದರಿಸಿ ಸುಮ್ಮನೆ ನನ್ನ ಕಳ್ಳನೆಂದು ಹೇಳಿದನೆಂದು ನಮ್ಮ ಮೇಲೆ ಕೋರ್ಟಿನಲ್ಲಿ ಮಾನನಷ್ಟಕ್ಕೆ ದಾವೆ ಮಾಡಲಿಕ್ಕಿಲ್ಲವೆ? ಇರಲಿ. ಅದೊ!! ಲೋಬೋನು ಒಂದು ಕಾಗದ ತೆಗೆದನು. ಅದರಲ್ಲಿ ಮುದ್ರಿಸಲ್ಪಟ್ಟ ಅಕ್ಷರಗಳಿದ್ದುವೆಂದು ನಮಗೆ ಮಸುಕಾಗಿ ಕಾಣಿಸುತ್ತಿದೆಯಲ್ಲವೆ! ಹಾ ತಿಳಿಯಿತು!! ಏನು?? ಅದೇ ಟೆಲಿಗ್ರಾಂ ಫೋರ್ಮಲ್ಲವೆ! ಇವನಾರಿಗೆ ಟೆಲಿಗ್ರಾಂ ಮಾಡುತ್ತಾನೆ? ಆಗಲಿ. ಮುಂದೇನು ಮಾಡುತಿದ್ದಾ

ನೆಂದು ನೋಡುವ ಆ ಫೋರ್ಮನಲ್ಲೇನೋ ಒರೆದನು. ಅದೇನೆಂದು ಕಾಣುವುದಿಲ್ಲವಲ್ಲ ! ಇರಲಿ. ಅನಂತರ ಗೊತ್ತಾಗಲಿಕ್ಕೂ ಸಾಕು. ಅದೇನು? ಕುರ್ಚಿಯಿಂದೆದ್ದು ಕಪಾಟಿನ ಬಳಿಗೇಕೆ ಹೋದನು ? ಪುನಃ ಕುರ್ಚಿಯಲ್ಲಿ ಬಂದು ಕುಳಿತನು. ಕೈಯಲ್ಲೇನೊ ಇದೆಯೆಂದು ಕಾಣಿಸುತ್ತಿದೆಯಲ್ಲವೆ ? ಹೌದು; ಆ ಕಾಗದದ ಮೇಲೆ ಏನೇನೋ ಸಾಮಗ್ರಿಗಳಿಂದ ಮುದ್ರಿಯೊತ್ತುವಂತೆ ಕಾಣುತ್ತದೆ; ಆದರೆ ಆದೇನೆಂದು ಗೊತ್ತಾಗುವುದಿಲ್ಲ. ಸ್ವಲ್ಪ ಸಮಯದಲ್ಲಿ ಆ ಕಾಗದವನ್ನು ಮಡಚಿ ಡ್ರಾವರ್‌ನಲ್ಲಿ ಹಾಕಿ ಆ ಕೋಣೆಯಿಂದ ಹೊರಬಂದು ಬಾಗಿಲಿಗೆ ಬೀಗ ಹಾಕಿ ಕೆಳಗಿಳಿದು ಬಂದನು. ಏನು ! ನಾನೀಗ ಆ ಕೋಣೆಯ ಬಾಗಿಲು ತೆರೆದು ಒಳಗೆ ಹೋಗಿ ಆ ಫೋರ್ಮನಲ್ಲೇನಿದೆಯೆಂದು ನೋಡಲೇ ? ಛೆ! ಬೇಡ. ಪತ್ತೆದಾರಗಳಾದರೆ ಶಬ್ದವಾಗದಂತೆ ಹೋದಾರು. ನಾವು ಹೋಗುವಾಗ ಏನಾದರೂ ಶಬ್ದವಾದರೆ ಚೋರರೆಂದು ತಿಳಿದು ನಮ್ಮನ್ನು ಹಿಡಿದು ಸಿಕ್ಕಿಸಿಯಾರು. ಆನೆ ಲದ್ದಿ ಹಾಕುತ್ತದೆಯೆಂದು ನುಸಿ ಲದ್ದಿ ಹಾಕಲು ಹೊರಟರೆ ಹೇಗೆ? ಏನಾದರೂ ಆಗಲಿ. ನಮಗೇಕೆ ಹೆರವರ ಗೊಡವೆ ?

ಪಾಠಕರೆ! ಲೋಬೋನು ಪುನಃ ಆ ಕೋಣೆಗೆ ಬಂದು. ಅಲ್ಲಿಂದ ಆ ನಟ್ಟಿರುಳಿನಲ್ಲಿ ಎಲ್ಲಿಗೋ ಹೋದನು; ಆದರೆ ಎಲ್ಲಿಗೆ ಹೋದನೆಂದು ಹೇಗೆ ಹೇಳಲಿ! ಮರುದಿವಸ ಬೆಳಿಗ್ಗೆ ಎಂಟುಗಂಟೆಗೆ ಅಂಚೆಯವನು ಕೆಲವು ಕಾಗದಗಳನ್ನೂ ಒಂದು ಟೆಲಿಗ್ರಾಂನ್ನೂ ಕರಮುಚಂದನ ಮನೆಗೆ ತಂದು ಅವನ ಹತ್ತಿರ ಕೊಟ್ಟು ಹೋದನು. ತಾರು ಮುಂಬಾಯಿಂದ ಬಂದುದಾಗಿತ್ತು. ಕಾಗದಗಳನ್ನು ನೋಡುವುದರ ಮೊದಲು ಟೆಲಿಗ್ರಾಂನಲ್ಲಿ ಏನಿದೆಯೆಂದು ನೋಡಲು ಆತುರಪಟ್ಟನು ಅದರಲ್ಲೀ ರೀತಿಯಿದ್ದಿತು.

ಪತ್ತೆದಾರಗಳೆ! ನಮ್ಮಲ್ಲಿ ಅದ್ಭುತ ಕೊಲೆಯಾಗಿದೆ. ಯಾವ ರೀತಿಯಿಂದ ಕೊಲೆಯಾಗಿದೆಯೆಂದು ಹೇಳಲು ಬರುವುದಿಲ್ಲ. ತಾವೀಗಲೇ ಅಗತ್ಯ ಮುಂಬಯಿಗೆ ಬರಲೇಬೇಕು. ಇತಿ.

ಡಾಕ್ಟರ್. ರಮೇಶ

ಎಮ್. ಬಿ. ಬಿ. ಎಸ್.

ಟೆಲಿ ಗ್ರಾಂ ನೋಡಿ ಕರಮುಚಂದನು ಆಶ್ಚರ್ಯಗೊಂಡನು. ಡಾ| ರಮೇಶನೆಂದರೆ ಯಾರು ? ನನಗವನ ಪರಿಚಯವೇ ವಿಲ್ಲ! ಆದರೂ

ತಾರು ಬಂದುದರಿಂದ ಹೋಗದೆ ನಿವೃತ್ತಿಯಿಲ್ಲ; ಎಂದು ರಾಮದಾಸನೊಡನೆ ಟೆಲಿಗ್ರಾಮಿನಿಂದ ಬಂದ ಸಂಗತಿಯನ್ನು ಹೇಳಿದನು. ತಮ್ಮನೊಡನೆ ಅವನು ನೀನು ಲೋಬೋನೊಡನೆ ಚೆನ್ನಾಗಿ ಲಕ್ಷ್ಯವಿಟ್ಟುಕೊಂಡಿರು. ಎಂದನು. ಮಂಗಳೂರಿನಿಂದ ಹನ್ನೊಂದು ಗಂಟೆಗೆ ಈ ದಿನ ಮುಂಬಯಿಗೆ ಹಡಗಿನ ಸಮಯವಾಗಿತ್ತು. ಆದ್ದರಿಂದ ಬೇಗನೆ ಊಟ ತೀರಿಸಿ ಜಟಕಾ ಗಾಡಿಯಲ್ಲಿ ಕರಮಚಂದನು ಬಂದರಿಗೆ ಹೋಗಿ ತಲಪುವಾಗ ಹತ್ತೂವರೆ ತಾಸಾಗಿತ್ತು.

ಪತ್ತೇದಾರಿಯು ಟಿಕೇಟ್ ಮಾಡಿಸಿ ಜಹಜಿಗೇರಿದನು. ಜಹಜು ಹೊರಡಲಿನ್ನು ಹದಿನೈದು ನಿಮಿಷವಿದ್ದಿತು. ಆಜಾನುಬಾಹುವಾದ ವ್ಯಕ್ತಿಯೊಬ್ಬನು ಅವಸರದಿಂದ ಬೇಗನೆ ಹಡಗನ್ನೇರಿದನು. ಕರಮಚಂದನು ಹಡಗಿನಲ್ಲಿ ಬಾಡಿಗೆಗೆ ಪಡೆಕೊಂಡ ಕೊಠಡಿಯ ಪಕ್ಕದ ಕೋಣೆಯನ್ನೇ ಆ ಆಗಂತಕ ವ್ಯಕ್ತಿಯು ಪಡೆಕೊಂಡನು ಹಡಗು ಹೊರಡಲು ಆಗಂತುಕ ವ್ಯಕ್ತಿಯು ತನ್ನ ಕೋಣೆಯಿಂದ ಹೊರಬಂದು ಕುರ್ಚಿಯನ್ನು ವರ್ಹಾಂಡದಲ್ಲಿಟ್ಟು ಕುಳಿತುಕೊಂಡು ಚುರೂಟ ಸೇದಲಾರಂಭಿಸಿದನು. ಅವನನ್ನು ಕಾಣುವಾಗ ಒಬ್ಬ ವ್ಯಾಪಾರಿಯಂತೆ ಕಾಣುತಿತ್ತು. ಕರಮಚಂದನು ಸಿಗರೇಟ್ ಸೇದುತ್ತಾ ಅದರ ಹೊಗೆಯು ಸುರುಳಿಯಾಗಿ ಮೇಲೆ ಅಂತರಿನಲ್ಲೇರುತ್ತಿರಲು ಲೋಬೋನ ವಿಷಯವಾಗಿ ಗಹನವಾಗಿ ವಿಚಾರಿಸುತ್ತಿರಲು, ಆಗಂತುಕ ಅಪರಿಚಿತ ವ್ಯಕ್ತಿಯು ಅವನಿದ್ದ ಕೋಣೆಯ ಕಿಟಕಿಯ ಹತ್ತಿರ ಬಂದು ನಿಂತು ಕೆಮ್ಮಿದನು. ಕರಮಚಂದನಿಗೆ ಅವನ ಕಡೆಗೆ ದೃಷ್ಟಿ ಹರಿಯಲಿಲ್ಲ; ಆಗ ಅಪರಿಚಿತ ವಣಿಕನು ಬಾಗಿಲು ತಟ್ಟಲು ಕರಮಚಂದನು ಬಾಗಿಲ ತೆರೆದು ಹೊರಬಂದು ಅವನೊಡನೆ ಕರೆಯಲು ಕಾರಣವೇನೆಂದು ಮುಗಳ್ನಕ್ಕು ಕೇಳಿದನು. ಆಗವನು ಮಂದಹಾಸದಿಂದ ತಾವೆಲ್ಲಿಗೆ ಹೋಗುವಿರಿ ? ಎಂದು ಕೇಳಲು, ಪತ್ತೆದಾರಿಯು ಮುಂಬಾಯಿಯಲ್ಲಿ ಮಾತುಂಗಕ್ಕೆ ಹೋಗಬೇಕಾಗಿದೆಯೆಂದನು. ಅನಂತರ ಅವರಿಬ್ಬರೂ ಸ್ವಲ್ಪ ಸಮಯ ಮಾತನಾಡುತ್ತಿದ್ದರು. ಸಾಧಾರಣ ಮಧ್ಯಾಹ್ನ ಒಂದುಗಂಟೆಗೆ ಪತ್ತೆದಾರಿಯು ಹಡಗಿನಲ್ಲಿರುವ ರೆಸ್ಟೋರೆಂಟಿಗೆ ಉಪಾಹಾರಕ್ಕಾಗಿ ಹೋದನು. ಅವನು ಬಿಸ್ಕೋಟ್ ಬ್ರೆಡ್ ಮತ್ತು ಬಾಳೆ ಹಣ್ಣುಗಳನ್ನು ತಿನ್ನುತ್ತಾ ‘ ಕೊಕ್ಕೊ ’ ಕುಡಿಯುತಿದ್ದನು. ಆಗ ಅಪರಿಚಿತ

ವ್ಯಕ್ತಿಯು ಹಿಂದಿನಿಂದ ಒಂದು ಅವನ ಬೆನ್ನಿಗೆ ತಟ್ಟಿದಾಗ ಕರಮಚಂದನು ತಿರುಗಿ ನೋಡಿ ಅವನನ್ನು ಕಂಡು ನಸುನಕ್ಕನು. ಅಪರಿಚಿತ ವರ್ತಕನು ಎದುರಿನ ಟೇಬಲ್‌ನಲ್ಲಿ ಕುಳಿತುಕೊಂಡು ಕೆಲವು ತಿಂಡಿಗಳನ್ನು ತರ ಹೇಳಿದನು. ಲೋಕಾಭಿರಾಮವಾಗಿ ಅವರು ಮಾತನಾಡುತ್ತಿರಲು ಪತ್ತೆ ದಾರಿಯು ಅವನೊಡನೆ ತಮ್ಮ ಹೆಸರೇನೆಂದು ಕೇಳಲಾ ವಣಿಜನು ರಾಮ ಚಂದ್ರನೆಂದನು. ಕರಮಚಂದನು ರಾಮಚಂದ್ರನೊಡನೆ ಮುಂಬಯಿ ಶಹರಿನ ವಿಷಯ ಮಾತನಾಡುತ್ತಿರಲು ಅವನು ಬಹಳ ಮನೋಹರವಾಗಿ ಆ ನಗರದ ವರ್ಣನೆಯನ್ನು ಮಾಡುತ್ತಿರಲು ಅವನ ಮಾತಿನಲ್ಲಿ ಪತ್ತೆದಾ ರಿಯು ತಲ್ಲೀನನಾಗಿರಲು ವರ್ತಕನು ಮುಂಬಾಯಿಗೆ ತಾವು ಯಾವ ಕಾರ್ಯಕ್ಕಾಗಿ ಹೋಗುವುದೆಂದು ಕೇಳಲು ಅವನು ತಾನು ಹೋಗುವ ಕೆಲಸದ ಸಂಗತಿಯನ್ನು ತಿಳಿಸಲು ಮನವಿಲ್ಲದೆ ನಗರ ಸಂದರ್ಶನಕ್ಕಾಗಿ ಯೆಂದನು.

ಪಾಠಕ ಮಹಾಶಯರೆ! ರಾಮಚಂದ್ರ ವರ್ತಕನು ಜಹಜಿನಲ್ಲಿ ಕರಮಚಂದನಿಗೆ ಚಿರಪರಿಚಿತನಂತಾಗಿ ಸ್ನೇಹಿತನಂತಾದನು. ಅವನೇ ಠಕ್ಕನಾದ ಲೋಬೋನೆಂದು ವಾಚಕರೂಹಿಸಿರಬಹುದು. ಕೃತ್ರಿಮ ವಾದ ತಾರನ್ನು ಅಂಚೆಯವನ ಹತ್ತಿರಕೊಟ್ಟು ಕರಮಚಂದನು ಮುಂಬಾ ಯಿಗೆ ಹೊರಡುವಂತೆ ಮಾಡಿದ್ದನು. ಕರಮಚಂದನು ಆ ವರ್ತಕನನ್ನು ನಿಜವಾದ ವಣಿಜನೆಂದೇ ತಿಳಿದಿದ್ದನು. ಅವನು ವರ್ತಕನೊಡನೆ ನಿಮ್ಮ ಮನೆ ಮುಂಬಯಿಯಲ್ಲೇನು ? ಎಂದು ಕೇಳಲು ರಾಮಚಂದ್ರನು ಮಾತುಂಗದಲ್ಲಿ ಪ್ರಸಿದ್ಧ ಪಟ್ಟ ಡಾಕ್ಟರ್ ರಮೇಶ ಅವರ ಮನೆಯ ಹತ್ತಿ ರವೇ ನನ್ನ ಮನೆಯೆಂದನು ಕರಮಚಂದನಾಗ ನಾನು ಈ ದಿನ ಡಾ| ರಮೇಶನಲ್ಲಿಗೆ ಹೋಗಲಿಕ್ಕಿರುವೆನು. ತಾವೂ ಸಹ ಅವರ ಮನೆಯ ಸಮೀಪ ವಿರುವಿರಾದುದರಿಂದ ನಾವು ಒಟ್ಟಿಗೇನೇ ಧಕ್ಕೆಯಿಂದಿಳಿದು ಅಲ್ಲಿಗೆ ಹೋಗುವ ಎನ್ನಲು ವರ್ತಕನೊಪ್ಪಿದನು ಜಹಜಿನಲ್ಲಿ ಕರಮಚಂದನು ಅಡಿಗೆಯವನ ಹತ್ತಿರದಿಂದ ಊಟವನ್ನು ತನ್ನ ಕೋಣೆಗೇ ತರಿಸುತಿದ್ದನು. ವರ್ತಕನೂ ತನ್ನ ಭೋಜನವನ್ನು ತನ್ನ ಕೊಠಡಿಯಲ್ಲಿಯೇ ಮಾಡುತಿ ದ್ದನು ವರ್ತಕ ವೇಷಧಾರಿಯಾದ ಲೋಬೋನು ಹೇಗಾದರೂ ಮಾಡಿ ಪತ್ತೆದಾರಿಯನ್ನು ನಾಶಪಡಿಸಬೇಕೆಂದು ತಿಳಿದಿದ್ದನಷ್ಟೆ! ಅವನು ಹಡಗ

ವೆನ್ನೇರಿದ ಕೂಡಲೇ ಪತ್ತೇದಾರಿಯನ್ನು ಕೊಲ್ಲಲು ಯುಕ್ತಿಯನ್ನು ಯೋಚಿಸುತ್ತಿದ್ದನು. ಅವನು ಅಡಿಗೆಯವನಿಗೆ ಲಂಚಕೊಟ್ಟು ಅನ್ನದಲ್ಲಿ ವಿಷಹಾಕಿ ಕರಮುಚಂದನಿಗೆ ಕೊಡುವಂತೆ ಹೇಳಿದನು. ಅಡಿಗೆಯವನು ಒಪ್ಪದಿರಲು ವಿಜ್ಞಾನಿಯು ಮತ್ತೂ ಲಂಚಕೊಟ್ಟನು. ಹಣ ಕಂಡರೆ ಹೆಣ ಬಾಯ್ಬಿಡುತ್ತದೆ ಎಂಬಂತೆ ಲಂಚ ಸಿಕ್ಕಲು ಆ ದರಿದ್ರನು ಹಣದಾಸೆಗಾಗಿ ಬಾಯ್ಬಿಟ್ಟನು. ಅಬ್ಬಾ! ಹಣದ ಮಹಾತ್ಮೆಯೇ !!! ಹಣದ ಲೋಭಕ್ಕಾಗಿ ಲೋಬೋನು ಕೊಟ್ಟ ವಿಷವನ್ನು ಅನ್ನದಲ್ಲಿ ಬೆರೆಸಿ ಅವನು ಕರಮುಚಂದನಿಗೆ ಕೊಟ್ಟನು. ಕರಮುಚಂದನು ಎಂದಿನಂತೆ ಊಟಕ್ಕೆ ಕುಳಿತನು. ಅಡಿಗೆಯವನಿನ್ನೂ ಹೋಗದಿರಲು ಅನ್ನದ ತಾಟನ್ನು ಟೇಬಲ್‌ನಲ್ಲಿಟ್ಟ ಕೂಡಲೆ ಅಡಿಗೆಯವನು ಹೋಗುತ್ತಿದ್ದನಾದರೂ ಈ ದಿನ ಹಾಗೇಕೆ ಮಾಡಲಿಲ್ಲವೆಂದು ಪತ್ತೇದಾರಿಯು ತರ್ಕಿಸಲಾರಂಭಿಸಿ ಅಡಿಗೆಯವನ ಮುಖವನ್ನೇ ದಿಟ್ಟಿಸಿ ನೋಡಲವನು ಮುಖ ತಗ್ಗಿಸಿ ಅಲ್ಲಿಂದ ಹೊರಟು ಹೋದನು. ಅವನ ಅಂದಿನ ನಡತೆಯನ್ನು ಕಂಡು ಕರಮುಚಂದನಿಗೇನು ಹೊಳೆಯಿತೋ ಏನೊ ? ಬಲ್ಲವರಾರು ? ಅವನು ಅನ್ನವನ್ನು ಚೆನ್ನಾಗಿ ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸಿ ನೋಡಲು ಅನ್ನದಲ್ಲಿ ಏನನ್ನೊ ಬೆರೆಸಿರುವರೆಂಬುದು ಅವನಿಗೆ ತಿಳಿಯದಿರಲಿಲ್ಲ. ಅವನಾ ಅನ್ನವನ್ನು ಕಿಟಕಿಯೆಡೆಯಿಂದ ಯಾರಿಗೂ ಗೊತ್ತಾಗದಂತೆ ಸಮುದ್ರಕ್ಕೆಸೆದನು. ಅರ್ಧ ಗಂಟೆ ಕಳೆಯಲು ಅಡಿಗೆಯವನಲ್ಲಿಗೆ ಬಂದು ಊಟ ಮಾಡಿರುವನೋ ಎಂದು ನೋಡಲು, ಬಟ್ಟಲು ಬರಿದಾಗಿ ಇರುವುದನ್ನು ಕಂಡು ಊಟ ಮಾಡಿರುವನೆಂದೆಣಿಸಿ ಹಿಂದಕ್ಕೆ ಹೋದನು. ಸ್ವಲ್ಪ ಹೊತ್ತಿನಲ್ಲಿಯೇ ಲೋಬೋನು ಓಹೋ! ತಪ್ಪಿದೆ ತಪ್ಪಿದೆ; ಅಲ್ಲಲ್ಲ ವರ್ತಕನು ಅಲ್ಲಿಗೆ ಬಂದು ಪತ್ತೇದಾರಿಯೊಡನೆ ಊಟವಾಯಿತೆ? ಎಂದು ಕೇಳಲು ಅವನು ಆಯಿತೆಂದು ಹೇಳಿ ವರ್ತಕನೊಡನೆ ಈ ದಿನವೇಕೋ ನನಗೆ ಬಹಳ ತ್ರಾಸವಾಗುತ್ತಿದೆ. ತಲೆ ಗಿರ್ರನೆ ತಿರುಗುತ್ತಿದೆಯಲ್ಲದೆ ಕಣ್ಣು ಕತ್ತಲೆ ಕವಿದಂತೆ ಕಾಣಿಸುತ್ತಿದೆ ಎಂದು ಸುಮ್ಮ ಸುಮ್ಮನೆ ಹೇಳಿದನು. ಆಗ ಸಂತೋಷಪಟ್ಟ ಹೃದಯವುಳ್ಳ ವರ್ತಕನು ಹೊರಗಡೆಯಲ್ಲಿ ದುಃಖಪಟ್ಟವನಂತೆ ನಟಿಸಿ ಅಲ್ಲಿಂದ ಹಿಂದಿರುಗಿ ಹೋದನು. ವರ್ತಕನು ತನ್ನ ಕೋಣೆಗೆ ಹೋಗಿ ಪೈಶಾಚಿಕ ನಗುನಕ್ಕು ಕರಮುಚಂದನ್ನು ತೀರ ತಿಳಿಗೇಡಿಯೆಂದು ತಿಳಿದನಲ್ಲದೆ ತನಗಿನ್ನು ಶತ್ರುಗಳಿಲ್ಲವೆಂದು ಖಚಿತ

ಮಾಡಿದನು. ತನಗೆ ಕರಮಚಂದನಷ್ಟು ಸಮರ್ಥರಾದ ಶತ್ರುಗಳು ಬೇರಾರೂ ಇಲ್ಲವೆಂದವನು ಮೊದಲೇ ನಿಶ್ಚಯಿಸಿದ್ದನು ಅವನೀಗ ತನ್ನ ಯುಕ್ತಿಯಿಂದ ಹತನಾಗುವನೆಂದು ಹಿಗ್ಗಿದನು. ಆದರೆ ವಾಚಕರೆ! ಪ್ರಪಂಚದಲ್ಲಿ ಮಾನವನು ಒಂದು ಉದ್ದೇಶದಿಂದ ಮಾಡಿದ ಕಾರ್ಯವು ಸಫಲವಾಗದೆ ದೈವ ಸಂಕಲ್ಪದಿಂದಲಾಗಿ ಬೇರೆ ಫಲ ಉಂಟಾಗುವುದೆಂದು ನಾಸ್ತಿಕನಾದ ಆ ಅತ್ಯಾಚಾರಿ ಪರಸ್ತ್ರೀಅಪಹರಣ, ಕೊಲೆಕಳವು ಮೊದಲಾದ ಹೇಯ ಕಾರ್ಯಗಳಲ್ಲಿಯೇ ಮನವಿಟ್ಟಿರುವ ಅದರಲ್ಲಿ ತಲ್ಲೀನನಾಗಿ ಬಾಹ್ಯ ಪ್ರಪಂಚವನ್ನೇ ಮರೆತಿರುವ ಆ ನೀಚ ವಿಜ್ಞಾನಿಗೇನು ಗೊತ್ತು ???

ವರ್ತಕ ವೇಷಧಾರಿಯಾದ ಲೋಬೋನು ಸ್ವಲ್ಪ ಸಮಯದಲ್ಲಿಯೇ ಅಲ್ಲಿಗೆ ಪುನಃ ಬಂದು ಈಗ ನಿಮ್ಮ ರೋಗ ವಾಸಿಯಾಯಿತೆ? ಎಂದು ಕೇಳಲು ಕರಮಚಂದನು ಹೂಂ ಎಂದನು. ಲೋಬೋನಿಗಾಗ ಬಹಳ ಆಶ್ಚರ್ಯಯುಂಟಾಯಿತು ತಾನು ಅತಿ ಕಠೋರವಾದ ಹಾಲಾಹಲ ವಿಷಕ್ಕಿಂತಲೂ ಮಿಗಿಲಾದ ವಿಷವನ್ನು ಅನ್ನದಲ್ಲಿ ಕೊಟ್ಟಿದ್ದರೂ ಈ ಧೂರ್ತ ನಿನ್ನೂ ಸಾಯಲಿಲ್ಲವಲ್ಲ!!! ಆ ಅನ್ನವನ್ನವನು ನಿಜವಾಗಿ ಸೇವಿಸಿದ್ದರೆ ಈಗ ಬವಳಿಗೊಂಡು ಬಿದ್ದಿರಬೇಕಿತ್ತು. ಆದರಿವನು ಸ್ಮೃತಿತಪ್ಪಿ ಬೀಳಲೇ ಇಲ್ಲವಲ್ಲ! ಒಂದು ವೇಳೆ ಆ ವಿಷಾನ್ನವನ್ನಿವನು ಸೇವಿಸದೆ ಸಮುದ್ರಕ್ಕೆಸೆದಿರಬಹುದೆ? ಆಗಲಿ ಈ ಧೂರ್ತನು ಎಲ್ಲಿಗೆ ಹೋದಾನು? ಡಾ| ರಮೇಶನಲ್ಲವೆ? ಹಸಿದ ಹೆಬ್ಬುಲಿಯ ಕೈಯಿಂದ ತಪ್ಪಿಸಿ ಗಾಯಗೊಂಡ ಹಂದಿಯ ಬಳಿಗೆ ಹೋದಂತೆ ಆದೀತು ಪಿಟ್ಟನೇ ಡಾ| ರಮೇಶನೆಂದು ಇವನಿಗೆ ಹೇಳುವವರಾರು? ಎಂದಾಲೋಚಿಸಿ ಕರಮಚಂದನು ಸಾಯಲಿಲ್ಲವಲ್ಲಾ ಎಂದು ವ್ಯಸನಗೊಂಡನು. ಬಹಿರಂಗದಲ್ಲಿ ಸಂತೋಷಪಟ್ಟವನಂತೆ ಅಲ್ಲಿಂದ ತನ್ನ ಕೋಣೆಗೆ ಬಂದನು. ಪತ್ತೇದಾರಿಗೆ ವರ್ತಕನ ಮೇಲೆ ಎಳ್ಳಿನಷ್ಟೂ ಸಂಶಯುಉತ್ಪನ್ನವಾಗಲಿಲ್ಲ. ಮಂಗಳೂರಿನಿಂದ ಹೊರಟ ಎರಡನೆಯ ದಿನ ಸಾಯಂಕಾಲ ಏಳು ಗಂಟೆಗೆ ಜಹಜು ಮುಂಬಾಯಿ ಧಕ್ಕೆಗೆ ಮುಟ್ಟಿತು ಕರಮಚಂದನು ಹಡಗಿನಿಂದ ಕೆಳಗಿಳಿದು ಬಂದೊಡನೆ ಅವನ ಬೆನ್ನ ಹಿಂದಿನಿಂದಲೇ ರಾಮಚಂದ್ರ ವರ್ತಕನೂ ಬಂದನು. ಬಂದರಿನಲ್ಲಿ ಖಾದಿ ಉಡುಪುತೊಟ್ಟು, ಕೃಶನಾಗಿದ್ದು ಉದ್ದವಾಗಿ ಬೆಳೆದ ಯುವಕನೊಬ್ಬನು ನಿಂತಿಕೊಂಡಿದ್ದನು. ಅವನಾ

ರನ್ನೋ ಹುಡುಕುವಂತೆ ಕಾಣುತಿತ್ತು ಕರಮಚಂದನನ್ನವನು ಕಂಡು ಮೆಲ್ಲನೆ ಹತ್ತಿರ ಬಂದು ಮಂಗಳೂರಿನಿಂದ ಪತ್ತೆದಾರಿ ಕರಮಚಂದರು ಈ ಹಡಗಿನಲ್ಲಿ ಬಂದಿರುವರೆ? ಎಂದು ಪ್ರಶ್ನಿಸಲು ಅವನು ಕುತೂಹಲ ದಿಂದ ಏಕೆ? ಎಂದು ಪ್ರಶ್ನಿಸಿದನು. ಆ ಯುವಕನ ಸ್ವರ ಮೊದಲೆಲ್ಲಿಯೋ ಕೇಳಿದಂತಿದ್ದರೂ ಅವನಾರೆಂದು ಪತ್ತೆದಾರಿಗೆ ತಿಳಿಯಲಿಲ್ಲ ಯುವಕನು ಡಾ|| ರಮೇಶ ಇವರು ನನ್ನೊಡನೆ ಈ ದಿನ ಹಡಗಿನಲ್ಲಿ ಮಂಗಳೂರಿನಿಂದ ಕರಮಚಂದರು ಬರಲಿಕ್ಕಿರುವರೆಂದೂ ಅವರನ್ನು ಕಾರಿನಲ್ಲಿ ಕರೆದುಕೊಂಡು ಬರಬೇಕೆಂದೂ ಹೇಳಿರುವರೆಂದನು. ಅವರು ಬಂದಿರುವರೆ? ಎಂದು ಪುನಃ ಪ್ರಶ್ನಿಸಲು, ಕರಮಚಂದನು ನಾನೇ ಎಂದನು ಹೋ, ತಾವೇ ಕರಮ ಚಂದರೋ? ಬೇಗ ಬನ್ನಿರಿ, ಕಾರಿನಲ್ಲಿ ಕುಳಿತುಕೊಳ್ಳಿರಿ ಎಂದು ಹೇಳಿ ಅವನು ಕಾರಿನ ಹತ್ತಿರ ಹೋಗಿ ಬಾಗಿಲು ತೆರೆಯಲು ಕರಮಚಂದನು ಹಿಂದಿನ ಸೀಟಿನಲ್ಲಿ ಕುಳಿತನು ಅಷ್ಟರಲ್ಲಿ ವರ್ತಕನೂ ಅಲ್ಲಿಗೆ ಬರಲು ಡ್ರೈವರ್‌ನು ಅವನನ್ನು ಕರೆದು ಕಾರಿನಲ್ಲಿ ಕುಳಿತುಕೊಳ್ಳಿರಿ ಎಂದನು. ಕರಮಚಂದನೂ ಬನ್ನಿರಿ ವರ್ತಕರೆ! ಎನ್ನಲು ವಣಿಜ ವೇಷಧಾರಿಯಾದ ಲೋಬೋನು ಬಂದು ಅವನ ಹತ್ತಿರ ಕುಳಿತುಕೊಳ್ಳಲು ಕಾರು ವಾಯು ವೇಗದಿಂದ ಹೊರಟು ಮಾತುಂಗಕ್ಕೆ ತಲುಪಿತು. ಅಷ್ಟರಲ್ಲಿ ವರ್ತಕನು ನನ್ನ ಮನೆಯು ಸಮೀಪ ಇಳಿಯುತ್ತೇನೆ ನಾಳೆ ಕಾಣುವ, ಎಂದು ಪತ್ತೆ ದಾರಿಯೊಡನೆ ಹೇಳಿ ಕಾರು ನಿಲ್ಲಲು ಕೆಳಗಿಳಿದನು. ಕಾರು ಪುನಃ ಅಲ್ಲಿಂದ ಮುಂದುವರಿದು ಒಂದು ಫರ್ಲಾಂಗ್ ದೂರ ಹೋಗಿ ನಿಂತಿತು. ಡ್ರೈವ ರನು ಇದೇ ಡಾಕ್ಟರ್‌ರ ಮನೆಯೆಂದು ಕೈತೋರಿಸಿದನು. ಕರಮಚಂದನು ಕಾರಿನಿಂದ ಕೆಳಗಿಳಿದು ಹೋಗಲು ಡ್ರೈವರನು ಅವನ ಹಿಂದಿನಿಂದ ಹೋದನು. ವಾಚಕರೆ! ಪಿಟ್ಟನೀಗ ಡಾ|| ರಮೇಶನೆಂಬ ಹೆಸರಿನಲ್ಲಿರು ವುದರಿಂದ ನಾವಿನ್ನು ಈ ಪ್ರಕರಣದಲ್ಲಿ ಅವನನ್ನು ರಮೇಶನೆಂದೇ ಹೇಳುವ.

ಡಾ|| ರಮೇಶನು ಪೋರ್ಟಿಕೋದಲ್ಲಿ ಪೇಪರ್ ನೋಡುತ್ತಾ ಅವನತ ವದನನಾಗಿ ಕುಳಿತಿದ್ದನು ಕರಮಚಂದನು ಪೋರ್ಟಿಕೋವಿಗೆ ಬರಲು ಆಗ ಯಾರೋ ಬಂದರೆಂದು ತಿಳಿದು ಡಾಕ್ಟರ್ ಮಹಾಶಯನು ಬನ್ನಿರಿ ಕುಳಿತುಕೊಳ್ಳಿರೆಂದು ಹೇಳಿ ಕುರ್ಚಿಯನ್ನು ತೋರಿಸುತ್ತಾ ಇಲೆಕ್ಟ್ರಿಕ್

ಬೆಸ್ಲಿಸ್ಕೊತ್ತಿದನು ಅಷ್ಟರಲ್ಲಿ ಹದಿನಾರು ವರ್ಷದ ಯುವಕನೊಬ್ಬನು ಅಲ್ಲಿಗೆ ಬರಲು ಅವನೊಡನೆ ಡಾಕ್ಟರ್ ಕಾಫಿ, ಬ್ರೆಡ್, ಓರೆಂಜ್‌ಗಳನ್ನು ತಾ, ಎನ್ನಲು ಬೆಳ್ಳಿಯ ತಾಟುಗಳಲ್ಲಿ ಅವನು ಅವುಗಳನ್ನು ತಂದು ಟೇಬಲ್‌ನಲ್ಲಿಟ್ಟನು. ಡಾಕ್ಟರನೂ ಕರಮುಚಂದನೂ ಲೈಟ್ ರಿಫ್ರೆಷ್ ಮೆಂಟ್ ತೀರಿಸಿದ ನಂತರ ರಮೇಶನು ಪತ್ತೆದಾರಿಯೊಡನೆ ನನ್ನ ಪ್ರಿಯ ಮಡದಿಯನ್ನು ಬದ್‌ಮಾಷರಾರೋ ಬಹಳ ಗುಪ್ತವಾಗಿ ಅದಾವುದೋ ಒಂದು ರೀತಿಯಿಂದ ಕೊಲೆಮಾಡಿರುವರು ಎಂದು ಹೇಳುತ್ತಾ ಸಣ್ಣ ಮಗುವಿನಂತೆ ಅಳಹತ್ತಿದನು. ಶವವೆಲ್ಲಿದೆ? ಕೊಲೆಯಾಗಿ ದಿವಸಗಳೆಷ್ಟಾದುವು? ಎಂದು ಅವನು ಕೇಳಲು. ರಮೇಶನು ಗೋಳೋ ಎಂದು ಅಳುತ್ತಾ ಶವವನ್ನು ಪೋಲೀಸರು....ಎಂದು ಹೇಳುತ್ತಿರಲು ಮುಂದೆ ಅವನ ಬಾಯಿಂದ ಶಬ್ದವೇ ಹೊರಡಲಿಲ್ಲ. ಕರಮುಚಂದನು ಇವನು ಮಡದಿಯ ಮರಣದಿಂದಲಾಗಿ ಚಿಂತಾಕ್ರಾಂತನಾಗಿರುವನೆಂದೂಹಿಸಿದನು. ಪೋಲೀಸರು ಶವವನ್ನೆಲ್ಲಿಗೆ ತೆಗೆದುಕೊಂಡು ಹೋದರು? ಎಂದು ಪತ್ತೆದಾರಿಯು ಪುನಃ ಕೇಳಲು ಅವನು ಸ್ಟೇಷನ್‌ನಲ್ಲಿ ಭದ್ರವಾಗಿರಿಸಿರುವರೆಂದು ಹೇಳುತ್ತಾ ಕಣ್ಣೀರು ಸುರಿಸಿದನು. ಪತ್ತೆದಾರಿಯು ಕೊಲೆಯಾಗಿ ಎಷ್ಟು ದಿವಸವಾಯಿತೆಂದು ಕೇಳಿದುದಕ್ಕೆ ಅವನು ಮೂರು ಎಂದನು. ಅವನು ಮೂರು ದಿವಸಗಳಾಯಿತೆ? ಎಂದು ಕೇಳಲು ಹೌದೆಂದು ತಲೆದೂಗಿದನು. ಖೂನಿಯು ಹೇಗೆ ಮಾಡಲ್ಪಟ್ಟಿತು? ಎಂದು ಕೇಳಿದುದಕ್ಕೆ ರಹಸ್ಯವಾಗಿಯೆಂದನು. ಇನ್ನೂ ಅವನ ರೋದನವು ನಿಲ್ಲಲಿಲ್ಲ. ಅವನು ಪತ್ತೆದಾರಿಗಳೇ, ನನ್ನ ಮಡದಿಯನ್ನು ಯಮಲೋಕದಿಂದ ಪತ್ತೆಹಚ್ಚಿ ತರಲಾರಿರಾ ಎಂದು ಅಂಗಲಾಚಿ ಬೇಡಿಕೊಂಡನು. ಸತ್ತವರು ಪುನಃ ಬರಲಿಕ್ಕಿಲ್ಲವೆಂದು ಈ ಡಾಕ್ಟರನಿಗೇನು ಗೊತ್ತಿಲ್ಲವೆ? ಎಂದು ಕರಮುಚಂದನು ತಿಳಿದು ಬಹುಶಃ ಇವನೀಗ ಚಿಂತೆಯಿಂದ ಮರುಳನಾಗಿರಬಹುದು ಇನ್ನು ಈ ದಿನ ಹೆಚ್ಚು ಪ್ರಶ್ನೆ ಕೇಳಿ ಇವನ ಬುದ್ಧಿಗೆಡಿಸಿದರೆ ಏನೂ ಪ್ರಯೋಜನವಿಲ್ಲವೆಂದು ತಿಳಿದು ಪತ್ತೆದಾರಿಯು ನೀವು ನಿಶ್ಚಿಂತರಾಗಿರಿ. ನಾಳೆ ಹೆಚ್ಚಿನ ವಿಷಯ ಆಲೋಚಿಸುವಾ, ಎಂದನು. ಸ್ವಲ್ಪ ಸಮಯದಲ್ಲಿ ಮಳೆಸುರಿದು ಬರಿದಾಗಿ ಶುಭ್ರವಾದ ಮೋಡದಂತೆ ರಮೇಶನ ಕಣ್ಣೀರು ನಿಂತು ಮುಖವು ಶೋಭಿಸಿತು.

ರಮೇಶನು ಕರಮಚಂದನಿಗೆ ಭೋಜನಕ್ಕೆ ಅಲ್ಲಿಯೇ ಹತ್ತಿರವಿರುವ ಪಾನಾವಳಿಯಲ್ಲೇರ್ಪಾಡು ಮಾಡಿದನು. ಅವನೂ ಸಹ ಪತ್ತೇದಾರಿಯೊಡನೆ ಭೋಜನ ಮಂದಿರಕ್ಕೆ ಹೋಗಿ ಊಟ ತೀರಿಸಿ ಮನೆಗೆ ಬಂದನು. ಚಿತ್ರಪಟಗಳಿಂದಲಂಕೃತವಾದ ಸುಪ್ಪತ್ತಿಗೆಯು ಮಂಚವಿರುವ ಕೋಣೆಯಲ್ಲಿ ರಮೇಶನು ಪತ್ತೇದಾರಿಗೆ ಮಲಗಲು ಹೇಳಿದನು ಮಾರ್ಗಾಯಾಸದಿಂದ ಬಳಲಿದ್ದುದರಿಂದ ಕರಮಚಂದನಿಗೆ ಬೇಗನೆ ನಿದ್ರೆಬಂದಿತು. ಎಂತಹ ಕುಶಾಗ್ರ ಬುದ್ಧಿಸಾಮರ್ಥ್ಯಗಳಿದ್ದರೂ ನಿದ್ರೆಬಂದಿರುವಾಗ ಸತ್ತಂತೆಯೇ ಸರಿ! ರಾತ್ರಿ ಯಾರೋ ಪಿಸುಗುಟ್ಟುತ್ತಿರುವುದು ಅವನಿಗೆ ಕೇಳಿಸಿದರೂ ನಿದ್ರೆಯ ಅಮಲಿನಿಂದಲಾಗಿ ಅವನು ಅವರ ಗೊಡವೆಗೆ ಹೋಗಲಿಲ್ಲ.

● ● ○ ● ●

ಭಗವಾನ್ ಸೂರ್ಯನಾರಾಯಣನು ಮೂಡಣ ದಿಕ್ಕಿನಲ್ಲಿ ಮೂಡುವ ಸಮಯವಾಯಿತು ರಕ್ತವರ್ಣದ ರಶ್ಮಿಗಳು ಸೂರ್ಯನು ಉದಯಿಸಿ ಬರುತ್ತಿದ್ದಾನೆಂದು ಒಸಗೆ ತರಲು ಮುಂದಾಗಿ ಬಂದಿದ್ದುವು ನಿಶೆಯೊಡನೆ ಕಾದಿರುಳನ್ನು ನಾಶಪಡಿಸಲು ಯುದ್ಧಮಾಡಿದಾಗ ಉಂಟಾದ ಗಾಯಗಳಿಂದ ಪ್ರಭಾಕರನ ಶರೀರದಿಂದ ಕೆನ್ನೆತ್ತರು ಚಿಮ್ಮಿ ಆಕಾಶವು ನಸುಗೆಂಪಾಗಿತ್ತು. ಸ್ತ್ರೀಹತ್ಯಾ ಪಾತಕವನ್ನು ಮಾಡಲು ಮನಸ್ಸಿಲ್ಲದೆ ಭಗವಂತನು ನಿಶಾದೇವಿಯನ್ನು ಕೊಲ್ಲದೆ ಸೋಲಿಸಿ ಅಟ್ಟಿದನು. ಪಾತಕರೆ! ಈ ರೀತಿಯಲ್ಲಿ ದುಷ್ಟರನ್ನು ಕೊಲ್ಲದೆ ಅಲ್ಪಶಿಕ್ಷೆಯಿಂದ ಬಿಟ್ಟುಬಿಟ್ಟರೆ ಖಳರು ಪುನಃ ಮಾರ್ಬಲಿದೊಡನೆ ನಮ್ಮನ್ನಾಕ್ರಮಿಸಿ ತೊಂದರೆಗೀಡು ಮಾಡುವವರಲ್ಲವೆ! ಪೃಥ್ವೀರಾಜನು ತನ್ನ ರಾಜ್ಯಕ್ಕೆ ಹಲ್ಲೆಮಾಡಿದ ಘೋರಿ ಮಹಮ್ಮದನನ್ನು ಯುದ್ಧದಲ್ಲಿ ಸೋಲಿಸಿ ಅವನನ್ನು ನಾಶಮಾಡದೆ ಹಿಂದಕ್ಕಟ್ಟಿದನು; ಆದರೇನಾಯಿತು? ಆ ನೀಚ ಶಿಖಾಮಣಿಯು ಪುನಃ ಬಲಿಷ್ಠವಾದ ಸೇನೆಯನ್ನು ಸಂಗ್ರಹಿಸಿ ಮತ್ತೆ ಪೃಥ್ವೀರಾಜನನ್ನು ಸೋಲಿಸಿದುದಲ್ಲದೆ, ಅವನ ರುಂಡವನ್ನೇ ಮುಂಡದಿಂದ ತುಂಡರಿಸಿದನಲ್ಲವೆ? ಹಾವಿಗೆ ಹಾಲೆರೆದರೆ ಅದು ಅದನ್ನು ಕುಡಿದರೂ ಕೃತಜ್ಞತೆಯಿಲ್ಲದೆ ನಮ್ಮನ್ನು ಹೆಚ್ಚಾದ ಕಂಟಕಕ್ಕೀಡು ಮಾಡುವುದಿಲ್ಲವೆ? ಅದೇ ರೀತಿಯಲ್ಲಿ ದಿನಮಣಿಯು ನಾರೀಹತ್ಯೆಗೆ ಹೇಸಿ ನಿಶಾರಾಣಿಯನ್ನು ಸೋಲಿಸಿ ಸಂಹರಿಸದೆ ಅಟ್ಟಿದರೂ ಪುನಃ ಆ ತಮೋಗುಣದ ಅಂಧಂತಮಸ್ಸು

ಸೂರ್ಯನ ಪ್ರಕಾಶವನ್ನು ನಾಶಪಡಿಸಿ ತನ್ನ ಪ್ರಭಾವವನ್ನು ಬೀರುತ್ತಿದೆ; ಅಪರೆ ಬಲಿಷ್ಠನಾದ ಭಗವಾನ್ ಸೂರ್ಯನಾರಾಯಣನು ಯುದ್ಧದಾಯಾಸವನ್ನು ನೀಗಿ ಕ್ಷಾತ್ರತೇಜದಿಂದ ಪ್ರಜ್ವಲಿಸಿ ನಿಶೆಯನ್ನಟ್ಟುತ್ತಾನೆ; ಆದರೂ ಮತ್ತೂ ಅವಳನ್ನು ಸಂಪೂರ್ಣ ನಾಶಗೊಳಿಸದಿದ್ದುದರಿಂದ 'ಚಕ್ರನೇಮಿಕ್ರಮೇಣ' ಇದೇ ರೀತಿಯಲ್ಲಿ ಒಂದುಸಲ ನಿಶೆಯ ಸೋಲು, ಪುನಃ ದಿನಮಣಿಯ ಪ್ರಭಾವ ಈ ರೀತಿಯಲ್ಲಿ ಮುಂದುವರಿಯುತ್ತಿದೆಯಲ್ಲವೆ! ಇರಲಿ. ಅರುಣೋದಯವಾಗಲು ಡಾ|| ರಮೇಶನ ಕಂಪೌಂಡಿನಲ್ಲಿರುವ ಚೂತವೃಕ್ಷದಲ್ಲಿರುವ ಕೋಗಿಲೆಯು ಗಾನಮಾಡಲಾರಂಭಿಸಿತು. ಬಸ್, ಟ್ರಾಮ್ ಮೊದಲಾದ ವಾಹನಗಳ ಓಡಾಟವು ಪ್ರಾರಂಭವಾಯಿತು. ಆಗ ಕರವುಚಂದನಿಗೆ ಎಚ್ಚರವಾಯಿತು ಅವನು ಗಂಟೆ ಎಷ್ಟಾಯಿತೆಂದು ಕೈಗಡಿಯಾರ ನೋಡಲು ಬೆಳಗ್ಗೆ ಆರೂವರೆ ಗಂಟೆಯಾಗಿತ್ತು. ಕೂಡಲೇ ಅವನು ಎದ್ದು ಬಾಗಿಲು ತೆರೆದು ಹೊರಗೆ ಬರಲು ಡಾ|| ರಮೇಶನು ಪೋರ್ಟಿಕೋದಲ್ಲಿ ನಿಂತಿದ್ದನು ಪತ್ತೆದಾರಿಯು ಎಚ್ಚೆತ್ತು ಹೊರಬಂದುದನ್ನು ಕಂಡು ಅವನು ಮುಖತೊಳೆಯಲು ಹೇಳಿ ಸೇವಕನೊಡನೆ ಕಾಫಿ ತರಲು ಹೇಳಿದನು ಕರಮಚಂದನು ನಿತ್ಯ ವಿಧಿಗಳನ್ನು ತೀರಿಸಿ ಬರಲು ಟೇಬಲ್‌ನಲ್ಲಿ ಉಪಾಹಾರಕ್ಕೆ ತಿಂಡಿಗಳೂ ಪಾನೀಯಗಳೂ ಇಡಲ್ಪಟ್ಟಿದ್ದುವು ಡಾ|| ರಮೇಶನೂ ಕರಮಚಂದನೊಡನೆ ಉಪಾಹಾರ ತೀರಿಸಿದನು

ಪತ್ತೆದಾರಿಯು ಡಾಕ್ಟರ್‌ನೊಡನೆ ನಿಮ್ಮ 'ಡಿಸ್‌ಪೆನ್ಸರಿ' ಎಲ್ಲಿ? ಎಂದು ಕೇಳಲವನು ಅದು ಇಲ್ಲಿಂದ ಮೂರು ಮೈಲು ದೂರದಲ್ಲಿದೆ ಎಂದನು. ಇನ್ನು ಶವವನ್ನು ನೋಡಲು ಪೋಲೀಸ್ ಸ್ಟೇಷನಿಗೆ ಹೋಗುವ ಎಂದು ಕರಮಚಂದನು ಹೇಳಲು ಡಾಕ್ಟರನು ಪೋಲೀಸ್ ಇನ್‌ಸ್ಪೆಕ್ಟರ್ ಈಗ ಬರಲಿಕ್ಕಿರುವರು ಅನಂತರ ಅವನೊಡನೆ ಠಾಣೆಗೆ ಹೋಗುವ ಎಂದನು ಅವನು ಡಾಕ್ಟರನೊಡನೆ ನಿಮಗಿಲ್ಲಿ ಯಾರಾದರೂ ಗುಪ್ತ ಶತ್ರುಗಳಿರುವರೊ? ಎಂದು ಕೇಳಲವನು ಬಹುಶಃ ನನಗೆ ಶತ್ರುಗಳೇ ಇಲ್ಲವೆಂದನು. ಸ್ವಲ್ಪ ಸಮಯದಲ್ಲಿ ಪೋಲೀಸ್ ಡ್ರೆಸ್‌ನಲ್ಲಿ ಓರ್ವ ವ್ಯಕ್ತಿಯು ಬರಲು, ರಮೇಶನು ಇನ್‌ಸ್ಪೆಕ್ಟರರೇ ಬನ್ನಿರಿ ಎಂದನು. ಆಗ ಪತ್ತೆದಾರಿಯು ಬರುತ್ತಿರುವವನೇ ಪೋಲೀಸ್ ಇನ್‌ಸ್ಪೆಕ್ಟರ್ ಎಂದು ತರ್ಕಿಸಿದನು. ಡಾಕ್ಟರನು ಇನ್‌ಸ್ಪೆಕ್ಟರನನ್ನು ಪತ್ತೆದಾರಿಗೂ ಇವನನ್ನು

ಇನ್‌ಸ್ಪೆಕ್ಟರಿಗೂ ಪರಸ್ಪರ ಪರಿಚಯು ಮಾಡಿಸಿದನು. ಅನಂತರ ಇನ್‌ಸ್ಪೆಕ್ಟರನು ಠಾಣೆಗೆ ಹೋಗುವ ಎಂದು ಕರಮಚಂದನೊಡನೆ ಎನ್ನಲವನು ರಮೇಶನೊಡನೆ ಬೇಗನೆ ಹೋಗುವ ಎಂದನು ಡಾಕ್ಟರನಾಗ ನನ್ನಿಂದ ಅಲ್ಲಿನ ದೃಶ್ಯಗಳನ್ನು ನೋಡಲು ಸಾಧ್ಯವಿಲ್ಲವೆನ್ನಲು ಪತ್ತೆದಾರಿಯು ಅವನು ಬೆದರಿಕೊಳ್ಳುತ್ತಿರುವನೆಂದು ತಿಳಿದು ನಸುನಕ್ಕು ಹಾಗಾದರೆ ನೀವಿಲ್ಲಿಯೇ ಕುಳಿತುಕೊಳ್ಳಿರಿ. ನಾವು ಬೇಗನೆ ಬರುತ್ತೇವೆಯೆನ್ನಲು ಡಾಕ್ಟರ್‌ನು ಡ್ರೈವರನ್ನು ಕರೆದನು. ಪತ್ತೆದಾರಿ ಮತ್ತು ಇನ್‌ಸ್ಪೆಕ್ಟರ್ ಕಾರಿನಲ್ಲಿ ಕುಳಿತ ಕೂಡಲೇ ಕಾರುಹೊರಟಿತು. ದಾರಿಯಲ್ಲಿ ಇನ್‌ಸ್ಪೆಕ್ಟರನು ಮೃತಳ ಶರೀರದಲ್ಲಿ ಗಾಯಗಳೇನೂ ಇಲ್ಲವೆಂದೂ ಮುಖವು ಅಕ್ರಾಳ ವಿಕ್ರಾಳವಾಗಿದೆಯೆಂದೂ ಹೇಳಿದನು ಕರಮಚಂದನು ಅವನೊಡನೆ ನೀವು ಚೆನ್ನಾಗಿ ಶವವನ್ನು ಪರೀಕ್ಷಿಸಿದ್ದೀರಾ ? ಎಂದು ಕೇಳಲು ಅವನು ಹೌದೆಂದನು. ಅನಂತರವನು ಅವನೊಡನೆ ಡಾ| ರಮೇಶನ ವಿಷಯ ಕೇಳಲು ಇನ್‌ಸ್ಪೆಕ್ಟರನು ಡಾ| ರಮೇಶನು ಸಾತ್ವಿಕನೂ ದೂರದೃಷ್ಟಿಯುವನೂ ಅಲ್ಲದೆ ಪರೋಪಕಾರಿ ಮತ್ತು ಇಲ್ಲಿನ ಹೆಸರಾಂತ ಡಾಕ್ಟರ್ ಆಗಿ ಖ್ಯಾತಿ ಪಡೆದವನೆಂದನು ಅಲ್ಲದೆ ಅವನಿಗೆ ಎಲ್ಲರೂ ಮಿತ್ರರಲ್ಲದೆ ವೈರಿಗಳಾರೂ ಇಲ್ಲವೆಂದನು. ಅಷ್ಟರಲ್ಲಿ ಕಾರು ಒಂದು ಸಣ್ಣ ಕಟ್ಟಡದ ಎದುರು ಬಂದು ನಿಂತಿತು. ಕರಮಚಂದನು ಯಾಮಿಕ ಠಾಣೆಯೆಲ್ಲಿ? ಎಂದು ಕೇಳಲು ಯಾಮಿಕರೊಡೆಯನು ಠಾಣೆಯು ಇಲ್ಲಿಂದ ಒಂದು ಮೈಲು ಅಂತರದಲ್ಲಿದೆ. ಇಲ್ಲಿ ಡಾ| ರಮೇಶನ ಪತ್ನಿಯ ಶವವನ್ನು ಪೆಟ್ಟಿಗೆಯುಲ್ಲಿಟ್ಟು ಭದ್ರವಾಗಿರಿಸಲ್ಪಟ್ಟಿದೆ. ನಾವಲ್ಲಿಗೆ ಹೋಗಿ ಮೃತ ಶರೀರವನ್ನು ಪರೀಕ್ಷಿಸುವ ಎಂದನು. ಅನಂತರ ಅವರಿಬ್ಬರೂ ಕಾರಿನಿಂದಿಳಿದು ಆ ಕಟ್ಟಡದ ಸಮೀಪಕ್ಕೆ ಕಾಲ್ನಡೆಯಿಂದ ಹೋದರು ಆ ಕಟ್ಟಡವು ಬಹಳ ಚಿಕ್ಕದಾಗಿತ್ತು. ಅದಕ್ಕೊಂದು ಬಾಗಿಲಲ್ಲದೆ ಕಿಟಕಿಯೂ ಇದ್ದಿತು. ಬಾಗಿಲಿಗೆ ಬಲವಾದ ಬೀಗ ಹಾಕಲ್ಪಟ್ಟಿದ್ದಿತು. ಇನ್‌ಸ್ಪೆಕ್ಟರನು ಜಗಲಿಯಲ್ಲಿ ಅಚೀಚೆ ಶತಪಥ ಹಾಕುತ್ತಾ ತಿರುಗಾಡಲಾರಂಭಿಸಿದನು. ಕರಮಚಂದನಾಗ ಇನ್‌ಸ್ಪೆಕ್ಟರೇ, ಬಾಗಿಲು ತೆರೆಯಿರೆನ್ನಲು ಅವನು ತನ್ನ ಕೋಟಿನ ಕಿಸೆಗೆ ಕೈ ಹಾಕಿ ಬೀಗದ ಕೀಯನ್ನರಸಲಾರಂಭಿಸಿದನು. ಆದರಲ್ಲಿ ಕೀಯಿಲ್ಲದುದರಿಂದ ಶರ್ಟಿನ ಕಿಸೆಯಲ್ಲಿ ಹುಡುಕಿದನಾದರೂ ನಿರರ್ಥಕವಾಯಿತಲ್ಲದೆ ಕೀ

ಸಿಗಲಿಲ್ಲ. ಕರಮುಚಂದನು ಕೀ ಮರೆತು ಹೋಯಿತೆ? ಎಂದು ಪ್ರಶ್ನಿಸಲು, ಹಾ! ಹೌದು. ನಾನು ಕೀಯನ್ನು ಒಬ್ಬ ಯಾಮಿಕನೊಡನೆ ಕೊಟ್ಟಿರುವೆನಲ್ಲದೆ ಬೇಗನೆ ಇಲ್ಲಿಗೆ ಬರಬೇಕೆಂದು ಹೇಳಿರುವೆನು. ಅವನು ಬೇಗನೆ ಬರಬಹುದಾದ್ದರಿಂದ ನಾವಿಲ್ಲಿಯೇ ಕುಳಿತುಕೊಳ್ಳುವ ಎಂದನು. ಆದರೆ ಅಲ್ಲಿ ಆಸನವಿರದ್ದರಿಂದವರಿಬ್ಬರೂ ಶತಪಥ ಹಾಕುತ್ತಾ ತಿರುಗಾಡುತ್ತಿರಲು ಕರಮುಚಂದನು ಇನ್‌ಸ್ಪೆಕ್ಟರನೊಡನೆ ನಾವು ರೆಸ್ಟೋರೆಂಟಿಗೆ ಹೋಗಿ ಕಾಫಿ ಕುಡಿದು ಬರುವ ಎಂದನು. ಆಗ ಯಾಮಿಕರೊಡೆಯನು ನಾನೀಗ ಕುಡಿಯುವುದಿಲ್ಲ ನೀವು ಬೇಗನೆ ಕಾಫಿ ಕುಡಿದು ಬನ್ನಿರೆಂದನು ಪತ್ತೆದಾರಿಯಾಗ ಏನು? ನಿಮಗೆ ಕುಡಿಯುವ ಅಭ್ಯಾಸವಿದೆಯೇ? ಎಂದು ನಗೆದಾಡಲು ಅವನು ನೀವು ಅಪಾರ್ಥ ಮಾಡಬೇಡಿರಿ; ಕಾಫಿ ಕುಡಿಯಲಿಕ್ಕೆ ನಾನೀಗ ಬರುವುದಿಲ್ಲ ನೀವು ಹೋಗಿ ಬೇಗನೆ ಬನ್ನಿರಿ, ಎಂದೇ ನಾನು ಹೇಳಿದುದು ಎಂದನು ಕರಮುಚಂದನು ಒತ್ತಾಯ ಮಾಡಲು ಮನಸ್ಸಿಲ್ಲದ ಮನಸ್ಸಿನಿಂದ ಇನ್‌ಸ್ಪೆಕ್ಟರನೂ ಅವನೊಡನೆ ಕ್ಲಬ್‌ಗೆ ಹೋದ.

ಪಾಠಕರೆ! ಪತ್ತೆದಾರಿ ಕರಮುಚಂದನೂ ಪೋಲೀಸ್ ಇನ್‌ಸ್ಪೆಕ್ಟರನೂ ಕಾಫಿ ಕುಡಿಯುವ ರೆಸ್ಟೋರಂಟಿಗೆ ಹೋದರಷ್ಟೆ! ಆದರೆ ನಾವಿಲ್ಲಿಯೇ ಉಳಿದು ಹೋದೆವಲ್ಲ! ಆಗಲಿ ನಮಗೀಗ ಇನ್‌ಸ್ಪೆಕ್ಟರನ ಮಾಯಾ ಜಾಲವನ್ನು ಹರಿದೊಗೆಯಲು ಸಾಧ್ಯವಾದೀತೆ? ಎಂದಿಗೂ ಇಲ್ಲ. ಇನ್‌ಸ್ಪೆಕ್ಟರ್ ವೇಷಧಾರಿಯಾಗಿ ಬಂದವನೇ ವಂಚಕನಾದ ಲೋಬೋನೆಂದು ಪಾಠಕರಿಗೆ ಬೇರೆ ಹೇಳಬೇಕಾಗಿಲ್ಲ. ಅವನೀಗ ಪತ್ತೆದಾರಿಗೆ ತೋರಿಸಿದ ಕಟ್ಟಡವು ಜನವಾಸವಿಲ್ಲದಿದ್ದುದನ್ನು ನಿನ್ನಿನ ದಿನ ಬಾಡಿಗೆಗೆ ಪಡೆಕೊಂಡದ್ದಾಗಿದ್ದಿತು. ಅದರೊಳಗೆ ಮೃತ ದೇಹವೂ ಇಲ್ಲ, ಏನೂ ಇಲ್ಲ ರಮೇಶನ ಹೆಂಡತಿ ಸತ್ತರಲ್ಲವೆ ಅವಳ ಶವವಿರುವುದು? ಆದರೆ ರಮೇಶನಾರು? ಅವಿವಾಹಿತನಾದ ಪಿಟ್ಟನಲ್ಲವೆ? ಪತ್ತೆದಾರಿಯನ್ನು ವಂಚಿಸಿ ಅವನನ್ನು ವಿಪತ್ತಿಗೀಡು ಮಾಡಬೇಕೆಂದು ಆ ದುಸ್ಟರು ಹೂಡಿದ ಮಾಯದ ಬಯಲೇ ಇದೆಂದರೆ ತಪ್ಪಾಗಲಾರದು. ಇನ್‌ಸ್ಪೆಕ್ಟರ್ ವೇಷಧಾರಿ ಲೋಬೋನು ಬೇಕೆಂತಲೇ ಕೀಯನ್ನು ತರಲಿಲ್ಲ. ಓಹೊ! ಆದಾರು ಅಲ್ಲಿ ಬರುತ್ತಿರುವವರು? ಇಬ್ಬರು ಕೈ ಕೈ ಹಿಡಿದುಕೊಂಡು ಬರುತ್ತಿದ್ದಾರಲ್ಲ? ಈರ್ವರೂ ತೇಜಸ್ವಿಗಳು; ಒಬ್ಬನಂತೂ ಬಹಳ

ಪ್ರಭೆಯಿಂದ ಕಂಗೊಳಿಸುತ್ತಾನೆ. ಅವನೇ ಕರಮುಚಂದನು. ಎರಡನೆ ಯುವನು ತೇಜಸ್ವಿಯಾಗಿದ್ದರೂ ಅವನ ಕಪಟ ವರ್ತನೆಯಿಂದಲಾಗಿ ಮುಖವು ಮಲಿನವಾಗಿದೆ. ಲೋಬೋನೇ ವೇಷಾಂತರದಿಂದ ಬರುತಿದ್ದಾನಲ್ಲ! ನಾನು ಬೇಗ ಹೋಗಿ ಪತ್ತೇದಾರಿಯೊಡನೆ ಇನ್‌ಸ್ಪೆಕ್ಟರನು ಛದ್ಮವೇಷ ಧಾರಿಯಾದ ಲೋಬೋನೆಂದು ಹೇಳಿ ಬಿಡಲೇ? ಆದರೆ ಹೇಳುವ ಬಗೆ ಯೆಂತು? ಅವನೊಡನೆ ಆ ದುಷ್ಟನು ನಿಂತುಕೊಂಡಿದ್ದಾನಷ್ಟೆ ಆಗ? ಈಶ ಸಂಕಲ್ಪದಿಂದ ಕರಮುಚಂದನೇನೂ ಸಾಮಾನ್ಯನಲ್ಲ. ಬುದ್ಧಿವಂತಿಕೆ, ಚಮತ್ಕಾರ, ಅದ್ಭುತ ಯುಕ್ತಿಯೇ ಮೂರ್ತಿಮತ್ತಾಗಿ ಬಂದಂತೆ ಅವನ ನಡತೆಯನ್ನು ಕಂಡರೆ ಆರಿಗೂ ವಿದಿತವಾಗಬಹುದು. ಊದಿದ ತಂಗಾಳಿ ಯಲ್ಲಿ ಹಾರುವ ಪ್ರಾತಃ ಕಾಲದ ಬೆಳಕಿನಂತೆ ಮೊದಲು ಅತಿ ಉಗ್ರವಾಗಿ ದ್ದರೂ ಕಡೆಗೆ ಸಣ್ಣದಾಗಿ ಕ್ಷೀಣವಾಗುವಂತೆ ಇರುವ ಈ ಲೋಬೋನು ಕರ ಮುಚಂದನಿಗೆಣೆಯೇ? ಛೆ! ಎಂದಿಗೂ ಅಲ್ಲ.

ಪತ್ತೆದಾರಿ ಮತ್ತು ಯಾಮಿಕರೊಡೆಯು ಇವರಿಬ್ಬರೂ ಪುನಃ ಆ ಕಟ್ಟ ಡದ ಸಮೀಪಕ್ಕೆ ಬಂದರು ಗಂಟೆ ಹನ್ನೆರಡಾದರೂ ಬೀಗ ತೆಗೆಯಲು ಯಾಮಿಕನು ಬಾರದಿರಲು ಅವನು ಪತ್ತೆದಾರಿಯೊಡನೆ ಮಹಾಶಯರೆ, ನನ್ನಿಂದಾದ ಅಪರಾಧವನ್ನು ಸಹನಶೀಲರಾದ ತಾವು ಕ್ಷಮಿಸಬೇಕು. ಮಹಾನುಭಾವರಾದ ತಮ್ಮನ್ನು ಇಲ್ಲಿಗೆ ಕರೆಕೊಂಡು ಬಂದು ಸುಮಾರು ಸಮಯ ನಿಲ್ಲಿಸಿ ತಮ್ಮ ಅಪೂರ್ವ ಸಮಯವನ್ನು ಹಾಳು ಮಾಡಿದುದ ಕ್ಕಾಗಿ ಕ್ಷಮಿಸೋಣಾಗಲಿ, ಎಂದು ಹೇಳಿ ಕಳವಳಗೊಂಡನು. ಕರಮ್ಮ ಚಂದನು ಇನ್‌ಸ್ಪೆಕ್ಟರರೇ, ನೀವೇನೂ ಕಳಕಳಿಸುವುದು ಬೇಡ. ತುಬು ಮಾಡಲು ಹೊರಡಬೇಕಾದರೆ ಬಂದ ಕಷ್ಟಗಳನ್ನೆಲ್ಲ ಅನುಭವಿಸಲ್ಕೆ ತಯಾರಾಗಿರಬೇಕಾಗುತ್ತದೆ ಅದಲ್ಲದೆ ಇದೀಗ ಕಷ್ಟವೆಂದು ಹೇಳ ಲಿಕ್ಕಾಗುವುದಿಲ್ಲ ಕಾರಣಾಂತರದಿಂದ ನಿಮ್ಮ ಹತ್ತಿರದಿಂದ ಕೀ ತೆಗೆದುಕೊಂಡ ಯಾಮಿಕನಿಗೆ ಇಲ್ಲಿಗೆ ಬರಲು ತೊಂದರೆಯುಂಟಾಗಿರ ಬಹುದು. ನಾವೀಗ ಹೋಗುವುದು. ಮಧ್ಯಾಹ್ನನಂತರ ಕೀ ಸಮೇತ ಬಂದು ಶವಪರೀಕ್ಷೆ ಮಾಡಿದರಾಗದೆ? ಎನ್ನಲು ಇನ್‌ಸ್ಪೆಕ್ಟರನು ಸಂತೋಷದಿಂದೊಪ್ಪಿದನು. ಅನಂತರ ಮೊದಲು ಬಂದ ಕಾರಿನಲ್ಲಿಯೇ ಅವರು ಡಾ| ರಮೇಶನ ಮನೆಗೆ ತೆರಳಿದರು. ಡಾಕ್ಟರನು ಕಂಪೌಂಡಿನ

ಗೇಟಿನ ಬಳಿಯಲ್ಲಿಯೇ ನಿಂತುಕೊಂಡಿದ್ದನು. ಆವನು ಪತ್ತೇದಾರಿಯೊಡನೆ ನೀವು ಠಾಣೆಗೆ ಹೋಗಿ ಬಂದಿರಾ ? ಎಂದು ಕೇಳಲು ಇನ್‌ಸ್ಪೆಕ್ಟರನು ನಾವಲ್ಲಿಗೆ ಹೋಗಿದ್ದೆವು ಆದರೆ ನನ್ನ ಕೈಯಲ್ಲಿ ಬೀಗದ ಕೀಯಿರಲಿಲ್ಲ. ನಾನದನ್ನು ಪೋಲೀಸ್‌ನೊಡನೆ ಕೊಟ್ಟಿದ್ದೆನಾದರೂ ಅವನಲ್ಲಿಗೆ ಬರಲೇ ಇಲ್ಲವೆಂದು ಹೇಳಿ ಬೇಗನೆ ಮುಗಿಸಿದನು. ಹಾಗಾದರೆ ಪತ್ತೆದಾರಿಗಳು ಮೃತ ದೇಹವನ್ನು ಪರೀಕ್ಷಿಸಿ ನೋಡುವುದಾವಾಗ ? ಎಂದವನು ಕೇಳಲು ಕರಮುಚಂದನು ಮಧ್ಯಾಹ್ನನಂತರವೆಂದನು. ಮಧ್ಯಾಹ್ನ ಊಟವಾದ ನಂತರ ಪತ್ತೇದಾರಿಯನ್ನು ಡಾ| ರಮೇಶನು ಮಾಳಿಗೆಗೆ ಕರೆಕೊಂಡು ಹೋದನು. ಅಲ್ಲಿ ಅನೇಕ ಚಿತ್ರಪಠಗಳೂ ಕಸೂತಿ ಕೆಲಸ ಮಾಡಿದ ವಸ್ತುಗಳೂ ಬಹಳ ಪರಿಷ್ಕಾರವಾಗಿ ಅಲಂಕರಿಸಲ್ಪಟ್ಟಿದ್ದವು. ಅನೇಕ ಇಂಗ್ಲಿಷ್ ಸಂಸ್ಕೃತ ಹಿಂದೀ ಕನ್ನಡ ಮೊದಲಾದ ಭಾಷೆಗಳಲ್ಲಿ ಬರೆಯಲ್ಪಟ್ಟ ಉದ್ಗ್ರಂಥಗಳೂ ಕಥೆ ಕಾದಂಬರೀ ಪುಸ್ತಕಗಳು ಇದ್ದವು ಕರಮುಚಂದನೊಡನೆ ಅವನು ಮಂಗಳೂರಿನ ವಿಷಯ ಕೇಳಲು ಅವನು ಯುಕ್ತವಾದ ಕೆಲವು ಸಂಗತಿಗಳನ್ನು ಚುಟುಕಿನಲ್ಲಿ ಹೇಳಿ ಮುಗಿಸಿದನು. ರಮೇಶನ ನಡತೆಯನ್ನು ಕಂಡು ಅವನು ಈ ಡಾಕ್ಟರನು ಅಲಂಕಾರ ಪ್ರಿಯನೂ ಸಜ್ಜನನೂ ಅಲ್ಲದೆ ವಾಕ್‌ಚಾತುರ್ಯವುಳ್ಳ ವಾಗ್ಮಿಯೆಂದೂ ತಿಳಕೊಂಡನು. ಅವನು ಪತ್ನಿಯ ವಿಷಯ ನೆನಪಾದೊಡನೆ ಸಣ್ಣ ಮಕ್ಕಳಂತೆ ಅಳುತ್ತಿರುವುದನ್ನು ಕಂಡು ಅವನ ಹೃದಯ ಬಹಳ ಕೋಮಲವಾಗಿದೆಯೆಂದು ತರ್ಕಿಸಿದನು ರಮೇಶನು ಪತ್ತೇದಾರಿಯನ್ನೊಂದು ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೇಳಿ ತಾನೊಂದರಲ್ಲಿ ಕುಳಿತನು. ಕರಮುಚಂದನು ಅದಾವುದೋ ಒಂದು ಸಂಸ್ಕೃತ ನಾಟಕವನ್ನು ಓದುತ್ತಿರಲು ರಮೇಶನು ಹೆಲ್ತ್ ಪತ್ರಿಕೆಯನ್ನೋದುತ್ತಿದ್ದನು. ಸಾಧಾರಣ ಮೂರು ಗಂಟೆಗೆ ಅಡಿಗೆಯವನು ಕೆಲವು ಸೇಬು ಹಣ್ಣುಗಳನ್ನೂ ಬಿಸ್ಕೋಟ್ ಮತ್ತು ಇನ್ನಿತರ ಸಿಹಿ ತಿಂಡಿಗಳನ್ನೂ ಮತ್ತು ಹಾಲನ್ನೂ ತಂದು ಟೇಬಲ್‌ನಲ್ಲಿಟ್ಟು ಹೋದನು. ರಮೇಶನು ಪತ್ತೇದಾರಿಗೆ ಅವುಗಳನ್ನು ಕೊಟ್ಟು ತಾನೂ ಸ್ವೀಕರಿಸುತ್ತಿದ್ದನು. ಅಷ್ಟರಲ್ಲಿ ಮಾಳಿಗೆಯ ಮೆಟ್ಟಲುಗಳನ್ನೇರಿ ಆರೋ ಬರುತ್ತಿರಲು ಡಬ ಡಬ ಶಬ್ದವಾಗಲೂ ಇನ್‌ಸ್ಪೆಕ್ಟರನು ಬಂದನು. ಡಾಕ್ಟರನವನನ್ನು ಆ ದರದಿಂದ ಬರಮಾಡಿ ಕುಳಿತು ಕೊಳ್ಳಲು ಹೇಳಿ ಇಲೆಕ್ಟ್ರಿಕ್

ಜೆಲ್ ಒತ್ತಲು ಅಡಿಗೆಯವನು ಬರಲು ಅವನೊಡನೆ ಏನನ್ನೋ ಮೆಲ್ಲನೆ ಹೇಳಿದನು ಕೂಡಲೇ ಅವನು ಮೊದಲು ತಂದ ವಸ್ತುಗಳನ್ನೆಲ್ಲ ಪುನಃ ಇನ್‌ಸ್ಪೆಕ್ಟರನೆದುರಿಗಿಟ್ಟನು ರಮೇಶನು ಅವನೊಡನೆ ಸ್ವೀಕರಿಸಿರಿ. ಎನ್ನಲು ಅವನು ಹಸನ್ಮುಖಿಯಾಗಿ ಚಕ ಚಕನೆ ತಿಂಡಿ ತಿಂದು ಹಾಲು ಕುಡಿದನು. ಸ್ವಲ್ಪ ಹೊತ್ತಿನಲ್ಲಿ ಅವರೆಲ್ಲರೂ ಅಲ್ಲಿಂದ ಕೆಳಗಿಳಿದು ಬಂದರು. ಪತ್ತೇದಾರಿಯು ಯಜಮಾನರೊಡೆಯನೊಡನೆ ನಾವು ಠಾಣೆಗೆ ಹೋಗುವ, ಎನ್ನಲು ಅವನು ಮಹನೀಯರೆ! ನನಗೆ ತಲೆ ನೋಯುತ್ತಿದೆ. ನಾಳೆ ಠಾಣೆಗೆ ಹೋಗಿ ಶವಪರೀಕ್ಷೆ ಮಾಡುವ ಎಂದನು; ಆದರೆ ಅವನೀಗೀಗ ನಿಜವಾಗಿಯೂ ತಲೆ ನೋಯುತ್ತಿದ್ದಿಲ್ಲವೆಂದು ಕರಮಚಂದನಿಗೆ ಗೊತ್ತಾದರೂ ಅವನು ಏನು ಹೇಳಲೂ ತೋಚದವನಾಗಿ ಸುಮ್ಮನಾದನು ರಮೇಶನಾಗ ಇನ್‌ಸ್ಪೆಕ್ಟರೆ! ಒಸ್ಸಿರಿ. ನಾನು ಪರೀಕ್ಷೆ ಮಾಡಿ ನಿಮಗೆ ಔಷಧ ಕೊಡುತ್ತೇನೆಂದು ಹೇಳಿ ಅವನನ್ನು ಮಹಾಳಿಗೆಗೆ ಕರೆಕೊಂಡು ಹೋದನು.

ಡಾ|| ರಮೇಶನೊಡನೆ ಇನ್‌ಸ್ಪೆಕ್ಟರನು ಮಾಳಿಗೆಗೆ ಹೋದನಷ್ಟೆ? ಪತ್ತೆದಾರಿಗೇಕೋ ಇನ್‌ಸ್ಪೆಕ್ಟರನ ಮೇಲೆ ಸಂಶಯ ಹುಟ್ಟಿತು. ಬಹುಶಃ ಡಾಕ್ಟರ್‌ನ ಪತ್ನಿಯ ಕೊಲೆಯಲ್ಲಿ ಇವನೇನಾದರೂ ಸಂಬಂಧಿಸಿರಬಹುದೆ? ಎಂದವನು ಸಂದೇಹಪಟ್ಟನು ಫಕ್ಕನೆ ಅವನಿಗೇನು ಹೊಳೆಯಿತೋ ಏನೋ, ಡಾಕ್ಟರನ ಪತ್ನಿ ಕೊಲೆಯಾಗಿದ್ದಾಳೆಯೆ? ಎಂದು ಮನಸ್ಸಿನಲ್ಲಿ ಸಂದೇಹಪಟ್ಟನು ರಮೇಶನ ಮುಖಚರ್ಯೆಯನ್ನು ನೋಡುವಾಗ ಕಾನ್ಸ್ಟೆಯೋ ಅವನನ್ನೀ ಮೊದಲು ಕಂಡಂತೆ ಅವನಿಗೆ ಭಾಸವಾಯಿತು. ಅವನು ತನ್ನ ನಿಜವಾದ ಸ್ವರವನ್ನು ಬುದ್ಧಿಪೂರ್ವಕವಾಗಿ ಮರೆಯಿಸಿ ಕೃತಕ ಸ್ವರದಿಂದ ಮಾತನಾಡುತ್ತಿರುವನೆಂದವನು ತಿಳಿದನು; ಅಲ್ಲದೆ ಇನ್‌ಸ್ಪೆಕ್ಟರನು ಬೇಗ್ಗ ಠಾಣೆಗೆ ಕರೆದುಕೊಂಡು ಹೋದುದು ಬೀಗದ ಕೀಲಿ ಮರೆತೋ ಅಥವಾ ಯಾವ ಕಾರಣದಿಂದಲೋ ತಾರದೆ ಇದ್ದುದೋ? ಆನಂತರ ಮಧ್ಯಾಹ್ನ ನಂತರ ಅಲ್ಲಿಗೆ ಹೋಗುವ ಎಂದು ಹೇಳಿದ್ದರೂ ಈಗ ಸುಮ್ಮನೆ ತಲೆನೋವೆಂಬ ವ್ಯಾಜದಿಂದ ತಪ್ಪಿಸುತ್ತಿರುವುದರ ಅರ್ಥವೇನು? ಎಂದವನ ವಿಚಾರವಾಹಿನಿಯು ಬಹಳ ರಭಸವಾಗಿ ಹರಿಯುತ್ತಿರಲು ರಮೇಶನೂ ಇನ್‌ಸ್ಪೆಕ್ಟರನೂ ಅಲ್ಲಿಗೆ ಬಂದರು; ಆದರೆ ಕರಮಚಂದನು

ವಿಚಾರಸಾಗರದಲ್ಲಿ ಪ್ರಯಾಣ ಮಾಡುತ್ತಿದ್ದುದರಿಂದ ಅವರು ಬಂದು ದವನಿಗೆ ತಿಳಿಯದಿದ್ದರೂ ರಮೇಶನಿಗೆ ಅವನನ್ನು ಕಂಡು ಆಶ್ಚರ್ಯವಾಯಿತು ಕರಮಚಂದನು ಬಹಳ ಗಂಭೀರನಾಗಿ ಏನನ್ನೋ ಆಲೋಚಿಸುತ್ತಿರುವನೆಂದು ಅರಿತು ಅವನು ಎದೆಗುಂದಿದರೂ ಅದನ್ನು ಹೊರಗೆ ತೋರಗೊಡದೆ ಪತ್ತೆದಾರಿಗಳೆ! ಇನ್‌ಸ್ಪೆಕ್ಟರರಿಗೆ "ಇನ್‌ಫ್ಲೂಂಜಿಯಾ" ಪ್ರಾರಂಭವಾಗಿದೆ. ಅವರೀಗ ಆಚೀಚೆ ಅಲೆಯುತ್ತಿರುವುದು ಅಪಾಯಕರವಾದುದರಿಂದ ಮನೆಗೆ ಹೋಗಲಿ. ನಾವು ನಾಳೆ ಶವ ಪರೀಕ್ಷಿಸುವ ಎಂದನು. ಕರಮಚಂದನಿಗೆ ಡಾಕ್ಟರನೂ ಇನ್‌ಸ್ಪೆಕ್ಟರನೂ ಬಂದರೆಂದು ರಮೇಶನ ಮಾತಿನಿಂದ ತಿಳಿಯಲು ಅವನು ಗಂಭೀರನಾಗಿ ನಾನು ಯಾರೊಡನೆ ನಾಳೆ ಠಾಣೆಗೆ ಹೋಗುವುದೆನ್ನಲು, ಇನ್‌ಸ್ಪೆಕ್ಟರನು ನಾನೊಬ್ಬ ಯಾಮಿಕನ ಹತ್ತಿರ ಬೇಗದ ಕೈಕೊಟ್ಟು ಕಳುಹಿಸುವೆನೆಂದು ಹೇಳಿದನು. ಕರಮಚಂದನು ಅಸಮಾಧಾನಗೊಂಡರೂ ಹೂಂ, ಆಗಲಿ ಎಂದು ಅರೆ ಮನಸ್ಸಿನಿಂದ ಹೇಳಿದನು. ಯಾಮಿಕರೊಡೆಯನು ಅವರಿಬ್ಬರಿಗೂ ನಮಸ್ಕರಿಸಿ ಹೊರಟು ಹೋದನು. ಅನಂತರ ಕರಮಚಂದನು ತುಟಿ ಬಿಚ್ಚದೆ ಸುಮ್ಮನೆ ಕುರ್ಚಿಯಲ್ಲಿ ಕುಳಿತು ಸಿಗರೇಟ್ ಸೇದಲಾರಂಭಿಸಿದನು. ರಮೇಶನಿಗೆ ಪತ್ತೆದಾರಿಯ ಆ ಅವಸ್ಥೆಯನ್ನು ಕಂಡು ಭಯವುಂಟಾಯಿತು ತಮ್ಮ ಗುಪ್ತಕಾರಸ್ಥಾನವೆಲ್ಲಿಯಾದರೂ ಬಯಲಾದರೆ ಗತಿಯೇನು? ಎಂದು ಶಂಕಾಕುಲನಾದನು ಅವನು ತನ್ನ ಮನಸ್ಸಿನ ಕಳವಳವನ್ನು ಕಳೆಯಲು ಹೂದೋಟದಲ್ಲಿ ತಿರುಗಾಡಲಾರಂಭಿಸಿದನು. ಕರಮಚಂದನಿನ್ನೂ ವಿಚಾರ ಮಾಡುತ್ತಲೇ ಇದ್ದನು. ತಾನೀಗ ಮನೆಯಿಂದ ಹೊರಟು ನಾಲ್ಕು ದಿವಸಗಳಾದುವು. ದುಷ್ಟನಾದ ಲೋಬೋನು ಏನೆಲ್ಲ ಅನರ್ಥ ಮಾಡಿರುವನೋ ಏನೋ! ರಾಮದಾಸನೆಲ್ಲಿಯಾದರೂ ನೀಚರ ಮಾಯಾಪಾಶಕ್ಕೆ ಸಿಕ್ಕಿ ಎಲ್ಲಿ ಸಂಕಟಪಡುತಿದ್ದಾನೆಯೋ ಎಂದು ನಾನಾ ವಿಧವಾಗಿ ಚಿಂತಿಸುತಿದ್ದನು. ಅಷ್ಟರಲ್ಲಿ ಅಲ್ಲಿಗೊಬ್ಬ ವ್ಯಕ್ತಿಯು ಬಂದನು. ಅವನ ಬೂಟ್ಸಿನ ಟಪ್. ಟಪ್ ಶಬ್ದ ಕೇಳಿ ಕರಮಚಂದನು ಯಾರೋ ಬರುತ್ತಿರುವರೆಂದು ತಿಳಿದು ಆಚೆ ನೋಡಲು ಸುಂದರನಾದೊಬ್ಬ ಮನುಷ್ಯನು ಪೋರ್ಟಿಕೋದ ಮೆಟ್ಟಲುಗಳನ್ನೇರಿ ಸರಸರನೆ ಬರುತಿದ್ದನು. ಬಂದೊಡನೆ ಅವನು ಕರಮಚಂದನೊಡನೆ ಡಾ|| ರಮೇಶರಿರುವರೆ? ಎಂದು ಮೃದುವಾಗಿ ಪ್ರಶ್ನಿಸಲು ಆ ಪತ್ತೆ

ದಾರಿಯು ಇರುವರೆಂದನು. ಆಗ ಹೊರೋಟಿದಿಂದ ರಮೇಶನು ಬಂದು ಆಗಂತುಕ ವ್ಯಕ್ತಿಯನ್ನು ನಮಸ್ಕರಿಸಿ ಕುರ್ಚಿಯಲ್ಲಿ ಕುಳ್ಳಿರಿಸಿದನು. ರಮೇಶನು ಪತ್ರೆದಾರಿಯನ್ನು ಆ ಆಗಂತುಕ ಪುರುಷನಿಗೆ ಪರಿಚಯ ಮಾಡಿ ಕೊಟ್ಟನು ಅವನನ್ನು ಪತ್ತೆದಾರಿಗೂ ಪರಿಚಯ ಮಾಡಿಸಿದನು ಆಗಂತುಕನು ಹೆಸರಾಂತ ವಕೀಲನು. ಡಾಕ್ಟರ್‌ನ ಹತ್ತಿರ ಸ್ವಲ್ಪ ಸಮಯ ಮಾತ ನಾಡುತ್ತಾ ನಾವು ಈ ದಿನ ಸಮುದ್ರತೀರಕ್ಕೆ ಸ್ವಲ್ಪ ಸೌಂದರ್ಯವನ್ನು ನೋಡಲು ಹೋಗುವ, ಎಂದನು. ಆಗ ರಮೇಶನು ನಾನಲ್ಲಿಗೆ ಹೋಗದೆ ಸುಮಾರು ಸಮಯ ಕಳೆಯಿತು ಪತ್ತೆದಾರಿಗಳಿಗೂ ಆ ಸ್ಥಳವನ್ನು ತೋರಿಸಿದಂತಾಯಿತು ಎಂದು ಹೇಳುತ್ತಾ ಕರಮುಚಂದನೊಡನೆ ನೀವು ಕೂಡಾ ಬನ್ನಿರೆಂದನು. ಅನಂತರ ಆ ಮೂವರೂ ಸಮುದ್ರತೀರಕ್ಕೆ ಕಾಲ್ನಡಿಗೆಯಿಂದಲೇ ನಡೆದರು ಹೋಗುವಾಗ ರಾಧಾಕೃಷ್ಣ ವಕೀಲನು ಬಹಳ ರಮ್ಯವಾಗಿ ಕರಮುಚಂದನಿಗೆ ಸಮುದ್ರತೀರದ ಪ್ರಕೃತಿ ಸೌಂದರ್ಯವನ್ನು ವರ್ಣಿಸುತಿದ್ದನು. ಅರ್ಧಗಂಟೆಯಲ್ಲಿ ಅವರು ದಡಕ್ಕೆ ತಲಪಿದರು.

ಆ ಮೂವರೂ ಸಮುದ್ರ ತೀರಕ್ಕೆ ತಲಪುವಾಗ ಸಾಧಾರಣ ಸಾಯಂಕಾಲ ಐದು ಗಂಟೆಯಾಗಿರಬಹುದು ಅನೇಕ ಮರಗಳು ಎತ್ತರವಾಗಿ ನಿರ್ಭಯದಿಂದ ಕತ್ತೆತ್ತಿ ನಿಂತಿದ್ದುವು ಲತಾಬಳ್ಳಿಗಳು ತಳತಳಿಸಿ ಹಸಿರು ಕೆಂಪು ಬಣ್ಣದ ಚಿಗುರುಗಳಿಂದಲೂ ಅನೇಕ ಪರಿಮಳದ ಹೂಗಳಿಂದಲೂ ಲಕಲಕಿಸಿ ನಗುತಿದ್ದುವು. ಅನೇಕ ಪರಿಮಳ ಪುಷ್ಪಗಳ ಸುವಾಸನೆಯು ವಾಯುಮಂಡಲವನ್ನು ಸುಗಂಧವನ್ನಾಗಿ ಮಾಡಿದ್ದಿತು ಅಲ್ಲಲ್ಲಿ ದೊಡ್ಡದೊಡ್ಡ ಬಂಡೆಗಲ್ಲುಗಳು ಇದ್ದುವಲ್ಲದೆ ಕೆಲವೆಡೆಗಳಲ್ಲಿ ಏರುತಗ್ಗುಗಳೂ ಇದ್ದುವು ರಮೇಶನು ಆ ಸ್ಥಳವು ಬಹಳ ಉತ್ತಮವಾದುದೆಂದು ಹೇಳಿ ಪರಊರವರಿಲ್ಲಿಗೆ ಬಂದರೆ ಅವರಿಗೆ ಹಿಂದುರುಗಿ ಹೋಗುವ ಮನಸ್ಸೇ ಆಗುವದಿಲ್ಲವೆಂದು ಪತ್ತೆದಾರಿಯೊಡನೆ ಹೇಳುತ್ತಾ ಅಲ್ಲಿನ ಕೆಲವು ಮರಗಳ ವಿಷಯ ಹೇಳುತಿದ್ದನು. ಅಂದಚಂದದ ಬಗೆಬಗೆಯ ಸುಂದರ ಪಕ್ಷಿಗಳು ಮರದಿಂದ ಮರಕ್ಕೆ ಹಾರುತ್ತಾ ಕುಣಿಯುತ್ತಾ ಆಡುತಿದ್ದುವು ಮಳೆ ಮೋಡಗಳು ಗಗನದಲ್ಲಿ ಕವಿದಿದ್ದುವು ಆಗ ಪತ್ತೆದಾರಿಯು ರಾಧಾಕೃಷ್ಣನೊಡನೆ ಮಳೆ ಬರುವ ಲಕ್ಷಣ ಕಾಣುತ್ತಿವೆ. ಬೇಗನೆ ಹಿಂದಿರುಗುವಾ ಎಂದನು. ರಮೇಶನಾಗ ಇಲ್ಲಿ ನೋಡಬೇಕಾದ ಇನ್ನೂ ಅನೇಕ ಸ್ಥಳಗಳಿವೆಯೆಂದು

ಹೇಳಿ ಸಮುದ್ರದ ತೀರಾ ದಡಕ್ಕೆ ಬಂದನು. ಅಲ್ಲಿ ಸಮುದ್ರವು ಆಳವಾಗಿದ್ದು ದಡವು ಶಿಲೆಕಲ್ಲಿನಿಂದ ಕೂಡಿದ್ದಾಗಿ ಕಡಿದಾಗಿಯೂ ಎತ್ತರವಾಗಿಯೂ ಇತ್ತು. ಕರಮಚಂದನೂ, ರಮೇಶನೂ ದಡದಲ್ಲಿರುವ ಶಿಲೆಕಲ್ಲಿನಲ್ಲಿ ಕುಳಿತು ಸಮುದ್ರದ ಅಲೆಗಳ ಕಾಂತಿಯನ್ನವಲೋಕಿಸುತ್ತಿದ್ದರು. ಕರಮಚಂದನು ರಮೇಶನೊಡನೆ ಯಾವುದೋ ಒಂದು ಕನ್ನಡ ಗ್ರಂಥದ ವಿಷಯ ಚರ್ಚಿಸುತ್ತಿದ್ದನು. ಅವನು ಚರ್ಚೆಯ ವಿಷಯದಲ್ಲಿ ತಲ್ಲೀನನಾಗಿರಲು, ರಾಧಾಕೃಷ್ಣನು ಮೆಲ್ಲನೆ ಹಿಂದಿನಿಂದ ಬಂದು ಪತ್ತೇದಾರಿಯ ಕುತ್ತಿಗೆ ಹಿಡಿದು ದೂಡಲು ಅವನು ಆಳವಾದ ಸಮುದ್ರಕ್ಕೆ ಬಿದ್ದನು. ಅಕಸ್ಮಾತ್ತಾಗಿ ತಾನು ಸಮುದ್ರಕ್ಕೆ ಬೀಳಲು ಕಾರಣರಾರೆಂದು ಅವನಿಗೆ ತೋರದಾಯಿತು. ಬಿದ್ದ ಕೂಡಲೇ ನೀರಿನಲ್ಲಿ ಮುಳುಗಿ ಎದ್ದು ಕತ್ತೆತ್ತಿ ನೋಡಲು ರಾಧಾಕೃಷ್ಣನೂ ರಮೇಶನೂ ಗಹಗಹಿಸಿ ನಗುತ್ತಾ ಎಲೆ ಪತ್ತೇದಾರಿಯೆ! ನಾವಾರೆಂದು ನೀನು ತಿಳಿದಿದ್ದೀಯೆ? ಎಂದು ಏಕಕಾಲದಲ್ಲಿ ಇಬ್ಬರೂ ಕೇಳಲು, ಕರಮಚಂದನು ವಂಚಿಸುವ ಕ್ರೂರ ಹೃದಯದ ಪಿಶಾಚಿಗಳೆಂದು ಗರ್ಜಿಸಿದನು. ಅವರಾಗ ನಿಜವಾಗಿ ಪಿಶಾಚಿಗಳಂತೆ ನಗುತ್ತಾ ಲೋಬೋನೆಂದರೆ ಯಾರೆಂದು ಗೊತ್ತೋ? ಎಂದು ಕೇಳಲು ಕರಮಚಂದನಿಗೆ ರಾಧಾಕೃಷ್ಣನೆಂಬ ಕಪಟವೇಷದಿಂದ ಬಂದವನೇ ನೀಚನಾದ ಲೋಬೋ ಎಂದು ಗೊತ್ತಾಯಿತು. ಅಷ್ಟರಲ್ಲವನು ನಾಲ್ಕಾರು ಬಾರಿ ಮುಳುಗಿ ಎದ್ದಿದ್ದನು. ಅವನು ಈಜಲು ಪ್ರಾರಂಭಿಸಿದನಾದರೂ ಬಹಳ ದೂರದ ವರೆಗೆ ಕಡಿದಾದ ಎತ್ತರ ದಡವಿದ್ದುದರಿಂದ ದಡವನ್ನು ಹಿಡಿದು ಮೇಲೇರಲು ಸಾಧ್ಯವಿರಲಿಲ್ಲ. ಡಾ|| ರಮೇಶನೇ ಪಿಟ್ಟನೆಂದು ಪತ್ತೇದಾರಿಗೆ ನಿಶ್ಚಯವಾಯಿತು. ಬಹಳ ಕ್ರೂರಿಗಳಾದ ಅವರೀರ್ವರೂ ಕರಮಚಂದನೊಡನೆ ನೀನಿನ್ನು ಕಾಲನ ಪಟ್ಟಣಕ್ಕೆ ಹೋಗಿ ಅಲ್ಲಿ ಪತ್ತೇದಾರಿ ಕೆಲಸ ಮಾಡುತ್ತಿರು ನಾವಿನ್ನು ನಮ್ಮ ಕಾರ್ಯಕ್ಕೆ ತೆರಳುವೆವು ಎಂದು ಹೇಳಿ ಪಿಶಾಚಿಗಳಂತೆ ಹ....ಹ್ಹ ಹಾ ಎಂದು ನಗುತ್ತ ಅಲ್ಲಿಂದ ಹೊರಟರು. ಅವರ ಭೀಕರವಾದ ಅಸಹ್ಯವಾದ ಪೈಶಾಚಿಕ ನಗೆಯು ಕಾಡಿನಲ್ಲಿ ಪ್ರತಿಧ್ವನಿಸಿಗೊಂಡು ಭೀಕರವಾದ ಶಬ್ದವನ್ನುಂಟುಮಾಡಿತು.

ಕರಮಚಂದನು ಈಜಲು ಬಹಳ ಚತುರನಾದರೂ ಅತಿ ಉದ್ದವಾದ ಕಡಿದಾದ ದಡವನ್ನು ದಾಟಿ ತಗ್ಗಾದ ದಡದ ವರೆಗೆ ಸಮುದ್ರದ ಬದಿಯ

ಲ್ಲಿಯೇ ಹೋಗಲು ಅಸಮರ್ಥನಾದನು. ಕಟ್ಟ ಕಡೆಗೆ ಅವನ ತೋಳ ಬಲವೆಲ್ಲಾ ಕುಗ್ಗಲು ಅವನು ಸೋತು ಹೋಗಿ ನೀರಿನಲ್ಲಿ ಮುಳುಗಿದನು ಪುನಃ ಎದ್ದನು ಅತಿ ದೊಡ್ಡದಾದ ತೆರೆಯೊಂದು ಕಡಿದಾದ ಶಿಲೆಯ ದಡಕ್ಕೆ ಅವನನ್ನು ದೂಡಿ ಅಪ್ಪಳಿಸಿತು. ಆಗಲವನು ನಿಃಸತ್ವನಾಗಿ ಮುಳುಗಿ ಹೋದನು. ಪುನಃ ಎದ್ದನು ಎನ್ನುವಷ್ಟರಲ್ಲಿ ಮತ್ತೊಂದು ತೆರೆ ಬರಲು ಎಷ್ಟು ಕಷ್ಟಪಟ್ಟು ಈಸುತಿದ್ದರೂ ದಡವೇರಲು ಸಾಧ್ಯವಾಗಲಿಲ್ಲ. ತನ್ನ ಅವತಾರವಿಲ್ಲಿಗೆ ಮುಗಿಯಿತೆಂದವನು ತಿಳಿದನು. ಆದರೆ ತಾನಿನ್ನು ಸಾಯುವೆನಲ್ಲಾ ಎಂದವನು ಚಿಂತಿಸಲಿಲ್ಲ. ಲೋಬೋನು ಇನ್ನು ಮಂಗಳೂರಿಗೆ ಹೋಗಿ ರಾಮದಾಸನನ್ನೂ ಯಶವಂತನನ್ನೂ ಕಾಡಿಯಾನೆಂದವನು ಬೆಂದು ಬೇಗುದಿಗೊಂಡನು. ಹೇಗಾದರೂ ಸಮುದ್ರದಿಂದ ಈಸಿ ಮೇಲೆ ಬರಬಹುದೆಂಬ ಆಶೆ ಮೊದಲವನಿಗೆ ಇದ್ದರೂ ಈಗ ಆ ಆಶೆ ನಿರಾಶೆಯಾಯಿತು. ಉಪ್ಪು ನೀರು ಕುಡಿ ಕುಡಿದು ಸ್ಮೃತಿ ತಪ್ಪಿ ನೀರಿನಲ್ಲಿ ತೇಲತೊಡಗಿದನು.

● ○ ● ● ●

ವಾಚಕರೆ! ಈ ದಿನ ಆದಿತ್ಯವಾರವಾಗಿತ್ತು. ಆದ್ದರಿಂದ ಸಾಯಂಕಾಲ ಮೆಡಿಕಲ್ ಕಾಲೇಜಿನ ನಾಲ್ಕೈದು ಜನ ವಿದ್ಯಾರ್ಥಿಗಳು ವಿಹಾರಾರ್ಥವಾಗಿ ಸಮುದ್ರಕ್ಕೆ ಬಂದಿದ್ದರು. ಅವರಲ್ಲಿ ಕೆಲವರಿಗೆ ದೋಣಿ ನಡೆಸಲು ಗೊತ್ತಿದ್ದುದರಿಂದ ದೋಣಿಯವನಿಂದ ನೌಕೆಯನ್ನು ತೆಗೆದುಕೊಂಡು ಅವರೇ ನಡೆಸುತ್ತಾ ಸಮುದ್ರದಲ್ಲಿ ವಿಹರಿಸುತಿದ್ದರು. ತೆರೆಯ ಅಬ್ಬರಕ್ಕೆ ಕೆಲವು ಸಲ ನೌಕೆಯು ಕೆಳಮೇಲಾಗುತ್ತಿದ್ದರೂ ನಡೆಸುತಿದ್ದವರು ಬಹಳ ಜಾಣರಾಗಿದ್ದುದರಿಂದ ಅಪಾಯವೇನೂ ಉಂಟಾಗಲಿಲ್ಲ ಅವರು ಸುಮಾರು ಸಮಯವನ್ನು ಸಮುದ್ರದಲ್ಲಿ ಸಂತೋಷದಿಂದ ಕಳೆದರು. ಮೊದಲು ಆಕಾಶದಲ್ಲಿ ಮೋಡಗಳಿದ್ದರೂ ಬರಬರುತ್ತಾ ಗಾಳಿಯು ಮೋಡಗಳನ್ನೆಲ್ಲ ಹಾರಿಸಿಕೊಂಡು ಎತ್ತಲೋ ಹೋಗಿ ಆಕಾಶವು ಶುಭ್ರವಾಯಿತು. ದಿನಮಣಿಯು ಪಶ್ಚಿಮಾಂಗನೆಯ ಮನೆಯನ್ನು ಸೇರಲು ತವಕ ಪಡಲಾರಂಭಿಸಿದನು ಇನ್ನು ನೌಕೆಯನ್ನು ಹಿಂದೆ ತಿರುಗಿಸಿ ಹೋಗುವ, ಎಂದು ವಿದ್ಯಾರ್ಥಿಗಳಲ್ಲಿ ಕೆಲವರು ಹೇಳಿದರು ಅಷ್ಟರಲ್ಲಿ ಆ ವಿದ್ಯಾರ್ಥಿ ಸಂಗಡದ ನಾಯಕನಿಗೆ ದೂರದಲ್ಲಿ ಸಮುದ್ರದಲ್ಲೇನೋ ತೇಲುತ್ತಿರುವಂತೆ

ಕಂಡಿತು. ಅವನು ಸಂಗಡಿಗರೊಡನೆ ನನಗೆ ಸಮುದ್ರದಲ್ಲೇನೋ ತೇಲು ತ್ತಿರುವಂತೆ ಕಾಣುತ್ತದೆ. ಅದೇನೆಂದು ನೋಡುವಾ ಎಂದು ಹೇಳಿ ದೋಣಿಯನ್ನು ರಭಸದಿಂದ ಮುಂದೆ ನಡೆಸಿದನು. ತೇಲುತಿದ್ದ ವಸ್ತು ವಿನ ಸಮೀಪಕ್ಕೆ ಬರುವಾಗ ಅವರಿಗೆ ಮನುಷ್ಯನ ಶರೀರ ತೇಲುತ್ತಿದೆ ಯೆಂದು ತಿಳಿಯಲು ಆ ವ್ಯಕ್ತಿಯ ಕಡೆಗೆ ದೋಣಿಯನ್ನು ತಂದು ಅವನನ್ನು ದೋಣಿಯಲ್ಲಿ ಹಾಕಿ ನೌಕೆಯನ್ನು ಬಂದ ಕಡೆಗೆ ತಿರುಗಿಸಿದರು. ಒಬ್ಬನು ಅವನ ಮೂಗಿಗೆ ಕೈ ಹಿಡಿದು ನೋಡಲು ಉಸಿರಾಡುತಿದ್ದುದರಿಂದ ಬಿದ್ದು ಆಘಾತಗೊಂಡ ಆ ವ್ಯಕ್ತಿಗೆ ಜೀವವಿದೆಯೆಂದು ತಿಳಿದು ನಾಯಕನ ಹತ್ತಿರ ಇವನಿಗೆ ಸ್ಮೃತಿ ತಪ್ಪಿದೆಯೆಂದನು. ಆ ನಾಯಕನು ದಡಕ್ಕೆ ಬಂದ ನಂತರ ಅವನನ್ನು ಕೆಳಗೆ ಹೈಗೆಯಲ್ಲಿ ಮಲಗಿಸಿ ಸ್ಮೃತಿ ತಪ್ಪಿದ ವ್ಯಕ್ತಿಯ ಹೊಟ್ಟೆ ಯಿಂದ ನೀರನ್ನು ಒತ್ತಿ ಕಾರಿಸಿದನು. ಮೆಡಿಕಲ್ ಕಾಲೇಜಿನ ವಿದ್ಯಾರ್ಥಿ ಗಳಲ್ಲವೆ! ಕೆಲವರು ತಮ್ಮ ಕೋರ್ಸಿನ ಕಡೆಯ ವರ್ಷದಲ್ಲೋದುತಿದ್ದರು. ಅವರು ಮೊದಲೇ ಬರುವಾಗ ತಮ್ಮಲ್ಲಿಯ ಯಾರಾದರೂ ಒಬ್ಬನು ಅಕ ಸ್ಮಾತ್ತಾಗಿ ನೀರಿಗೆ ಬಿದ್ದು ಸ್ಮೃತಿಯಿಲ್ಲವಾದರೆ ಉಪಚರಿಸಲು ತಂದ ಪುಡಿಯನ್ನು ಆ ವ್ಯಕ್ತಿಯ ಮೂಗಿಗೆ ಹಾಕಲು ಅವನು ಎಚ್ಚತ್ತನು. ವಾಚಕರೆ! ಆ ವಿದ್ಯಾರ್ಥಿಗಳಲ್ಲಿ ಇಬ್ಬರು ಮಂಗಳೂರಿನವರಾಗಿದ್ದರು. ನಾಯಕನು ಮೈಸೂರ ದೇಶದವನು. ಆ ಮೂವರಿಗೂ ಕನ್ನಡ ಗೊತ್ತಿದೆ ಯೆಂದು ಬೇರೆ ಹೇಳಬೇಕೆ? ಮಂಗಳೂರಿನವರಿಗೆ ಕರಮುಚಂದನ ಪರಿ ಚಯವಿದ್ದಿತಾದುದರಿಂದವರಲ್ಲೊಬ್ಬನು ಪತ್ತೇದಾರ್‌ಳೇ, ನೀವು ಸಮುದ್ರ ದಲ್ಲಿ ಬಿದ್ದುದು ಹೇಗೆ? ಎಂದು ಕೇಳಲು ಅವನಿಗೆ ರಾಧಾಕೃಷ್ಣ ರಮೇಶ ರಂತೆ ವಂಚಿಸಿದ ಲೋಬೋ ಮತ್ತು ಪಿಟ್ಟನ ವಿಷಯ ನೆನಪಾಗಲು ಸಂಕ್ಷೇಪವಾಗಿ ಈ ಘಟನೆಯನ್ನು ಅವರಿಗೆ ವಿವರಿಸಿ ಹೇಳಿದನು. ಅವರಲ್ಲಿ ಹಿಂದುಸ್ತಾನಿಯಾಡುತಿದ್ದ ತಮ್ಮ ಮಿತ್ರರಿಗೆ ಕನ್ನಡಿಗರು ಕರಮುಚಂದನ ಪರಿಚಯ ಮಾಡಿಸಿ ಅವನ ಗುಣಗಾನ ಮಾಡಿದರು. ಕರಮುಚಂದನು ಆ ವಿದ್ಯಾರ್ಥಿಗಳಿಗೆ ಕೃತಜ್ಞತೆಯನ್ನು ಸಲ್ಲಿಸಿ ಅನಂತರ ನನ್ನ ಆಪತ್ಬಾಂಧು ಗಳೇ! ನೀವು ನನ್ನ ಈ ಘಟನೆಯನ್ನು ಯಾರೊಡನೆಯೂ ಹೇಳ ಬಾರದು. ಯಾಕೆಂದರೆ ಲೋಬೋನನ್ನು ನಾನು ಸತ್ತಿರುವೆನೆಂದೇ ತಿಳಿದು ಮಂಗಳೂರಿಗೆ ಹೋಗಿ ಅನರ್ಥವನ್ನುಂಟುಮಾಡಬಹುದು. ಆದ್ದರಿಂದ

ನಾಸೀಗ ಬದುಕಿ ಉಳಿದ ಸಂಗತಿಯು ಅವನಿಗೆ ಗೊತ್ತಾಗದಿದ್ದರೆ ಬೇಗನೆ ಅವನ ಒಳಸಂಚನ್ನು ಬಹಿರಂಗಪಡಿಸಲು ಸಾಧ್ಯ, ಎಂದು ಹೇಳಲು ಆ ವಿದ್ಯಾರ್ಥಿಗಳು ನಾವೀ ಸಂಗತಿಯನ್ನಾರೊಡನೆಯೂ ಹೇಳುವುದಿಲ್ಲವೆಂದು ಪ್ರತಿಜ್ಞೆ ಮಾಡಿದರು.

ಕರಮಚಂದನು ಆಮೇಲೆ ಆ ವಿದ್ಯಾರ್ಥಿಗಳೊಡನೆ ನಾನಿನ್ನು ನನ್ನ ಬಾರಿಗೆ ಹೋಗುವೆನೆಂದು ಹೇಳಿದನು. ಆಗ ಮೈಸೂರಿನವನು ಅಂದರೆ ಆ ಗುಂಪಿನ ನಾಯಕನು ಮಹನೀಯರೆ! ತಾವೀಗ ಬಹಳ ದಣಿದಿರು ವಿರಿ. ಆದುದರಿಂದ ಈ ದಿನ ನಮ್ಮ ಹೋಸ್ಟೆಲಿಗೆ ಬನ್ನಿರಿ; ನಾಳೆ ಅಲ್ಲಿಂದ ಎಲ್ಲಿಗೆ ಬೇಕಾದರೂ ಹೋಗುವುದಕ್ಕೆ ನಮ್ಮ ಅಡ್ಡಿಯಿಲ್ಲವೆಂದು ವಿನಯದಿಂದ ಹೇಳಿದನು. ವಿಪತ್‌ನಲ್ಲಿದ್ದಾಗ ರಕ್ಷಿಸಿದವರ ಬೇಡಿಕೆಯನ್ನು ಅಲ್ಲಗಳೆಯಲು ಮನವಿಲ್ಲದೆ ಕರಮಚಂದನು ಮಿತ್ರರೆ, ನಿಮ್ಮ ಆದರದ ಆತಿಥ್ಯವನ್ನು ತಿರಸ್ಕರಿಸಲಾರೆನು; ಆದರೆ ನೀವು ನಿಮ್ಮ ಹೋಸ್ಟೆಲ್‌ನಲ್ಲಿ ನಾನಾರೆಂಬದನ್ನು ಯಾರೊಡನೆಯೂ ಹೇಳಬಾರದೆನ್ನಲವರು ನೀವಾ ವಿಷಯಕ್ಕೆ ಚಿಂತಿಸಬೇಕಿಲ್ಲವೆಂದು ಧೈರ್ಯ ಹೇಳಿದರು. ಮಂಗಳೂರಿನಿಂದ ಬಂದ ವಿಧ್ಯಾರ್ಥಿಯೊಬ್ಬನಿಗೆ ಕಾರ್ ಇದ್ದಿತು. ಆ ಮೋಟಾರ ಕಾರ್ ದಡದಲ್ಲಿಯೇ ನಿಂತಿದ್ದಿತು. ಕರಮಚಂದನು ಅವರೆಲ್ಲರೊಡನೆ ಕಾರಿನಲ್ಲಿ ಕುಳಿತ ಕೂಡಲೇ ಆ ಕಾರು ವೇಗವಾಗಿ ಮೆಡಿಕಲ್ ಕಾಲೇಜ್‌ನ ಹೋಸ್ಟೆಲ್‌ಗೆ ಹೋಯಿತು. ಆ ರಾತ್ರಿ ಪತ್ತೇದಾರಿಯು ತನ್ನ ಪರಿಚಯದ ಕನ್ನಡಿಗರ ರೂಂವಿುನಲ್ಲಿದ್ದನು. ಮರುದಿವಸ ಬೆಳಗ್ಗೆ ತನ್ನನ್ನು ಕಾಪಾಡಿದ ವಿದ್ಯಾರ್ಥಿ ಗುಂಪಿಗೆ ಟೀ ಪಾರ್ಟಿಯನ್ನಿತ್ತು ಕೂಡಲೇ ಅವನಲ್ಲಿಂದ ಮಂಗಳೂರಿಗೆ ಹೊರಡಲು ಹೊರಟನು.

ವಾಚಕರೆ! ನಾವೀಗ ಇಲ್ಲಿ ಲೋಬೋನ ಸ್ವಲ್ಪ ವಿಷಯ ಆಲೋಚಿಸ ಬೇಕಾಗಿದೆ. ಕರಮಚಂದನನ್ನು ಸಮುದ್ರಕ್ಕೆ ಬೀಳಿಸಿ ಪಿಟ್ಟೊಡನೆ ಲೋಬೋನು ಅಲ್ಲಿಂದ ಹೊರಟು ಪಿಟ್ಟನು ಅಂದರೆ ಡಾ|| ರಮೇಶನು ಬಾಡಿಗೆಗೆ ಪಡೆದ ಮನೆಗೆ ಹೋದನು. ಆ ರಾತ್ರಿ ಅವರಿಬ್ಬರೂ ಬೇಕಾದಷ್ಟು ವೈನ ಕುಡಿದು ಮತ್ತರಾಗಿ ಹಾಸಿಗೆಯಲ್ಲಿ ಬಿದ್ದು ಹೊರಳಾಡುತ್ತ ಸಮಯ ಕಳೆದರು. ಕರಮಚಂದನು ದೈವಲೀಲೆಯಿಂದ ಬದುಕಿರುವೆನೆಂದು ತಮೋಗುಣ ಮತ್ತರಾದ ಆ ಮದಾಂಧರಿಗೇನು

ಗೊತ್ತು? "ವನೇ ರಣೇ ಶತ್ರು ಜಲಾಗ್ನಿ ಮಧ್ಯೆ! ಮಹಾರ್ಣವೇ ಪರ್ವತ ಮಸ್ತಕೇಷು ॥ ಸುಪ್ತಂ ಪ್ರಮತ್ತಂ ವಿಷಮಸ್ಥಿತೋಪಿವಾ! ರಕ್ಷಂತಿ ಪುಣ್ಯಾನಿ ಪುರಾಕೃತಾನಿ ॥" ಎಂಬ ನೀತಿ ವಾಕ್ಯವಿದೆಯಷ್ಟೆ? ಅದರಂತೆ ಕರಮುಚಂದನು ಮಾಡಿದ ಪುಣ್ಯಪ್ರಭಾವದಿಂದಲೂ ಮತ್ತು ಬ್ರಹ್ಮನು ಅವನ ಹಣೆಯಲ್ಲಿ ಗಟ್ಟಿಯಾಗಿ ದಪ್ಪಕ್ಷರಗಳಲ್ಲಿ ಆಯುಸ್ಸು ಬರೆದಿದ್ದುದ ರಿಂದಲೂ ಸಮುದ್ರದಲ್ಲಿ ಮುಳಗಿದರೂ ದೈವಸಂಕಲ್ಪದಿಂದಲಾಗಿ ಬದುಕಿದರೂ ಕಾಲೇಜ್ ಹೊಸ್ಟೆಲ್‌ನಿಂದ ಹೊರಟು ಅನಂತರ ಛದ್ಮವೇಷ ಧರಿಸಿ ಅವನು ಬಂದರಿಗೆ ಬಂದಿದ್ದನು. ಅತಿ ಕಪ್ಪಾದ ಮೈ ಬಣ್ಣ, ಭಯವನ್ನುಂಟು ಮಾಡುವಷ್ಟು ದೊಡ್ಡ ಮೀಸೆ, ಉದ್ದುದ್ದ ಬೆಳೆದ ತಲೆಗೂದಲು, ಗೇಣುದ್ದ ಇಳಿಬಿಟ್ಟಿರುವ ಗಡ್ಡ ಕೋರೆ ಹಲ್ಲುಗಳು ಅಲ್ಲದೆ ಗೋಡು ಬೆನ್ನಿನಿಂದಲಂಕೃತವಾದ ವೇಷಾಂತರದಿಂದಿದ್ದ ಕರಮುಚಂದನನ್ನು ಕಂಡು ಬಂದರಿನಲ್ಲಿ ಪ್ರಯಾಣಕ್ಕೆ ಬಂದ ಸ್ತ್ರೀಯರ ಕೈಗಳಲ್ಲಿ ಕುಳಿತುಕೊಂಡಿದ್ದ ಸಣ್ಣ ಮಕ್ಕಳು ಚಿಟ್ಟನೆ ಚೀರಿ ತಮ್ಮ ತಾಯಂದಿರ ಸೆರಗಿನೆಡೆಯಲ್ಲಿ ಮುಖವನ್ನಡಗಿಸಿಕೊಳ್ಳುತ್ತಿದ್ದರು ಅವನ ವಿಚಿತ್ರ ವೇಷವನ್ನು ಕಂಡು ಅವನ ಮಿತ್ರರಂತೂ ಗುರುತಿಸುವುದು ಇರಲಿ: ಸ್ವತಃ ಅವನ ತಮ್ಮನಾದ ರಾಮದಾಸನಿಗೆ ಕೂಡ ತನ್ನಣ್ಣನನ್ನು ಪತ್ತೆಹಚ್ಚಲಾಗುತ್ತಿರಲಿಲ್ಲ. ಲೋಬೋ ಮತ್ತು ಪಿಟ್ಟ ಇಬ್ಬರೂ ಅದೇ ಹಡಗಿನಲ್ಲಿ ಮಂಗಳೂರಿಗೆ ಬರಲು ಬಂದಿದ್ದರು. ಜೋಸೆಫ್‌ನೂ ಬಂದಿದ್ದನು ಚುರುಕು ಬುದ್ಧಿಯ ಪತ್ತೇದಾರಿಯು ಅವ ದನ್ನು ಕಂಡಿದ್ದರೂ ಕಾಣದವನಂತಿದ್ದನು. ಲೋಬೋನು ಬಹಳ ಸಂತೋಷದಿಂದ ನಡೆದು ಬರುತ್ತಿರಲು ಇವನಿಗಿನ್ನು ಹೆಚ್ಚು ಸಮಯ ಸಂತಸ ಪಡೆಯಲು ಸಮಯವಿಲ್ಲದುದರಿಂದ ಅಷ್ಟರವರೆಗಾದರೂ ಸುಖದಿಂದಿರಲಿ, ಎಂದು ತನ್ನ ಮನಸ್ಸಿನಲ್ಲಿ ಗ್ರಹಿಸಿದನು. ಲೋಬೋನು ಧೈರ್ಯದಿಂದಿದ್ದರೂ ಪಿಟ್ಟನಿಗೂ ಜೋಸೆಫನಿಗೂ ಇನ್ನೂ ಸಂಪೂರ್ಣ ಧೈರ್ಯ ಉಂಟಾಗಿರಲಿಲ್ಲ. ಕರಮುಚಂದನ ತಮ್ಮ ರಾಮದಾಸನೆಲ್ಲಿಯಾದರೂ ತಮ್ಮನ್ನು ಅಪಾಯಕ್ಕೀಡು ಮಾಡಿಯಾನೆಂದು ಅವರ ಹೃದಯಗಳು ಕಂಪಿಸುತಿದ್ದವು. ಎಲ್ಲರೂ ಟೀಕೆಟ್ ಪಡೆದು ಹಡಗನ್ನೇರಿದರು ಲೋಬೋ ಪ್ರಥಮ ತರಗತಿಯಲ್ಲಿಯೂ ಪಿಟ್ಟ ಜೋಸೆಫ್‌ರು ಸಾಮಾನ್ಯ ತರಗತಿಯಲ್ಲಿಯೂ ಕುಳಿತುಕೊಂಡರು. ಛದ್ಮವೇಷಧಾರಿಯಾದ ಕರಮುಚಂದನು

ಪಿಟ್ಟಿನ ಬಳಿಯಲ್ಲಿಯೇ ಕುಳಿತಿದ್ದನು. ಪ್ರಯಾಣಿಕರು ಈ ವಿಚಿತ್ರ ತಮ್ಮ ತಮ್ಮೊಳಗೆ ಮಾತನಾಡುತ್ತಾ ಅವನನ್ನು ಗೇಲಿ ಮಾಡಲಾರಂಭಿಸಿದರೂ ಅವನೇನೂ ಮಾತನಾಡಲಿಲ್ಲ.

---

# ಅಜ್ಞಾತವಾಸ

ಪಾಠಕ ಮಹಾಶಯರೆ! ನಾವೀಗ ಕರಮುಚಂದನು ಮಂಗಳೂರಿನಿಂದ ಮುಂಬಾಯಿಗೆ ಹೊರಟುಹೋದನಂತರ ಅಲ್ಲೇನು ನಡೆಯಿತೆಂದು ವಿಚಾರಿಸುವ. ಪತ್ರೆದಾರಿಯು ಯಾವ ದಿನ ಹೊರಟಿದ್ದನೋ ಅದೇ ದಿನ ಸಾಯಂಕಾಲ ಐದುಗಂಟೆಗೆ ಅವನನ್ನು ಕಾಣಲು ಪೋಲೀಸ್ ಸುಪರಿಡೆಂಟ್‌ನು ಅವನ ಮನೆಗೆ ಬಂದನು. ರಾಮದಾಸನಿಂದ ಕರಮುಚಂದನು ಮುಂಬಾಯಿಗೆ ಯಾವುದೋ ಒಂದು ಕೊಲೆಯ ಪತ್ತೆಗಾಗಿ ಹೋಗಿರುವನೆಂದು ತಿಳಿಯಲು ಯಶವಂತಸಿಂಹನು ಅಲ್ಲಿಂದ ತನ್ನ ಮನೆಗೆ ಬಂದನು ಪತ್ತೆದಾರಿಯು ಕಾಡಿನೊಳಗಿರುವ ಕಾಳಿಕಾದೇವಿಯ ಗುಡಿಯಿಂದ ಆ ಸ್ಮಿಚ್‌ನ ಮನೆಗೆ ಹೋಗಲು ದಾರಿಯಿದೆಯೆಂದು ಅವನೊಡನೆ ಹೇಳಿದ್ದನಷ್ಟೆ? ಸ್ಮಿಚ್‌ನ ಮನೆಗೆ ಹೋಗಿ ಎಲ್ಲಾ ದಸ್ಯುಗಳನ್ನು ಬಗೆಹರಿಸಬೇಕೆಂದೂ ದುಷ್ಟನಾದ ಲೋಜೋನ ಅನ್ಯಾಯವನ್ನು ನಿಗ್ರಹಿಸಬೇಕೆಂದೂ ಬಗೆದನು ರಾತ್ರಿ ಎಂಟುಗಂಟೆಯಾಗಲು ಯಶವಂತಸಿಂಹನು ಮಂಗಳೂರು ನಗರದ ಪೂರ್ವಾಭಿಮುಖವಾಗಿ ಹೊರಟನು. ಅರಣ್ಯಕ್ಕೆ ತಲಪಿ ಅಲ್ಲಿ ಕಾಳಿ ಗುಡಿಯನ್ನು ಹುಡುಕಿ ಅಲ್ಲಿಗೆ ಹೋಗಿ ಗುಡಿಯೊಳಗೆ ಹೋದನು. ಅವನಾ ಗುಡಿಯೊಳಗೆ ಹೋಗಿ ನೋಡಲು ಅವನಿಗುಂಟಾದ ಆಶ್ಚರ್ಯವನ್ನೇನೆನ್ನಲಿ! ಆ ಗುಡಿಯೊಳಗಿನಿಂದ ಹೊರ ಹೋಗಲು ಬಂದ ದಾರಿಯಲ್ಲದೆ ಬೇರಾವ ದಾರಿಯೂ ಇರಲಿಲ್ಲ ಯಶವಂತನು ಪೋಲೀಸ್ ಸುಪರಿಡೆಂಟ್ ಹುದ್ದೆಗೆ ಬಂದು ಇನ್ನೂ ಹೆಚ್ಚುಕಾಲವಾಗಿರಲಿಲ್ಲವಾದುದರಿಂದ ವಿಶೇಷವಾಗಿ ಪತ್ತೆಮಾಡಲವನು ಒಜ್ಜೊಂಟಿಗನಾಗಿ ಹೋದುದೇ ಇಲ್ಲವೆನ್ನಬಹುದು. ಆದ್ದರಿಂದ ಆ ಗುಡಿಯಲ್ಲಿರುವ ಗುಪ್ತದ್ವಾರವನ್ನು ಕಂಡುಹಿಡಿಯಲವನು ಅಸಮರ್ಥನಾಗಿ ನಿರಾಶನಾದನು ಅವನು ಚುರುಕು ಬುದ್ಧಿಯವನಾದುದರಿಂದ ತನ್ನ ಬುದ್ಧಿವಂತಿಕೆಯನ್ನು ಯಾವ ರೀತಿಯಲ್ಲಿ ರಹಸ್ಯ ಮಾರ್ಗವನ್ನು

ಕಂಡುಹಿಡಿಯುವುದಕ್ಕೆ ಉಪಯೋಗಿಸಬೇಕೆಂದವನು ತರ್ಕಿಸಲಾರಂಭಿಸಿದನು ಸುಮಾರು ಸಮಯ ಅವನು ತಬ್ಬಿಬ್ಬಾಗಿ ಹುಡುಕಿ ಬೇಸತ್ತು ಕಡೆಗೆ 'ಬಂದ ದಾರಿಗೆ ಸುಂಕವಿಲ್ಲ'ವೆಂಬಂತೆ ಬಂದ ಮಾರ್ಗದಲ್ಲಿ ಹಿಂದುರುಗಿ ಹೋಗಲಾಲೋಚಿಸಿದನು; ಆದರೆ ಅಷ್ಟರಲ್ಲವನು ಕಾಳೀ ವಿಗ್ರಹದ ಹಿಂದೆ ಬೂಟ್ಸಿನಲ್ಲಿ ನೆಲಕ್ಕೆ ಒದೆಯಲು ಡಬಡಬವೆಂಬ ಶಬ್ದವಾಯಿತು. ಆಗವನಿಗೆ ನೆಲವಡಿಯಲ್ಲಿ ಟೊಳ್ಳಾದ ಭಾಗವಿದೆಯೆಂದೂಹಿಸಿ ಇದೇ ಗುಪ್ತಮಾರ್ಗವೆಂದು ತಿಳಿದು ಅಲ್ಲಿ ಸೂಕ್ಷ್ಮವಾಗಿ ಹುಡುಕಲು ಕಂಡ ಕೊಂಡಿಯನ್ನೊತ್ತಿದನು ಕೂಡಲೇ ಒಬ್ಬ ಮನುಜನಿಗೆ ಕೆಳಗಿಳಿದು ಹೋಗುವಷ್ಟು ದೊಡ್ಡ ದ್ವಾರ ಉಂಟಾಯಿತು. ಅಲ್ಲಿ ಮೆಟ್ಟಿಲುಗಳು ಕಾಣಿಸಲು ಸುಪರಿಡೆಂಟನು ಟಾರ್ಚ ಲೈಟ್‌ನ ಪ್ರಕಾಶದಲ್ಲಿ ಕೆಳಗಿಳಿದು ಸುರಂಗ ಮಾರ್ಗದಲ್ಲಿ ಮುಂದುವರಿದನು. ಸ್ವಲ್ಪದೂರ ಹೋಗಲು ಗುಹೆಯ ಎದುರಿಗೆ ಅಡ್ಡವಾದ ಗೋಡೆ ಸಿಕ್ಕಲು ಅಲ್ಲಿರುವ ಅಣಿಯನ್ನವನು ತಿರುಗಿಸಲು ಆಗ ದ್ವಾರವುಂಟಾಯಿತು. ಆ ಬಾಗಿಲಿನಲ್ಲಿ ಅವನು ಮುಂದುವರಿದು ಎರಡು ಫರ್ಲಾಂಗ್ ದೂರ ಹೋಗಲು ಪುನಃ ಅವನಿಗೆ ಮತ್ತೊಂದು ಗೋಡೆ ಎದುರಿಗೆ ಸಿಕ್ಕಲು ಅಲ್ಲಿ ಇರುವ ಕೊಂಡಿಯನ್ನು ತಿರುಗಿಸಿ ಬಾಗಿಲಿನಲ್ಲಿ ಮುಂದೆ ಹೋಗಿ ಒಂದು ಕೋಣೆಗೆ ಬಂದನು. ಅನಂತರ ವಿಶಾಲವಾದ ಬೇರೊಂದು ಕೋಣೆಗೆ ಹೋಗಿ ಅಲ್ಲಿಂದ ಆ ಕಟ್ಟಡದಲ್ಲಿ ಜನರಾರಾದರೂ ಇರುವರೆ? ಎಂದೂ, ಜನರಿದ್ದರೆ ಶಬ್ದವೇನಾದರೂ ಕೇಳಿಸುತ್ತಿದೆಯೋ ಎಂದೂ ಬಹಳ ಎಚ್ಚರದಿಂದ ಆಲೈಸುತ್ತಿರಲು ಅವನಿಗೆ ಶಬ್ದವೇನೂ ಕೇಳಿಬರಲಿಲ್ಲ.

ಅನಂತರ ಯಶವಂತನು ದೊಡ್ಡ ಹೊಲ್‌ಗೆ ಹೋಗಿ ಸ್ವಿಚ್‌ನ್ನೊತ್ತಲು ವಿದ್ಯುತ್ ದೀಪಗಳು ಪ್ರಕಾಶಮಾನವಾಗಿ ಉರಿಯಲಾರಂಭಿಸಿದುವು. ಬೆಳಕಿನಲ್ಲಿ ಆ ಕೊಠಡಿಯು ಬಹಳ ಸುಂದರವಾಗಿದೆಯೆಂದು ಅವನಿಗೆ ತಿಳಿಯಿತು. ಅಲ್ಲಿ ನಾಲ್ಕೈದು ಕುರ್ಚಿಗಳೂ ಎರಡು ಕಪಾಟುಗಳೂ ಅಲ್ಲದೆ ಒಂದು ದುಂಡು ಮೇಜೂ ಇದ್ದಿತು. ಯಶವಂತನು ಮೇಜಿನ ಒಳಗೆ ರಹಸ್ಯ ಪತ್ರಗಳೇನಾದರೂ ಇರಬಹುದೆಂದು ತಿಳಿದು ಅವಸರದಿಂದ ಅಲ್ಲಿಗೆ ಹೋಗಿ ಹುಡುಕಲಾರಂಭಿಸಿದನು; ಆದರೆ ಅಲ್ಲೇನೂ ದೊರಕಲಿಲ್ಲ. ಅಲ್ಲಿಂದ ಸ್ವಿಚ್‌ನ್ನೊತ್ತಲು ಗೋಡೆಯಲ್ಲೊಂದು ಬಾಗಿಲುಂಟಾಯಿತು

ಆವನು ಬಾಗಿಲು ದಾಟಿ ಮತ್ತೊಂದು ಕೋಣೆಗೆ ಹೋಗಿ ಅಲ್ಲಿಂದ ಬೇರೊಂದು ಕೋಣೆಗೆ ಹೋದನು. ಅಲ್ಲಿ ವಿದ್ಯುತ್ ದೀಪವನ್ನುರಿಸಲು ಅಲ್ಲಿನ ರಮಣೀಯ ದೃಶ್ಯವನ್ನು ಕಂಡು ಅವನು ಚಕಿತನಾದನು. ಬಹಳ ಉತ್ತಮವಾದ ಮಂಚದಲ್ಲಿ ರೇಶ್ಮೆ ಬಟ್ಟೆ ಮತ್ತು ಉತ್ತಮ ತರದ ಹಾಸಿಗೆ ಯನ್ನು ಹಾಕಿದ್ದರು. ಅಲ್ಲಿ ಈಗ ತಾನೇ ಎದ್ದುಬರುವಂತೆ ಕಾಣುತ್ತಿರುವ ಅನೇಕ ಸುಂದರ ಸ್ತ್ರೀಪುರುಷರ ಚಿತ್ರಗಳಿದ್ದುವು ಬಗೆಬಗೆಯ ಸುಗಂಧ ದ್ರವ್ಯಗಳು ಚಿತ್ರವಿಚಿತ್ರಗಳಾಗಿ ಬರೆದ ನಕ್ಷೆಗಳುಳ್ಳ ರೇಶ್ಮೆ ಬಟ್ಟೆಗಳೂ ಇದ್ದು ದನ್ನು ಕಂಡು ಅವನು ಬಹುಶಃ ಕುಸುಮಳನ್ನು ಇದೇ ಕೋಣೆಯಲ್ಲಿ ಆ ನೀಚ ವಿಜ್ಞಾನಿಯು ಬಂಧಿಸಿರಬಹುದು ಎಂದು ತರ್ಕಿಸಿದನು. ಅನಂತರ ಆ ಕೋಣೆಯಿಂದ ಬೇರೊಂದು ಕೋಣೆಗೆ ಹೋಗಿ ಟಾರ್ಚ್ ಲೈಟಿನ ಪ್ರಕಾಶದಲ್ಲಿ ಸುತ್ತಲೂ ನೋಡಿದರೂ ಎಲ್ಲಾ ಗೋಡೆಗಳಲ್ಲಿಯೂ ಅನೇಕ ಸ್ವಿಚ್‌ಗಳಿದ್ದುವಲ್ಲದೆ ಬೇರೇನೂ ಇರಲಿಲ್ಲ. ಆ ಕೊಠಡಿಯ ಪೂರ್ವದಿಕ್ಕಿನ ಗೋಡೆಯಲ್ಲಿದ್ದ ಮೊಳೆಗಳ ಬಣ್ಣಗಳು ಕಪ್ಪಾಗಿದ್ದುವು. ದಕ್ಷಿಣದ ಗೋಡೆ ಯಲ್ಲಿದ್ದವುಗಳು ಹಸುರುಬಣ್ಣದವುಗಳೂ ಪಶ್ಚಿಮ ಉತ್ತರದಿಕ್ಕುಗಳಲ್ಲಿದ್ದುವು. ಕ್ರಮವಾಗಿ ಕೆಂಪು, ಬಿಳಿ, ಬಣ್ಣದ ಮೊಳೆಗಳಾಗಿದ್ದುವು. ಆವನು ಪೂರ್ವ ದಿಕ್ಕಿನಲ್ಲಿದ್ದ ಒಂದು ಕೊಂಡಿಯನ್ನೊತ್ತಲು ಡಬಡಬ ಎಂದು ಭಯಂಕರ ಶಬ್ದವುಂಟಾಗಿ ಗೋಡೆಯಲ್ಲಿ ಎರಡಡಿ ವ್ಯಾಸದ ವೃತ್ತಾಕಾರದ ತೂತುಂಟಾ ಯಿತು ಆ ದ್ವಾರದಲ್ಲಿ ಯಶವಂತನು ತಲೆಹಾಕಿ ನೋಡಲು ಕೆಳಗಡೆ ಯಲ್ಲಿ ಒಂದು ಕೊಠಡಿಯಿರುವುದೆಂದು ಗೊತ್ತಾಯಿತು. ಅದೇ ಕೋಣೆ ಯಲ್ಲಿ ಲೋಬೋನು ಪತ್ತೆದಾರ ಸಹೋದರರನ್ನು ಬಂಧಿಸಿದ್ದನು. ಆ ಕೋಣೆಗೆ ಎಲ್ಲಿ ಹೋಗಬೇಕೆಂದು ಅವನಿಗೆ ತಿಳಿಯದಿರಲು ಬೇರೊಂದು ಕೊಂಡಿಯನ್ನೊತ್ತಲು ಈ ದ್ವಾರವು ಮಾಯವಾಗಿ ಬೇರೊಂದು ದ್ವಾರ ಉಂಟಾಯಿತು ಅನಂತರ ಅವನು ದಕ್ಷಿಣ ದಿಕ್ಕಿನಲ್ಲಿರುವ ಕೊಂಡಿಯ ನ್ನೊತ್ತಲು ಅಲ್ಲೊಂದು ಬಾಗಿಲುಂಟಾಯಿತು. ಅವನಾ ಬಾಗಿಲಿನಲ್ಲಿ ಮುಂದೆ ಹೋಗಲು ಒಂದು ಜಗಲಿ ಸಿಕ್ಕಿತು. ಅದರಲ್ಲಿ ಮೇಲೇರಿ ಹೋಗಲು ಒಂದು ಸಿಮೆಂಟಿನ ಏಣಿಯಿದ್ದಿತು ಆ ಏಣಿಯಲ್ಲವನು ಮೇಲೇರಿ ಹೋಗಲು ಆ ಸ್ವಿಚ್‌ನ ಮನೆಯ ಮೇಲ್ಭಾಗಕ್ಕೆ ಬಂದನು. ಮೇಲ್ಗಡೆಯಲ್ಲಿ ಸರ್ವಸಾಧಾರಣ ಮನೆಯಂತಿತ್ತು. ಮೇಲಿನ ಎಲ್ಲಾ

ಕೋಣೆಗಳಿಗೂ ಅವನಿಗೆ ಹೋಗಲು ಸಾಧ್ಯವಾಗದಿದ್ದರೂ. ಕೆಲವು ಸಣ್ಣ
ಕೊಠಡಿಗಳಿಗೆ ಹೋಗಿ ಅಲ್ಲೇನಾದರೂ ಗುಪ್ತ ಪತ್ರಗಳಿರುವುವೋ ಎಂದು
ಪರೀಕ್ಷಿಸಿದರೂ ಏನೂ ಸಿಗದಿರಲು ಕೆಳಗಡೆಯ ನೆಲಮಾಳಿಗೆಗೆ ಬಂದ ದಾರಿ
ಯಿಂದಲೇ ಇಳಿದು ಹೋದನು. ಅನಂತರವನು ತುಂಬಾ ಮೊಳೆಗಳಿರುವ
ಕೊಠಡಿಗೆ ಬಂದು ದಕ್ಷಿಣಗಡೆಯಲ್ಲಿರುವ ಕೊಂಡಿಯನ್ನೊತ್ತಲು ಒಂದು
ಸಣ್ಣ ಬಾಗಿಲುಂಟಾಯಿತು. ಆ ದ್ವಾರದಲ್ಲವನು ಮುಂದೆ ಹೋಗಲು
ದುರ್ಗಂಧವು ವಿಪರೀತ ಬಂದು ಅವನ ಮೂಗಿಗೆ ಬಡಿಯಿತು; ಆದರೆ ಆ
ದುರ್ವಾಸನೆಯು ಎಲ್ಲಿಂದ ಬರುತ್ತಿದೆಯೆಂದವನಿಗೆ ತಿಳಿಯಲಿಲ್ಲ.

ಯಶವಂತಸಿಂಹನು ಅನಂತರ ಮತ್ತೊಂದು ಸ್ವಿಚ್‌ನ್ನು ಅದೇ ರೀತಿ
ಯಲ್ಲೊತ್ತಲು ಗೋಡೆಯಲ್ಲಿ ಒಂದು ದೊಡ್ಡ ನಿಲುವುಗನ್ನಡಿಯುಂಟಾಯಿತು.
ಆತನು ಆ ಕನ್ನಡಿಯಲ್ಲಿ ಮುಖವಿಟ್ಟು ನೋಡಲು ಮತ್ತೊಂದು ಕೊಠಡಿ
ಯಲ್ಲಿ ರಕ್ತದಿಂದ ಕೆಂಪಾದ ಗರಗಸಗಳನ್ನು ಕಂಡವನು ಈ ನೀಚರು ಕೈದಿ
ಗಳನ್ನಾಗಿ ಜನರನ್ನು ಹಿಡಿದು ಗರಗಸದ ಬಾಯಿಗೆ ಕೊಟ್ಟು ಕೊಲ್ಲುತ್ತಾ
ರೆಂದು ತಿಳಿದು ಗಡಗಡನೆ ನಡುಗಿದನು. ಮತ್ತೊಂದು ಕಡೆಯಲ್ಲಿ ಭಯಂ
ಕರವಾದ ನೀರಿನ ಪ್ರವಾಹವು ಹರಿಯುತಿತ್ತು. ಅನಂತರವನು ಆ ಸ್ವಿಚ್
ಗಳನ್ನೆಲ್ಲ ಸರಿಪಡಿಸಿ ಮುಚ್ಚಿದ ನಂತರ ಉತ್ತರ ದಿಕ್ಕಿನ ಗೋಡೆಯ ಹತ್ತಿರ
ಹೋಗಿ ಒಂದು ಮೊಳೆಯನ್ನು ದೂಡಲು ಅವನು ನಿಂತಿದ್ದ ನೆಲವು ಕೆಳಗೆ
ಕುಸಿದು ಬಿದ್ದು ಅವನು ಕೆಳಗೆ ಬೀಳಲು ಪುನಃ ಮೊದಲಿನ ಸ್ಥಾನದಲ್ಲಿ
ಬಂದು ನಿಂತಿತು. ಅವನೀಗ ಮೊದಲಿದ್ದಲ್ಲಿಂದ ಸಾಧಾರಣ ಇಪ್ಪತ್ತು ಗಜ
ಕೆಳಗಿರುವ ಅಷ್ಟೊಂದು ದೊಡ್ಡದಾಗಿದ್ದರೂ ದುರ್ಗಂಧ ಪೂರಿತವಾದ
ಕೋಣೆಗೆ ಬಿದ್ದನು. ಅಲ್ಲಿಂದ ಮೇಲೆ ಹೋಗಲು ಬೇರಾವ ದಾರಿಯೂ
ಇರಲಿಲ್ಲ. ಶಿಲೆಕಲ್ಲನ್ನು ಸಿಮೆಂಟಿನಿಂದ ಜೋಡಿಸಲ್ಪಟ್ಟ ಬಲವಾದ ಆ
ಗೋಡೆಯನ್ನೆಂತು ದಾಟುವುದು? ಎಂದು ದುಃಖಿಸಲಾರಂಭಿಸಿದನು. ಅವನ
ಕೂಗುವಿಕೆಯು ಅರಣ್ಯ ರೋದನದಂತಾಯಿತು. ಅವನ ಸಂತಾಪದ ಅಳು
ವಿಕೆಯ ಶಬ್ದವು ಹೃದಯ ಹೀನವಾದ ಶಿಲೆಕಲ್ಲಿನಿಂದ ಧ್ವನಿಗೊಂಡಿತಲ್ಲದೆ
ಬೇರೇನೂ ಪ್ರಯೋಜನವಾಗಲಿಲ್ಲ. ಒಂದು ವೇಳೆ ಲೋಬೋನ ಸಂಗ
ಡಿಗರಾರಾದರೂ ಅಲ್ಲಿದ್ದರೆ ಯಶವಂತನ ಕೂಗಾಟ–ಹಾರಾಟವನ್ನು ಕೇಳಿ
ಬೋನಿನಲ್ಲಿ ಬಿದ್ದ ಇಲಿಯಾವುದೆಂದು ನೋಡಲು ಆ ಚಂದವನ್ನಾದರೂ

ನೋಡಲಾದರೂ ಬರುತಿದ್ದರೋ ಏನೋ? ಆದರೆ ಅಲ್ಲಾರೂ ಇರಲಿಲ್ಲ ವೆಂದು ಓದುಗರಿಗೆ ತಿಳಿದಿದೆಯಷ್ಟೆ! ಯಶವಂತನು ಕಡೆಗೆ ಅತ್ತಿತ್ತು ತಾನು ರಾಮದಾಸನೊಡನಾದರೂ ಇಲ್ಲಿಗೆ ಬರುವೆನೆಂಬ ಸಂಗತಿ ಯನ್ನು ಹೇಳಿದ್ದರೆ ನಾಸಿಲ್ಲಿಂದ ಪುನಃ ಮನೆಗೆ ತಲಪದಿರಲು ಅವ ನಾದರೂ ನನ್ನನ್ನರಸಿ ಈ ಪಾಪಕೂಪದಿಂದ ಕಾಪಾಡುತಿದ್ದನು. ಆದರೆ ನಾನವನೊಡನೆ ಹೇಳದಿದ್ದುದರಿಂದ ಆ ಆಶೆಯೇ ಇಲ್ಲವೆಂದು ಚಿಂತಿಸಿ ಸಂಕಟಿಕಾಲಕ್ಕೆ ವೆಂಕಟರಮಣವೆಂಬಂತೆ ದೇವರನ್ನು ನೆನೆಯಲಾರಂಭಿಸಿ ದನು. ಅವನು ಸಿಕ್ಕಿಬಿದ್ದ ಜಾಗಕ್ಕೆ ಸೂರ್ಯಪ್ರಕಾಶವೇ ಬೀಳುತಿ ದ್ದಿಲ್ಲ. ಎಲ್ಲಿಂದಲೋ ಉಸಿರಾಡುವಷ್ಟು ವಾಯು ಮಾತ್ರ ಬರುತಿದ್ದಾ ದರೂ ಅದು ದುರ್ವಾಸನೆಯಿಂದ ಕೂಡಿದ್ದಿತು. ಯಶವಂತನು ಅನ್ನನೀರಿ ಲ್ಲದೆ ಆ ಕೋಣೆಯಲ್ಲಿ ನರಳ ಬೇಕಾಗಿಬಂದಿತು. ತಾನೇತಕ್ಕೆ ಆ ಅಸಿಷ್ಟ ಮನೆಗೆ ಬಂದೆನೋ ಎಂದವನು ಪರಿತಪಿಸುತಿದ್ದನು. ಆ ರಾತ್ರಿ ಕಳೆ ಯಿತು. ಬೆಳಗಾದರೂ ಈಗ ಕತ್ತಲೆಯೋ ಹಗಲೋ ಎಂದವನಿಗೆ ಗೊತ್ತಾ ಗಲಿಲ್ಲ. ಆದರೆ ಕೈಗಡಿಯಾರವಿದ್ದುದರಿಂದ ತನ್ನಲ್ಲಿರುವ ಟೋರ್ಚ ಲೈಟಿನ್ ಪ್ರಕಾಶದಲ್ಲಿ ಗಂಟೆ ನೋಡಿ ತಾಸಿಲ್ಲಿ ಸಿಕ್ಕಿ ಬಿದ್ದು ಎಷ್ಟು ಸಮಯ ವಾಯಿತೆಂದು ತಿಳಿದುಕೊಳ್ಳುತ್ತಿದ್ದನು. ಅವನಿಗೆ ಒಂದು ಕ್ಷಣವೆಂದರೆ ಯುಗದಂತಾಯಿತು. ಎರಡು ದಿವಸ ಅವನು ಈ ರೀತಿಯಲ್ಲಿಯೇ ಕಾಲ ಕಳೆಯುತ್ತಿದ್ದನು.

ಸಾಯಂಕಾಲ ಮನೆಯಿಂದ ಹೊರಟ ತನ್ನ ಪತಿಯು ಮರುದಿವಸ ಬೆಳಗಾದರೂ ಬಾರದಿರಲು ಯಶವಂತನ ಪತಿಯು ಶೋಕಾಕುಲಳಾ ದಳು ತನ್ನ ರಮಣನೆಲ್ಲಿ ಕೊಲೆಗಾರರ ಕೈಗೆ ಸಿಕ್ಕಿದನೋ ಅಥವಾ ದುಷ್ಟರಾರಾದರೂ ಅವನನ್ನು ಬಂಧಿಸಿದರೋ? ಎಂದು ನಾನಾ ವಿಧ ವಾಗಿ ಸಂಶಯಪಟ್ಟು ವ್ಯಸನಗೊಂಡು ಸೇವಕರನ್ನು ಯಶವಂತನನ್ನು ಹುಡುಕುವದಕ್ಕಾಗಿ ಕಳುಹಿಸಿದಳು. ಆದರೆ ಮರುದಿವಸ ರಾತ್ರಿಯಾದರೂ ಅವನ ಪತ್ತೆ ಸಿಗಲಿಲ್ಲವೆಂದಮೇಲೆ ಅವಳ ದುಃಖವನ್ನೇನೆಂದು ಹೇಳಲಿ! ಅವಳು ಕೂಡಲೇ ಕರಮಚಂದನ ಮನೆಗೆ ಸೇವಕಿಯೊಡನೆ ಹೋದಳು. ಕರಮಚಂದನಾಗ ಅಲ್ಲಿರಲಿಲ್ಲ. ಅವನು ಮುಂಬಾಯಿಗೆ ಹೋಗಿರುವ ನೆಂದು ರಾಮದಾಸನು ಹೇಳಲು ಆ ತರುಣಿಯು ಅವನೊಡನೆ ವ್ಯಸನ

ದಿಂದ ಯಶವಂತನು ಕಾಣೆಯಾದುದನ್ನು ಹೇಳಿದನು. ರಾಮದಾಸನಿಗೆ ಯಶವಂತನು ಎಲ್ಲಿಗೆ ಹೋಗಿರುವನೆಂಬ ತರ್ಕಿಸಲಸಾಧ್ಯವಾಯಿತು. ಅವನು ಯಶವಂತಸಿಂಹನ ಪತ್ನಿಯೊಡನೆ ನಿನ್ನ ಪತ್ನಿಯನ್ನು ಬೇಗನೆ ಪತ್ತೆ ಹಚ್ಚುವೆನೆಂದನು. ಭರವಸೆಯೇನೋ ಕೊಟ್ಟನಾದರೂ ಅವನು ಅಕಸ್ಮಾತ್ತಾಗಿ ಕಾಣೆ ಹೇಗಾದನೆಂದು ತಿಳಿಯದೆ ಕಳವಳಗೊಂಡನು ಅವನ ಭರವಸೆಯನ್ನು ಕಂಡ ಯಶವಂತನ ಮಡದಿಯು ತನ್ನ ಮನೆಗೆ ಬಂದು ತನ್ನೊಡೆಯನು ದುಷ್ಟರ ಹತ್ತಿರದಿಂದ ಹೇಗಾದರೂ ಬೇಗನೆ ಅಪಾಯಹೊಂದದೆ ಸುರಕ್ಷಿತವಾಗಿ ಬರಲೆಂದು ದೇವರನ್ನು ಧ್ಯಾನಿಸುತ್ತ ಅನೇಕ ದೇವಾಲಯಗಳಿಗೆ ಹರಕೆ ಹೊತ್ತಳು ಆದರೆ ಯಶವಂತನು ಲೋಬೋನಿಂದ ನಿರ್ಮಿತ ಸ್ವಿಚ್‌ನ ಮನೆಯ ನೆಲದಡಿ ಆಹಾರವಿಲ್ಲದೆ ಉಸಿರಾಡಲು ಯೋಗ್ಯವಾಯ್ಯೂ ಸಹ ಇಲ್ಲವೆ ಕಷ್ಟಪಡುತಿದ್ದನೆಂದು ಪಾಪ! ಆ ಸಾಧ್ವಿಗಾರು ಹೇಳಬೇಕು? ಮರುದಿವಸ ಸಾಯಂಕಾಲದ ಪತ್ರಿಕೆಗಳಲ್ಲಿ ಮಂಗಳೂರಿನ ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನು ಪತ್ತೆಯಿಲ್ಲದವನಾಗಿ ಕಾಣೆಯಾಗಿರುವನು, ಎಂದು ದಪ್ಪಕ್ಷರಗಳಲ್ಲಿ ಮುದ್ರಿಸಲ್ಪಟ್ಟದ್ದಿತು.

೦೦ ೦೦ ೦೦ ೦೦

ಛದ್ಮವೇಷಧಾರಿಯಾದ ಕರಮುಚಂದನು ಹಡಗಿನಿಂದ ಮಂಗಳೂರಿನಲ್ಲಿಳಿದು ಮೊದಲು ವಿಶ್ರಾಂತಿ ಭವನಕ್ಕೆ ಬಂದನು ಲೋಬೋನೊಡನೆ ಪಿಟ್ಟೆ ಮತ್ತು ಜೋಸೆಫ್ ಎಲ್ಲಿಗೆ ಹೋದರೆಂಬದನ್ನು ಅವನು ಲಕ್ಷ್ಯವಿಟ್ಟು ನೋಡಲಿಲ್ಲ. ಆ ದಿನ ಅಲ್ಲಿಯೇ ಇದ್ದು ರಾತ್ರಿ ತನ್ನ ಮನೆಗೆ ಬರುವಾಗ ರಾಮದಾಸನು ವ್ಯಗ್ರ ಚಿತ್ತನಾಗಿ ವರ್ಷಾಂಡಾದಲ್ಲಿ ತಿರುಗಾಡುತಿದ್ದುದನ್ನು ಕಂಡನು ಕರಮುಚಂದನು ಮೊದಲು ಜಗಲಿಗೇರಿ ರಾಮದಾಸನ ಹಿಂದೆ ಬಂದು ಅವನ ಬೆನ್ನು ತಟ್ಟಲು, ಇಷ್ಟು ಧೈರ್ಯದಿಂದ ಬಂದವರಾರೆಂದು ಹಿಂದುರುಗಿ ನೋಡಿದನು. ಆಗ ಚೆನ್ನಾಗಿ ಕತ್ತಲಾದುದರಿಂದ ಆಗಂತುಕ ವ್ಯಕ್ತಿಯಾರೆಂಬದು ಅವನು ತಿಳಿಯದೆ ಬಂದವರಾರು ?ಎಂದು ಪ್ರಶ್ನಿಸಲು, ಛದ್ಮವೇಷಧಾರಿಯಾದ ಕರಮುಚಂದನು ನಾನೊಬ್ಬ ಕೊಲೆಗಡುಕ ಎಂದು ನಗೆದಾಡುತ್ತಾ ಹೇಳಿದನು. ರಾಮದಾಸನಿಗೆ ಆಗಂತುಕನ ಮಾತನ್ನು ಕೇಳಿ ಬಹಳ ಆಶ್ಚರ್ಯವುಂಟಾಗಿ ಕೊಲೆಗಾರನಿಗಿಲ್ಲೇನು ಕೆಲಸ ? ಎನ್ನಲು ಕರಮುಚಂದನು ನೀನು ಒಂದು ಕೋಣೆಗೆ ನನ್ನನ್ನು

ಕರೆಕೊಂಡು ಹೋದರೆ ಹೇಳುವೆನೆಂದನು. ರಾಮದಾಸನಾಗ ಏನು? ಕೊಲೆಗಡುಕನನ್ನು ಯಾರೂ ಇಲ್ಲದ ಕೋಣೆಗೆ ನಾನು ಕರೆಕೊಂಡು ಹೋಗಬೇಕೆ? ಹಾ! ಇವನ ಆಲೋಚನೆಯೇ! ಆಯಿತು ಬಾ, ಎಂದು ಅವನ ಕತ್ತನ್ನು ತನ್ನ ವಜ್ರಮುಷ್ಟಿಯಿಂದ ಬಲವಾಗಿ ಹಿಡಿದನು. ಆಗ ಕರಮಚಂದನು-ಕಪಟನಾಟಕದ ಸೂತ್ರಧಾರನು-ಇನ್ನು ಇವನೊಡನೆ ತಮಾಷೆ ಮಾಡಿದ್ದು ಸಾಕೆಂದು ನಾನು ನಿನ್ನ ಸಹೋದರನಲ್ಲವೆ? ಎಂದು ಹೇಳಲು ಅವನಿಗೆ ಗುರುತು ಸಿಕ್ಕಲು ಅಣ್ಣನೊಡನೆ ವೇಷಾಂತರದಿಂದ ಬರಲು ಕಾರಣವೇನು? ಎಂದು ಕೇಳಿದನು. ಆಗವನು ತಮ್ಮನೊಡನೆ ನಾವು ಏಕಾಂತ ಕೋಣೆಗೆ ಹೋಗಿ ಮಾತನಾಡುವ ಎನ್ನಲು ಅವರಿಬ್ಬರೂ ಮನೆಯೊಳಗೆ ಹೋದರು. ಅನಂತರ ಕರಮಚಂದನು ತಮ್ಮೊಡನೆ ತಾನು ಮುಂಬಾಯಿಗೆ ಹೋಗಿ ಡಾ| ರಮೇಶನೆಂದು ನಟಿಸುತಿದ್ದ ಪಿಟ್ಟನಲ್ಲಿ ಉಳಕೊಂಡದ್ದನ್ನು ಮತ್ತು ಛದ್ಮವೇಷಧಾರಿಯಾದ ವಿಜ್ಞಾನಿಯೊಡನೆ ಸಮುದ್ರತೀರಕ್ಕೆ ವಿಹಾರಕ್ಕಾಗಿ ಹೋಗಿದ್ದಾಗ ತನ್ನನ್ನು ಸಮುದ್ರಕ್ಕೆ ಬೀಳಿಸಿದ ವಿಷಯವನ್ನು ಅನಂತರ ಸಮುದ್ರದಿಂದ ಮೇಲೆ ಬರಲು ತನಗೆ ಅಸಾಧ್ಯವಾಗಿ ಸ್ಮೃತಿತಪ್ಪಿ ಬಿದ್ದಿರುವಾಗ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಗಳು ನೌಕಾ ವಿಹಾರಕ್ಕೆ ಬಂದುದರಿಂದ ಅವರು ತನ್ನನ್ನು ಮೇಲಕ್ಕೆ ತಂದು ಉಪಚರಿಸಿದರೆಂದೂ ಎಂಬುದನ್ನು ವಿವರವಾಗಿ ಹೇಳಿದನು. ರಾಮದಾಸನಿಗೆ ಲೋಬೋನ ಮಾಯದ ಬಲೆಯ ವಿಷಯ ಕೇಳಿ ಆಶ್ಚರ್ಯವಾಯಿತು. ಪತ್ತೇದಾರಿಯು ಅನಂತರ ನಾನೀಗ ಸತ್ತಿರುವೆನೆಂದು ಲೋಬೋನು ಅರಿತಿರುವುದರಿಂದ ಛದ್ಮವೇಷದಿಂದ ಬಂದಿರುವೆನೆಂದನು. ಅವನಿನ್ನು ನಾನು ಸತ್ತೆನೆಂದೇ ತಿಳಿದುದರಿಂದ ನಿರ್ಭಯನಾಗಿರಲಿಕ್ಕಿರುವನು. ಈಗ ನಾವು ಆದಷ್ಟು ಬೇಗನೆ ಅವನ ಅತ್ಯಾಚಾರವನ್ನು ಬಯಲಿಗೆಳೆಯೋಣವೆಂದನು. ಆದ್ದರಿಂದ ನೀನೀಗ ನಗರದಲ್ಲೆಲ್ಲ ನಾನು ಮರಣಹೊಂದಿದೆನೆಂದೇ ಪ್ರಚಾರ ಮಾಡೆಂದನು. ರಾಮದಾಸನು ಅನಂತರ ಯಶವಂತಸಿಂಹನು ಮಾಯವಾದ ವಿಷಯವನ್ನು ಹೇಳಲು ಕರಮಚಂದನಿಗೆ ಸುಪರಿಂಡೆಂಟನಿಗೆ ಹೇಗೆ ಅಪಾಯ ಉಂಟಾಯಿತೆಂಬುದನ್ನು ತರ್ಕಿಸಲಾಗಲಿಲ್ಲ. ಲೋಬೋ, ಪಿಟ್ಟ ಮತ್ತು ಜೋಸೆಫರು ಮುಂಬಾಯಿಯಲ್ಲಿರಲು ಯಶವಂತನನ್ನು ಅವರು ವಿಪತ್ತಿಗೆ ಗುರಿ ಮಾಡುವುದೆಂತು? ಆದರಿಂದ ಅದನ್ನು ತಿಳಿಯಲ

ಸಮರ್ಥನಾದನು.

ಕರಮುಚಂದನು ಯಾವ ದಿನ ಮುಂಬಾಯಿಂದ ಮಂಗಳೂರಿಗೆ ಛದ್ಮ ವೇಷದಿಂದ ಬಂದಿದ್ದನೋ ಆದರ ಮರು ದಿವಸ ನಗರದಲ್ಲೆಲ್ಲ ಗಲಭೆಯೋ ಗಲಭೆ. ಹೆಸರಾಂತ ಪತ್ತೆದಾರಿ ಕರಮುಚಂದನು ಯಾವುದೋ ಒಂದು ಕೇಸಿನಲ್ಲಿ ಪತ್ತೆಗಾಗಿ ಮುಂಬಾಯಿಗೆ ಹೋಗಿದ್ದವನು ಅಕಸ್ಮಾತ್ತಾಗಿ ಸಮುದ್ರಕ್ಕೆ ಬಿದ್ದು ದುರ್ಮರಣಕ್ಕೆ ತುತ್ತಾದನೆಂದು ಅವರ ಮಿತ್ರನೊಬ್ಬನು ರಾಮದಾಸನಿಗೆ ತಿಳಿಸಿರುವನು ಎಂದು ಜನರು ಮಾತನಾಡುತಿದ್ದರು ಕರಮುಚಂದನ ಅಚ್ಚುಮೆಚ್ಚಿನ ಗೆಳೆಯರು ಈ ವಾರ್ತೆಯನ್ನು ಕೇಳಿ ವ್ಯಸನಗೊಂಡು ರಾಮದಾಸನನ್ನು ಭೇಟಿ ಮಾಡಲು ಒಂದರು. ರಾಮದಾಸನು ಬಹಳ ಚತುರನಲ್ಲವೆ ? ಅವನು ಕಣ್ಣೀರು ಸುರಿಸುತ್ತಾ ತನ್ನಣ್ಣನ ಕಾಲವು ಕಳೆಯಿತು, ಎಂದು ಮರುಗುತ್ತಿರಲು ಮಿತ್ರರು ಅವನನ್ನು ಸಮಾಧಾನ ಪಡಿಸಲಾರಂಭಿಸಿದರು ಜನರೆಲ್ಲ ಕರಮುಚಂದನು ಮಡಿದಿರುವನೆಂದೇ ನಂಬಿದರು. ಲೋಚೋನ ಆಗಿನ ಹರ್ಷವನ್ನೇನೆನಲಿ! ! ! ಅನೇಕ ಕಡೆಗಳಲ್ಲಿ ಕರಮುಚಂದನು ವೃತಪಟ್ಟಿದ್ದಕ್ಕಾಗಿ ದುಃಖಸೂಚಕವಾದ ಸಭೆಗಳನ್ನೇರ್ಪಡಿಸಿ ವೃತನ ಆತ್ಮಕ್ಕೆ ಚಿರಶಾಂತಿಯುಂಟಾಗಲಿ, ಎಂದು ದೇವರನ್ನು ಬೇಡಿಕೊಂಡರು

ಕರಮುಚಂದನಿಗೆ ಮೊತ್ತಮೊದಲು ಯಶವಂತಸಿಂಹನನ್ನು ವಿಪತ್ತಿನಿಂದ ಕಾಪಾಡಬೇಕಾಗಿತ್ತು. ಆದ್ದರಿಂದವನು ಚಿಂತೆಗೊಳಗಾಗಿ ಯಶವಂತನ ಮನೆಗೆ ರಾಮದಾಸನೊಡನೆ ಛದ್ಮವೇಷದಿಂದ ಹೋದನು. ರಾಮದಾಸನು ಯಶವಂತನ ಪತ್ನಿಯೊಡನೆ ಕರಮುಚಂದನಿರುವದು ವೇಷಾಂತರದಲ್ಲಿ. ನೀನಾ ರಹಸ್ಯವನ್ನು ಬಹಿರಂಗ ಪಡಿಸಬೇಡವೆಂದನು. ಕರಮುಚಂದನು ಆವಳೊಡನೆ ಯಶವಂತನು ಇಲ್ಲಿಂದ ಎಷ್ಟು ಹೊತ್ತಿಗೆ ಹೊರಟಿದ್ದು ಮತ್ತು ಅವನೊಡನೆ ಬೇರೆ ಯಾರಾದರೂ ಆಗ ಇದ್ದರೆ? ಎಂದು ಕೇಳಲು ಆ ಸಾಧ್ವಿಯು, ಎರಡು ಮೂರು ದಿವಸಗಳ ಮೊದಲು ರಾತ್ರಿ ಎಂಟು ಗಂಟೆಗೆ ಏನೋ ಅಗತ್ಯದ ಕೆಲಸವಿದೆಯೆಂದು ಹೇಳಿ ಹೊರಟಿರುವರೆಂದೂ ಅವರೊಡನೆ ಬೇರಾರೂ ಆಗ ಇದ್ದಿಲ್ಲವೆಂದೂ ಹೇಳಿದಳು ಪತ್ತೆದಾರಿಯಾಗ ನಿಮ್ಮ ಯಜಮಾನರ ಪ್ರೈವೆಟ್ ರೂಮನ್ನು ಒಂದು ಬಾರಿ ನನಗೆ ನೋಡಲು ಸಮ್ಮತಿ ಕೊಡುವಿರಾ ? ಎಂದು ಕೇಳಲು

ಆ ಅಬಲೆಯು ಹಿತಚಿಂತಕರಾದ ನೀವಾ ಕೋಣೆಯನ್ನು ನೋಡಲು ಆತಂಕವೇನೂ ಇಲ್ಲವೆಂದು ಹೇಳಿ ಆ ಪತ್ತೆದಾರಿ ಸಹೋದರರನ್ನು ಖಾಸಗಿ ಕೋಣೆಗೆ ಕರೆದುಕೊಂಡು ಹೋದಳು. ಆ ಕೋಣೆಯು ಸಾಧಾರಣ ದೊಡ್ಡದಾಗಿಯೇ ಇತ್ತು. ನೆಲವು ಕನ್ನಡಿಯಂತೆ ಫಳಫಳನೆ ಹೊಳೆ ಹೊಳೆದು ಪ್ರತಿಬಿಂಬವನ್ನುಂಟು ಮಾಡುತಿತ್ತು. ಒಂದು ಟೇಬಲ್ ಎರಡು ಕುರ್ಚಿಗಳಲ್ಲದೆ ಒಂದು ಕಪಾಟು ಸಹಾ ಆ ಕೊಠಡಿಯಲ್ಲಿದ್ದಿತು. ಯಶವಂತನ ಸತಿಯ ಹತ್ತಿರದಿಂದ ಬೀಗದ ಕೈ ಪಡೆದು ಪತ್ತೆದಾರಿಯು ಕಪಾಟಿನ ಬಾಗಿಲು ತೆರೆದನು ಅದರಲ್ಲಿ ಅನೇಕ ಪುಸ್ತಕಗಳು ಮತ್ತು ನಿತ್ಯದ ಉಪಯೋಗಕ್ಕೆ ಬೇಕಾದ ಕೆಲವು ಸಾಮಗ್ರಿಗಳಿದ್ದುವಷ್ಟೆ! ಅನಂತರ ಅವನು ಮೇಜಿನ ಮೇಲಿರುವ ಪತ್ರಿಕೆಗಳನ್ನು ತೆಗೆದು ಅಲ್ಲಿ ಬಿದ್ದಿರುವ ಪತ್ರ ಗಳನ್ನು ಪರೀಕ್ಷಿಸಿನೋಡಿದನು, ಆದರೆ ಅಲ್ಲಿ ಒಂದೆರಡು "ಆಫೀಸ್"ಗೆ ಸಂಬಂಧಪಟ್ಟ ಪತ್ರಗಳಿದ್ದುವಲ್ಲದೆ ಬೇರೇನೂ ಇರಲಿಲ್ಲ. ಅನಂತರ ಡ್ರಾವರ್ ತೆಗೆದು ನೋಡಲು ಮಡಚಿ ಇಡಲ್ಪಟ್ಟ ಒಂದು ಪತ್ರವನ್ನು ಕಂಡು ಅದನ್ನು ತೆಗೆದು ನೋಡಿದನು ಅದರಲ್ಲೀ ರೀತಿಯಿತ್ತು:—

'ನಾನು ಈ ದಿನ ನನ್ನ ಪ್ರಿಯ ಕುವರಿಯನ್ನು ನೀಚರು ಬಂಧನ ದಲ್ಲಿಟ್ಟ ಸ್ವಿಚ್‌ನ ಮನೆಗೆ ಹೋಗಿ ಅವರ ಗುಪ್ತ ರಹಸ್ಯಗಳನ್ನು ಬಯಲಿ ಗೆಳೆಯುವೆನು' ಎಂದು ಮಾತ್ರವಿದ್ದಿತಷ್ಟೆ! ಯಶವಂತನು ಸ್ವಿಚ್‌ನ ಮನೆಗೆ ಹೋಗಿ ಅಲ್ಲಿ ಯಾರೂ ಇಲ್ಲವೆಂದು ಖಚಿತಪಟ್ಟು ಭಯಂಕರವಾದ ಸ್ವಿಚ್‌ನ್ನೊತ್ತಲು ಕಡೆಗೇನೋ ಅಪಾಯವುಂಟಾಗಿರಬಹುದು ಎಂದವನು ತರ್ಕಿಸಿ, ಸುಪರಿಂಡೆಂಟ್‌ನ ಪತ್ನಿಯೊಡನೆ ಪತ್ರದಲ್ಲಿದ್ದ ವಿಷಯವನ್ನು ಹೇಳಿ ತಾನಿಲ್ಲಿಗೆ ಬಂದ ಸಂಗತಿಯನ್ನಾರೊಡನೆಯೂ ಹೇಳಬಾರದೆಂದು ಹೇಳಿ ಅಲ್ಲಿಂದ ತಮ್ಮನೊಡನೆ ಹೊರಟು ಹೋದನು. ವಾಚಕ ಶ್ರೇಷ್ಠರೆ! ಪತ್ತೆ ದಾರಿಯು ಯಶವಂತನ ಮನೆಯಿಂದ ತನ್ನ ಮನೆಗೆ ಹೋಗಿ ಒಬ್ಬ ಪಾದ್ರಿ ಯಂತೆ ಪೋಷಾಕುಗಳನ್ನು ತೊಟ್ಟುಕೊಂಡು ಅಲೆಯಲಾರಂಭಿಸಿದನು. ಪಟ್ಟಣಿಗರು ತಾನು ಮಡಿದಿರುವೆನೆಂದು ತಿಳಿದುಕೊಂಡಿರುವರೆಂದು ಅವರ ಮಾತುಗಳಿಂದ ತಿಳಿದು, ಮನದೊಳಗೆ ತನ್ನ ಕಪಟವರ್ತನೆಯು ಸಫಲ ವಾದುದಕ್ಕೆ ನಕ್ಕನು.

ವಾಚಕರೆ! ಇತ್ತಲಾಗಿ ಕರಮುಚಂದನು ಛದ್ಮವೇಷದಿಂದ ವಾಸಿಸುತ್ತಿರಲು ಲೋಬೋನು ಸಂತೋಷದಿಂದ ತನ್ನ ಮನೆಯಲ್ಲಿದ್ದನು. ಅವನು ಮುಂಬಾಯಿಯಿಂದ ಬಂದ ದಿನ ರಾತ್ರಿ ವಿಶ್ರಾಂತಿಭವನದಲ್ಲಾದ ವಿಜೃಂಭಣೆಯನ್ನೇನೆನ್ನಲಿ! ನೆಲಮಾಳಿಗೆಯ ಕೋಣೆಯೊಂದರಲ್ಲಿ ವೃತ್ತಾಕಾರದ ಮೇಜಿನ ಸುತ್ತಲೂ ಕುರ್ಚಿಗಳಲ್ಲಿ ಲೋಬೋ, ಪಿಟ್ಟ ಮತ್ತೂ ಜೋಸೆಫ್ ಅಲ್ಲದೆ ಅಲ್ಲಿನ ಮೇನೇಜರ್ ಮಾಧವ ಇವರು ಕುಳಿತುಕೊಂಡು ಮದ್ಯಪಾನ ಮಾಡುತ್ತಾ ಹರಟೆ ಹೊಡೆದು ಪೈಶಾಚಿಕ ನಗುನಕ್ಕು ಸಂತೋಷ ಸಾಗರದಲ್ಲಿ ವಿಹರಿಸುತ್ತಿದ್ದರು. ಮಧುರವಾದ ತಿಂಡಿ ತಿನಸುಗಳನ್ನು ತಿನ್ನುತ್ತಾ ವೈನ್ ಕುಡಿದು ಮತ್ತರಾದ ಆ ನೀಚರು ಕರಮುಚಂದನು ಸತ್ತಿರುವನೆಂದು ಆನಂದಿತರಾಗಿ ಇನ್ನು ಈ ಲೋಕದಲ್ಲಿ ಆದಾರಿಂದಲೂ ತಮಗೆ ಅಪಾಯ ಉಂಟಾಗಲಾರದೆಂದು ಸಂತಸಗೊಂಡಿದ್ದರು ಸಾಧಾರಣ ರಾತ್ರಿ ಹತ್ತುಗಂಟೆಯಾಗಲು ಲೋಬೋನು ತನ್ನ ಮನೆಗೆ ಬಂದು ಮಲಗಿದನು. ಅರ್ಧ ಗಂಟೆಯಾಗಲು ತಾನು ಚಮತ್ಕಾರವಾಗಿ ನಿರ್ಮಿಸಿದ ಸ್ವಿಚ್‌ನ ಮನೆಗೆ ಹೋಗಬೇಕೆಂದು ಉದ್ಯಾನಕ್ಕೆ ಹೋಗಿ ಮಂಟಪದ ಹತ್ತಿರವಿದ್ದ ಹೂವಿನ ಪಾತ್ರೆಯನ್ನು ಬದಿಗೆ ಸರಿಸಿ ಕೊಂಡಿಯನ್ನು ತಿರುಗಿಸಿ ಆ ದಾರಿಯಲ್ಲಿ ಕೆಳಗಿಳಿದು ಸ್ವಿಚ್‌ನ ಮನೆಗೆ ಹೋದನು. ಅಲ್ಲಿನ ಕೊಠಡಿಗಳಲ್ಲಿ ಅಸ್ತವ್ಯಸ್ತವಾಗಿ ಬಿದ್ದಿರುವ ಪತ್ರಗಳನ್ನು ಕಂಡ ಅವನು ಯಾರೋ ಬಂದು ಇಲ್ಲಿ ಅನರ್ಥವನ್ನುಂಟು ಮಾಡಿರುವರೆಂದು ತರ್ಕಿಸಿ ಸಖೇದಾಶ್ಚರ್ಯಗೊಂಡನು. ಯಾಕೆಂದರೆ ಕರಮುಚಂದನು ಮುಂಬಾಯಿಯಲ್ಲಿ ತನ್ನ ಕಾರಸ್ಥಾನದಿಂದ ಮೃತಪಟ್ಟಿರಲು ಮತ್ತಾವ ಧೂರ್ತನಿಲ್ಲಿಗೆ ಬಂದಿರಬಹುದು? ಎಂದರಿಯದೆ ಚಿಂತೆಗೊಳಗಾದನು ಎಲ್ಲಿಯಾದರೂ ಆ ನೀಚನ ತಮ್ಮನಾದ ರಾಮದಾಸನು ಇಲ್ಲಿಗೆ ಬಂದಿರಬಹುದೆ? ಎಂದಾಲೋಚಿಸುತ್ತಾ ಇರಲು ಫಕ್ಕನೆ ಪೋಲೀಸ್ ಸುಪರಿಡೆಂಟ್ ಯಶವಂತ ಸಿಂಪನು ಕಾಣೆಯಾಗಿರುವನೆಂದು ಕೇಳಿದ ಸುದ್ದಿ ಲೋಬೋನಿಗೀಗ ಜ್ಞಾಪಕಕ್ಕೆ ಬಂದಿತು. ಅದ್ದರಿಂದವನೇ ಇಲ್ಲಿ ಸಿಕ್ಕಿ ಬಿದ್ದಿರಬಹುದೆಂದು ಸಂದೇಹಪಟ್ಟು ಅನೇಕ ಸ್ವಿಚ್‌ಗಳಿರುವ ಕೋಣೆಗೆ ಹೋಗಿ ಉತ್ತರದಿಕ್ಕಿನ ಗೋಡೆಯಲ್ಲಿರುವ ಸಣ್ಣದಾದೊಂದು ಸ್ವಿಚ್‌ನ್ನು ಒತ್ತಿದನು. ಅಷ್ಟರಲ್ಲಿ ಆ ಗೋಡೆ ಸ್ವಲ್ಪ ದೂರ ಸರಿದು ಕನ್ನಡಿಯುಂಟಾಯಿತು. ಅದರಲ್ಲವನು

ನೋಡುತ್ತಿರಲು ಅತಿ ಆಳವಾದ ನೆಲದಡಿಯಲ್ಲಿರುವ ಕೋಣೆಯಲ್ಲಿ ವ್ಯಕ್ತಿಯೋರ್ವನು ನರಳುತ್ತಾ ಬಿದ್ದಿರುವ ದೃಶ್ಯವನ್ನು ಕಂಡು ತ್ವರಿತದಲ್ಲಿಯೇ ತುರಂಗವೇಗದಲ್ಲಿ ಕೆಲವು ಕೋಣೆಗಳನ್ನೆಲ್ಲ ದಾಟಿ ಅದೊಂದು ಕೊಠಡಿಗೆ ಬಂದನು ಲೋಬೋನು ಯಾವ ರೀತಿಯಲ್ಲಿ ಬಹಳ ವೇಗವಾಗಿ ಸ್ವಿಚ್‍ಗಳನ್ನೊತ್ತಿ ಮುಂದುವರಿದನೆಂದು ವಿವರಿಸಲು ಇದು ಸಮಯವಲ್ಲವು. ಆ ಕ್ರೂರ ಮನಸ್ಸಿನ ಅಮಾನುಷ ವ್ಯಕ್ತಿಯಾದ ನೀಚ ವಿಜ್ಞಾನಿಯು ಮುಂದೇನು ಮಾಡಿದನೆಂದು ನೋಡುವ

ಲೋಬೋನು ಕಡೆಗೆ ಬಂದ ಕೊಠಡಿಯಲ್ಲೊಂದು ಮಂಚವಿದ್ದಿತು. ಅವನಾ ಮಂಚವನ್ನಲ್ಲಿಂದ ಸರಿಸಿ ಬೂಟ್ಸಿನಿಂದ ಬಲವಾಗಿ ನೆಲಕ್ಕೆ ತುಳಿಯಲು ಇಡೀ ಆ ಕೋಣೆಯೇ ಕಂಪಿಸಿ ಢಬ....ಢಬ ಎಂಬ ನಾದವು ಪ್ರತಿಧ್ವನಿಗೊಂಡು ಅಲ್ಲೊಂದು ಕಿಟಿಕಿಯುಂಟಾಯಿತು. ಅದರ ಮೇಲ್ಬದಿಯಲ್ಲಿ ಗಾಜಿನ ಹಾಸ ನಲಿಗೆ ಇದ್ದಿತು ಅದರಲ್ಲಿ ಮುಖವಿಟ್ಟು ನೆಲದಲ್ಲಿ ಕುಳಿತು ಅವನು ಕೆಳಗೆ ನೋಡಲಾರಂಭಿಸಿದನು ವಾಚಕ ವೃಂದ! ಯಶವಂತನು ಅಕಸ್ಮಾತ್ತಾಗಿ ಅವನ ಕೃತ್ಯದಿಂದಲೇ ನೆಲಕುಸಿದು ನೆಲದಡಿಯಲ್ಲಿನ ಮಲಿನವಾದ ಕೋಣೆಯಲ್ಲೇ ಬಿದ್ದು ಆಹಾರ ವ್ಯವಹಾರವಿಲ್ಲದೆ ಕಷ್ಟಪಡುತ್ತಿರುವಾಗ ಅವನ ಆಗಿನ ದುರವಸ್ಥೆಯನ್ನು ನಾವು ವಿಚಾರಿಸದೆ ಎತ್ತಲೋ ಹೋಗಿಬಿಟ್ಟೆವಲ್ಲಾ! ಆಗಲಿ. ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ! ಇನ್ನಾದರೂ ಅವನ ಕಡೆಗೆ ಗಮನವನ್ನಿಯುವಾ. ಇರಲಿ. ಯಶವಂತನು ಕಾರ್ಗತ್ತಲೆಯಿಂದ ನಿಬಿಡವಾದಾ ಕೋಣೆಯಲ್ಲಿ ಏಕಾಕಿಯಾಗಿ ಚಿಂತಿಸುತ್ತಾ ಕೆಲವು ಸಮಯ ಕಳೆದರೂ ಏನೂ ಪ್ರಯೋಜನ ಉಂಟಾಗಲಿಲ್ಲ. ಒಂದು ದಿನ ರಾತ್ರಿ ಥಕ್ಕನೆ ಅವನಿಗೆ ತಾನು ಮನೆಯಿಂದ ಇಲ್ಲಿಗೆ ಬರುವಾಗ ಆ ವಿಷಯವನ್ನು ಬರೆದ ಕಾಗದವನ್ನು ಮೇಜಿನ ಡ್ರವರ್‌ನಲ್ಲಿಟ್ಟ ಸಂಗತಿ ನೆನಪಾಗಲು ತನಗಿನ್ನು ಬ್ರಹ್ಮನು ಬರೆದ ಆಯುಸ್ಸು ಇದ್ದರೆ ಮುಂಬೈಗೆ ಹೋದ ಕರಮಚಂದನು ನಾನು ಕಾಣೆಯಾಗಿರುವೆನೆಂದು ಕೇಳಿ ನನ್ನ ಮನೆಗೆ ಬಂದು ಮೇಜನ್ನು ಪರೀಕ್ಷಿಸಿವಾಗ ಡ್ರವರ್‌ನಲ್ಲಿದ್ದ ಪತ್ರಸಿಕ್ಕಿದರೆ ತನ್ನ ಉದ್ಧಾರವಾದಂತೆಯೇ ಎಂದು ಬಗೆದು ದೇವರನ್ನು ನೆನೆಯುತ್ತಾ ಸುಮ್ಮನೆ ಮಲಗಿಕೊಂಡಿದ್ದನು. ಲೋಬೋನು ಈಗ ಬಂದು ಎಷ್ಟು ಭಯಂಕರವಾದ ಶಬ್ದವನ್ನುಂಟು ಮಾಡಿದರೂ ಅತನಿಗೆ ಅರಿವಾಗಲಿಲ್ಲ.

ಕಡೆಗೆ ವಿಜ್ಞಾನಿಯು ಲೈಟಿನ ಪ್ರಕಾಶ ಚೆನ್ನಾಗಿ ಕೆಳಗೆ ಬೀಳುವಂತೆ ಮಾಡಲು ಬೆಳಕೆಲ್ಲಿಂದ ಬಂತೆಂದವನು ಮೇಲೆ ನೋಡಲು ಅವಸಿದ್ಧ ಕೋಣೆಯ ಮೇಲಟ್ಟದಲ್ಲಿರುವ ಕಿಟಿಕಿಯಿಂದ ಬೆಳಕು ಬರುತ್ತಿದೆ ಯೆಂದು ಮನಗಂಡನು. ಆಗಲೇ ಅವನಿಗೆ ಲೋಬೋನ ಸುಂದರ ಕಾಯವು ಕಾಣಿಸಿತು. ಗುರುತು ಸಿಕ್ಕಿದರೂ ಸಿಕ್ಕದವರಂತೆ ಯಶವಂತ ಸಿಂಹನು ಮೇಲಿದ್ದವರಾರು? ಎಂದು ಸ್ವರವು ಕ್ಷೀಣವಾಗಿದ್ದರೂ ಗಟ್ಟಿಯಾಗಿ ಕೇಳಿದನು. ಆಗ ಲೋಬೋನು ಸುಪರಿಡೆಂಟರೆ! ನಾನೇ ನಿಮ್ಮ ಚಿರಪರಿ ಚಿತ "ಚೋರ ಸಾರ್ವಭೌಮ." ಈಗ ನಿಮ್ಮ ಕಣ್ಣೆದುರಿನಲ್ಲಿರುವೆನು. ನಿಮಗೆ ತೋರಿದ ಶಿಕ್ಷೆಯನ್ನು ವಿಧಿಸಿರಿ ಎಂದು ಮಂದಹಾಸದಿಂದ ಹೇಳಿ ಅಂದು ಕರಮಚಂದನನ್ನು ಮುಂಬಾಯಿ ಸಮುದ್ರ ತೀರದಲ್ಲಿ ಸಾಯಂಕಾಲ ಸಮಯದಲ್ಲಿ ಜಲಧಿಗೆ ನೂಕಿಹಾಕಿ ಇನ್ನವನು ಸತ್ತನೆಂದು ತಿಳಿದು ಪಿಶಾಚಿ ಯಂತೆ ನಕ್ಕಂತೆ ಈಗಲೂ ಸಿಡಿಲಿನಂತೆ ಭಯಂಕರವಾದಾ ಪೈಶಾಚಿಕ ನಗು ವನ್ನು ನಕ್ಕು ಕುಣಿದು ಯಶವಂತನನ್ನು ಪರಿಹಾಸ್ಯ ಮಾಡಿದನು; ಆದರೆ ಅವನಾಗ ಆ ದುಃಸ್ಥಿತಿಯಲ್ಲೇನು ಮಾಡಲಾಪನು? ಅನಂತರ ಲೋಬೋನು ಯಾವುದೋ ಒಂದು ಪೇಪರನ್ನು ಗಾಜಿನ ಹಲಗೆಯನ್ನು ಬದಿಗೆ ಸರಿಸಿ ಕಿಟಿಕಿಯಿಂದ ಕೆಳಗೆ ಬಿಸಾಟಿದನು. ಯಶವಂತನು ಪೇಪರಿನಲ್ಲೇನಿರುವು ದೆಂದು ನೋಡಲು ತವಕಪಟ್ಟು ಪತ್ರಿಕೆಯನ್ನು ತೆಗೆಯಲು ನೀಚನಾದರೂ ಲೋಬೋನಾಗ ವಿದ್ಯುತ್ ಪ್ರಕಾಶವು ಬಹಳ ಹೆಚ್ಚಾಗಿ ಅವನಿದ್ದಲ್ಲಿಗೆ ಬೀಳುವಂತೆ ಮಾಡಿದನು ಆ ಪತ್ರಿಕೆಯನ್ನೋದಿ ಯಶವಂತಸಿಂಹನು ದಿಗ್ಭ್ರಾಂತನಾಗಿ ಬವಳಿ ಬಂದು ಅಲ್ಲಿಯೇ ಬಿದ್ದನು. ಓದುಗರಿಗೆ ಪತ್ರಿಕೆ ಯಲ್ಲಿ ಅವನ ಮೇಲೆ ಅಷ್ಟು ದುಷ್ಪರಿಣಾಮ ಮಾಡುವ ಅದಾವ ಗಹನ ವಿಚಾರವಿದ್ದಿರಬಹುದು? ಎಂಬ ಶಂಕೆಯು ಸಹಜವಾಗಿಯೇ ಉಂಟಾಗ ಬಹುದಾದ್ದರಿಂದ ಮನಃಶ್ಶಾಂತಿಗಾಗಿ ಆ ಸಂಗತಿಯನ್ನು ಸಂಕ್ಷೇಪವಾಗಿ ಕೊಡಲಾಗಿದೆ.

ಮಂಗಳೂರಿನಲ್ಲಿ ಸುಪ್ರಸಿದ್ಧ ಪತ್ತೆದಾರಿಗಳೆಂದು ಮಾತ್ರ ಹೆಸರು ಪಡೆದುದಲ್ಲದೆ ಇಡೀ ಭಾರತದಲ್ಲಿಯೇ ತುಬ್ಬುಮಾಡಿ ಖ್ಯಾತಿಪಟ್ಟ ಶ್ರೀಮಾನ್ ಕರಮಚಂದ್ ಇವರು ಮುಂಬಾಯಿಗೆ ಯಾವುದೋ ಒಂದು ಖೂನಿಯತ ಪಾಸಣೆಗಾಗಿ ಹೋಗಿದ್ದವರೂ ಅಕಸ್ಮಾತ್ತಾಗಿ ಯಾವರೀತಿಯಲ್ಲಿಯೋ

ಸಮುದ್ರದಲ್ಲಿ ಬಿದ್ದು ಗತಾಸುವಾಗಿರುವನು, 'ಮುಂಬಯಿ ಪ್ರೈಮ್ಸ ಸಂಪಾದಕರಿಂದ' ಎಂದಿದ್ದಿತು ಆದಸ್ಮೋದಿ ಮೇಧಾವಿಯಾದ ಕರಮಚಂದನು ಅಕಸ್ಮಾತ್ತಾಗಿ ದುರ್ಮರಣಕ್ಕೆ ತುತ್ತಾದನಲ್ಲಾ! ಎಂಬ ವ್ಯಸನದಿಂದಲೂ ತನ್ನನ್ನಿನ್ನು ಯಾರೂ ಇಲ್ಲಿಂದ ಉದ್ಧರಿಸುವವರಿಲ್ಲವೆಂದೂ ವ್ಯಸನಪಟ್ಟನು. ರಾಮದಾಸನು ಸಹೋದರನೊಡನೆ ಪತ್ರಿಗೆ ತೊಡಗಿದ್ದರೂ ಅವನಿನ್ನೂ ಬಾಲಕನಲ್ಲದೆ ಸಹೋದರನ ಮರಣದಿಂದಲಾಗಿ ಚಿಂತೆಗೊಂಡು ಬೇರಾವ ಕೆಲಸಕ್ಕೆ ಸಮ್ಯ ಮನಸ್ಸನ್ನು ಕೊಡನೆಂದು ಚಿಂತಿಸಿ ಬವಳಿ ಬಂದು ಬಿದ್ದನು. ಅವನು ಸ್ಮೃತಿತಪ್ಪಿ ಅಚೇತನನಾಗಿ ಎಷ್ಟರವರೆಗೆ ಆ ರೀತಿಯಿದ್ದನೆಂದು ನಮಗೆ ಚೆನ್ನಾಗಿ ಅರಿಯದಿದ್ದರೂ ಹೆಚ್ಚು ಸಮಯ ಸ್ಮೃತಿಯಿಲ್ಲದೇ ಇದ್ದನೆಂದು ನಿಸ್ಸಂದೇಹವಾಗಿ ಹೇಳಬಹುದು. ಲೋಬೋನು ಪುನಃ ಯಾವುದೋ ಒಂದು ಸ್ವಿಚ್‌ನ್ನೊತ್ತಲು ಕಿಟಕಿಯು ಮಾಯವಾಗಿ ಮೊದಲಿನಂತಾಯಿತು. ಅಲ್ಲಿಂದವನೆಲ್ಲಿಗೆ ಹೋದನೆಂಬದು ನಮಗೆ ಹೇಳಲು ಸಾಧ್ಯವಿಲ್ಲ.

● ● ○ ● ●

ಕರಮಚಂದನು ಯಶವಂತ ಸಿಂಹನ ಮನೆಯಿಂದ ರಾಮದಾಸನೊಡನೆ ತನ್ನ ಕದ್ರಿಯಲ್ಲಿನ ಮನೆಗೆ ಬಂದು ಖಾಸಗಿ ಕೋಣೆಗೆ ಹೋಗಲು ತಮ್ಮನೊಡನೆ ಮೇಲ್ಮಾಳಿಗೆಗೆ ಹೋದನು ಒಂದು ಸಲ ಆಗಲೂ ವೇಷಾಂತರದಲ್ಲಿದ್ದ ಕರಮಚಂದನು ಕೆಳಗಿಳಿದು ಬಂದು ಅಡಿಗೆ ಕೋಣೆಯೊಳಗೆ ಹೋಗಲು ಸೇವಕ ಲಿಂಗಪ್ಪನಿಗೆ ಬಹಳ ಆಶ್ಚರ್ಯವಾಯಿತು. ಪರಊರಿನವನೊಬ್ಬನು ತಾನೊಬ್ಬನೇ ಯಾರೊಡನೆಯೂ ಕೇಳದೆ ಮನೆಯಲ್ಲಿ ಸ್ವೇಚ್ಛೆಯಿಂದ ವರ್ತಿಸುವುದನ್ನು ಕಂಡು ದಿಗಿಲುಗೊಂಡು ರಾಮದಾಸನಿದ್ದಲ್ಲಿಗೆ ಹೋಗಿ ಛದ್ಮವೇಷದ ಕರಮಚಂದನನ್ನು ಅವನಾರೆಂದು ಕೇಳಲು ಆದಕ್ಕಾ ಕುಶಾಗ್ರಬುದ್ಧಿಯು ರಾಮದಾಸನು ನಿಜ ಸಂಗತಿ ಹೇಳಿದರೆ ಸಂತೋಷದಿಂದ ಇವನು ನಗರದಲ್ಲೆಲ್ಲಿ ನಿಜಾಂಶವನ್ನು ಬಹಿರಂಗಪಡಿಸಬೇಡವೆಂದರೂ ಡಂಗುರ ಹೊಡೆಯಿಸಿಯಾನು. ಆದ್ದರಿಂದ ನಿಜಾಂಶವನ್ನು ಮರೆಮಾಡಿ ಅವನೊಡನೆ "ಅವರು ನಮ್ಮ ಸೋದರ ಮಾವ" ಎನ್ನಲು ಲಿಂಗಪ್ಪನು ಅವನ ಮಾತನ್ನು ನಂಬಿ ಅಲ್ಲಿಂದ ಹೊರಡಲು ಕರಮಚಂದನು ಮೊದಲಿದ್ದಲ್ಲಿಗೆ ಬರಲು ರಾಮದಾಸನು ಲಿಂಗಪ್ಪನ ಪ್ರಶ್ನೆಯನ್ನೂ

ಅದಕ್ಕೆ ತಾನು ಕೊಟ್ಟ ಉತ್ತರವನ್ನು ಹೇಳಲು ಅವನು ಸ್ಮಿತಮುಖದಿಂದ ಅದೊಳ್ಳೇ ಉಪಾಯವೆಂದನು ರಾಮದಾಸನು ಲಿಂಗಪ್ಪನೊಡನೆ ಹೇಳಿದಂತೆ ನಾವಿನ್ನು ಅವನನ್ನು "ರಾಮದಾಸನ ಸೋದರ ಮಾವ" ಎಂದು ಹೇಳಿದರೆ ಓದುಗರ ಆಕ್ಷೇಪವಿಲ್ಲವಷ್ಟೆ! ಅನೇಕ ನಗರವಾಸಿಗಳು ರಾಮದಾಸನನ್ನು ಕಾಣಲು ಬಂದಾಗ ಅವನ ಸೋದರ ಮಾವನನ್ನು ಪರಿಚಯ ಮಾಡಿಕೊಂಡರು. ಅವನು ಬಹಳ ಬೇಗನೆ ಆ ಹೆಸರಿನಲ್ಲಿ ಅಲ್ಲಿನವರ ಚಿರಪರಿಚಿತನಂತಾದನು ಸಾಯಂಕಾಲ ನಾಲ್ಕು ಗಂಟೆಗೆ ರಾಮದಾಸನೂ ಅವನ ಸೋದರ ಮಾವನೂ ಬಾಪಟಿಗುಡ್ಡೆಗೆ ಅಲ್ಲಿನ ಕೃತಕ ಸೌಂದರ್ಯವನ್ನು ನೋಡಲು ಹೋಗಿದ್ದರು. ಎತ್ತರವಾದ ಬತ್ತದ ರಾಶಿಯಂತಹ ಆ ಗುಡ್ಡೆಯು ಬಹಳ ರಮಣೀಯವಾಗಿ ಶೋಭಿಸುತಿತ್ತು. ಪೂರ್ವಕಾಲದಲ್ಲಿ ಟಿಪ್ಪುಸುಲ್ತಾನನಿಂದ ಕಟ್ಟಿಸಲ್ಪಟ್ಟ ಪ್ರಾರ್ಥನಾ ಮಂದಿರದ ವಿಷಯವನ್ನು ರಾಮದಾಸನು ಅಪರೂಪವಾಗಿ ಬಂದಿದ್ದ ತನ್ನ ಸೋದರ ಮಾವನಿಗೆ ಹೇಳುತಿದ್ದನು. ಅಲ್ಲೊಂದು ದೀಪಸ್ತಂಭವಿತ್ತು. ಅದರಲ್ಲಿನ ದೀಪವನ್ನು ಕಂಡು ಸಮುದ್ರದಲ್ಲಿ ಯಾನಮಾಡುವ ನಾವಿಕರು ದಡಕ್ಕೆ ಸಮೀಪ ಹಡಗುಗಳನ್ನು ತರುತಿದ್ದರು. ಅಲ್ಲೊಂದು 'ಮುನ್ಸಿಪಲ್ ಲೈಬ್ರೆರಿ' ಇದ್ದಿತು. ಅದರಲ್ಲಿ ಹೆಸರಾಂತ ಲೇಖಕರು ಬರೆದ ಕಥೆ-ಕಾದಂಬರಿ ಕವನ ಸಾಹಿತ್ಯ ನಾಟಕಗಳಲ್ಲದೆ ಅನೇಕ ವಾರ್ತಾ ಪತ್ರಿಕೆಗಳೂ ಇದ್ದುವು. ಅವುಗಳನ್ನೆಲ್ಲ ಸಂದರ್ಶಿಸಿ ಬಳಿಯ ಹೂದೋಟದಲ್ಲಿ ಮಾವನೊಡನೆ ರಾಮದಾಸನು ತಿರುಗಾಡಲಾರಂಭಿಸಿದನು. ಅಲ್ಲಿರುವ ಅನೇಕ ಶಿಲೆಕಲ್ಲಿನ ಆಸನಗಳಲ್ಲಿ ಮಹನೀಯರನೇಕರು ಕುಳಿತುಕೊಂಡು 'ರೇಡಿಯೊ' ಕೇಳುತಿದ್ದರು. ಅನೇಕ ಮರಗಳ ನೆರಳು ಅಲ್ಲಿ ಬಿದ್ದಿದ್ದಿತು. ಇನ್ನು ಕೆಲವು ಹೂಗಿಡಗಳು ಹೂ ಬಿಟ್ಟು ತಳತಳಿಸಿ ಸುಗಂಧ ಬೀರುತಿದ್ದುವು. ಅಲ್ಲಿ ಆಕರ್ಷಣವನ್ನುಂಟು ಮಾಡಿ ಪ್ರೇಕ್ಷಕರ ಮನಸೆಳೆಯುವ ಚಿತ್ರವಿಚಿತ್ರವಾದ ಅನೇಕ ಲತಾಬಳ್ಳಿಗಳು ಕಬ್ಬಿಣದ ಸರಿಗೆಯ ಮೂಲಕ ಕೃತಕ ಮಂಟಪಕ್ಕೇರಿದ್ದುವು ಮನದಣಿವಂತೆ ಅಲ್ಲಿನ ಬಾಹ್ಯ ಸೌಂದರ್ಯವನ್ನು ನೋಡಿ ಅವರಿಬ್ಬರೂ ಆನಂದಿತರಾಗಿ ತಮ್ಮಷ್ಟಕ್ಕೆ ಮರದಡಿಯಲ್ಲಿ ಕುಳಿತುಕೊಂಡಿದ್ದರು

ವಾಚಕರೆ! ಸಿಂಹವನ್ನು ಹೇಗಾದರೂ ಯುಕ್ತಿ ಪ್ರಯುಕ್ತಿಗಳಿಂದ ನಾಶಪಡಿಸಿಯಾಯಿತು. ಇನ್ನು ಸಿಂಹದ ಮರಿಯನ್ನು ನಾಶಪಡಿಸಬೇಕಷ್ಟೆ?

ಎಂದು ಲೋಬೋ ಯಾವಾಗಲೂ ಚಿಂತಿಸುತಲಿದ್ದನು. ಆದಕ್ಕಾಗಿ ಅವನು ಬಹಳ ತೀಕ್ಷ್ಣವಾದ ವಿಷದಿಂದ ಕೂಡಿದ, ಆದರೆ ಪರಿಮಳಯುಕ್ತವಾದ ಒಂದು ದ್ರಾವಕವನ್ನು ತಯಾರಿಸಿದನು. ರಾಮದಾಸನು ಬಾಲಕನಾದುದ ರಿಂದವನನ್ನು ವಂಚಿಸಬಹುದು ಎಂದು ಅವನ ದುರಾಲೋಚನೆಯಾಗಿತ್ತು. ಈ ದಿನ ಆ ನೀಚ ವಿಜ್ಞಾನಿಯು ಮದ್ದು ಮಾರುವವನ ವೇಷ ತೊಟ್ಟು ಕೊಂಡು ಪೆಟ್ಟಿಗೆಯೊಂದರಲ್ಲಿ ಕೆಲವು ಮದ್ದುಗಳನ್ನು ತೆಗೆದುಕೊಂಡು ಬೀದಿ ಗಳಲ್ಲಿ ಅಲೆಯುತ್ತಾ ಕಡೆಗೆ ಕದ್ರಿಗೆ ಬಂದು ರಾಮದಾಸನ ಮನೆಗೆ ತಲುಪಿ ಯಜಮಾನರಿರುವರೆ? ಎಂದು ಕೇಳಿದಾಗ ಆಗ ಕೆಲಸದಲ್ಲಿದ್ದ ಲಿಂಗಪ್ಪನು ಯಾರೋ ಬಂದಿರುವರೆಂದು ಹೊರಗೆ ಬಂದ. ನೋಡಲು ಮದ್ದುಮಾರುವವ ನನ್ನು ಕಂಡು ಅವರಿಲ್ಲವೆಂದನು. ಆಗ ಆ ಮದ್ದುಮಾರುವವನು ಅವ ರೆಲ್ಲಿಗೆ ಹೋಗಿರುವರು? ಎಂದು ಕೇಳಲು ಲಿಂಗಪ್ಪನು ವಿಹಾರಕ್ಕಾಗಿ ಬಾವುಟೆಗುಡ್ಡೆಗೆ ಹೋಗಿರುವರೆಂದನು. ಅನಂತರಲ್ಲಿಂದ ಅವನು ಬಾವುಟೆ ಗುಡ್ಡೆಗೆ ಬಂದು ಅಚೀಚೆ ತಿರುಗಾಡುತ್ತಾ ತನ್ನಲ್ಲಿರುವ ಔಷಧಿಗಳ ವಿಷಯವಾಗಿ ಪ್ರಚಾರಮಾಡುತ್ತಲೂ ಕೆಲವರಿಗೆ ಮದ್ದುಕೊಡುತ್ತಲೂ ರಾಮದಾಸ ಮತ್ತೂ ಅವನ ಸೋದರಮಾವ ಕುಳಿತಲ್ಲಿಗೆ ಬಂದನು. ಅವನು ತನ್ನಲ್ಲಿರುವ ಔಷಧಿಗಳ ಪ್ರಶಂಸೆಮಾಡುತ್ತಿರಲು ರಾಮದಾಸನು ತಲೆ ನೋವಿಗೇನಾದರೂ ಮದ್ದಿದ್ದರೆ ಕೊಡಿರೆಂದನು. ಆಗ ಆ ಛದ್ಮವೇಷಧಾರಿ ಯಾದ ವಿಜ್ಞಾನಿಯು ವಿಷಯುಕ್ತವಾದ ದ್ರವತುಂಬಿರುವ ಸೀಸೆಯನ್ನು ತೆಗೆದು ಸ್ವಾಮಿ! ತಲೆನೋವಿಗೆ ಇದು ರಾಮಬಾಣ ಇದನ್ನು ಸ್ವಲ್ಪ ಹಾಲಿನಲ್ಲಿ ಬೆರೆಸಿ ಕುಡಿದು ಹಾಸಿಗೆಯಲ್ಲಿ ಮಲಗಿದರೆ ಸಾಕು. ಎಲ್ಲಾ ಗುಣ ವಾಗುತ್ತಿದೆಯೆಂದನು. ರಾಮದಾಸನು ಆ ಸೀಸೆಗೆ ಹಣಕೊಟ್ಟು ಪಡೆ ಕೊಳ್ಳಲು ಆ ಮದ್ದು ಮಾರುವವನು ಅಲ್ಲಿಂದ ಬೇರೆ ಕಡೆಗೆ ಹೋದನು. ಸ್ವಲ್ಪ ಸಮಯದಲ್ಲಿ ರಾಮದಾಸನೂ ಅವನ ಸೋದರ ಮಾವನೂ ಮನೆಗೆ ಬಂದರು

ಕಪಟವೇಷದಿಂದ ದಿನವೆಲ್ಲ ನಗರದಲ್ಲಿ ತಿರುಗಿದುದರಿಂದ ಕರಮು ಚಂದನಿಗೆ ತಲೆನೋವುಂಟಾಯಿತು. ಆಗ ಅವನಿಗೆ ಮದ್ದುಮಾರುವವನು ಕೊಟ್ಟ ದಿವ್ಯೌಷಧದ ನೆನಪಾಗಲು ರಾಮದಾಸನನ್ನು ಕರೆದು ಊಟವಾದ ನಂತರ ಆ ದ್ರವವನ್ನು ಹಾಲಿನಲ್ಲಿ ಹಾಕಿ ಕುಡಿದನು. ಸ್ವಲ್ಪ ಸಮಯ

ದಲ್ಲಿಯೇ ಅವನಿಗೆ ಕಲೆತಿರುಗಲಾರಂಭಿಸಿತು. ರಾಮುದಾಸನು ಅಣ್ಣನ ದುರವಸ್ಥೆಯನ್ನು ಕಂಡು ಮದ್ದುಮಾರುವವನು ಕೊಟ್ಟ ಮದ್ದಿನಲ್ಲಿ ವಿಷ ವಿರಬಹುದೆಂದು ತರ್ಕಿಸಿ ಕೂಡಲೇ ತನ್ನ ಕೊಠಡಿಗೆ ಹೋಗಿ ಶಾಂತಿಕಾರಕ ವಸ್ತುಗಳನ್ನು ತಂದು ಕರಮುಚಂದನಿಗೆ ಕೊಡಲು ವಾಂತಿಯಾಗಿ ಹಾಲಿ ನೊಡನೆ ಬೆರೆಸಿದ ದ್ರವದ ವಿಷವೆಲ್ಲ ನಾಶವಾಗಿ ಹೋಯಿತು. ಕರಮು ಚಂದನಾಗ ಹುರುಪುಗೊಂಡು ಉಳಿದ ದ್ರವವನ್ನು ಚೆಲ್ಲಲು ರಾಮುದಾಸ ನೊಡನೆ ಹೇಳಿದನು.

ರಾತ್ರಿ ಸಾಧಾರಣ ಹತ್ತುಗಂಟೆಯಾಗಿರಬಹುದು. ಜನರೆಲ್ಲ ಬಳಲಿ ವಿಶ್ರಾಂತಿಗಾಗಿ ನಿದ್ರಾಂಗನೆಯ ಬಾಹುಪಾಶಕ್ಕೆ ಸಿಕ್ಕಿದ ಕಾಲವದು. ಎಲ್ಲೆಲ್ಲೂ ನೀರವ. ಇಂಥಹ ಸಮಯದಲ್ಲಿ ಸಿತ್ಯದ ಉಡಿಗೆ ತೊಡಿಗೆಗಳಿಂದ ರಾಮುದಾಸನು ತನ್ನ ಕೋಣೆಯಿಂದ ಹೊರ ಬಂದನು. ಮುಂಬಾಯಿ ಯಿಂದ ವೇಷ ಪಲ್ಲಟಿಸಿ ಯಾವ ರೀತಿಯಲ್ಲಿ ಕರಮುಚಂದನು ಬಂದಿದ್ದನೋ ಅದೇ ರೀತಿಯಲ್ಲಿ ಮೈಗೆ ಕಪ್ಪು ಬಣ್ಣ ಬಳಿದು ಗಡ್ಡ ಮೀಸೆಗಳನ್ನೆಲ್ಲ ಸರಿ ಪಡಿಸಿ ಗೂಡು ಬೆನ್ನಿನವನಂತೆ ವೇಷ ಧರಿಸಿ ಪತ್ತೆದಾರಿಯು ತನ್ನ ಕೋಣೆ ಯಿಂದ ರಾಮುದಾಸನಿದ್ದಲ್ಲಿಗೆ ಬಂದನು. ಅವರಿಬ್ಬರೂ ಆ ದಿನ ಸ್ವಿಚನ ಮನೆಗೆ ಹೋಗಲು ನಿಶ್ಚಯಿಸಿದ್ದರು. ಅಲ್ಲೇನಾದರೂ ಅಪಾಯ ಉಂಟಾಗಿ ತಮ್ಮ ನಾಶವುಂಟಾಗಲೂ ಬಹುದೆಂದವರಿಗೆ ದೃಢವಾಗಿ ಗೊತ್ತಿದ್ದರೂ ಸಾವಿ ಗಂಜದೆ ಕೈಯಲ್ಲಿ ಬೇಕಾದ ಶಸ್ತ್ರಗಳನ್ನು ತೆಗೆದುಕೊಂಡು ಹೊರಡಲವರು ಸಜ್ಜಾದರು. ಕರಮುಚಂದನ ಕೈಯಲ್ಲಿ ಪಿಸ್ತೂಲ್ ಮತ್ತು ಟೋರ್ಚ್‌ಲೈಟು ಇದ್ದಿತು. ರಾಮುದಾಸನು ಒಂದು ಚೀಲದಲ್ಲಿ ನಾಲ್ಕು ಕೈಗಳಿಗೆ ಹಾಕುವ ಮತ್ತು ಕಾಲುಗಳಿಗೆ ಹಾಕುವ ರಬ್ಬರ್ ಚೀಲಗಳನ್ನು ಅಲ್ಲದೆ ನಾಲ್ಕೈದು ಪ್ರತಿ ಕೈ ತೋಳಗಳನ್ನು ತೆಗೆದುಕೊಂಡಿದ್ದನು ಅವನ ಕೈಯಲ್ಲಿಯೂ ಪಿಸ್ತೂಲ್ ಮತ್ತು ಟೋರ್ಚ ಲೈಟ್ ಇದ್ದಿತು ಲೋಬೋನ ಮನೆಯ ಹತ್ತಿರ ಹೋಗುವುದು ಅಪಾಯವೆಂದರಿತು ಅವರು ಪೂರ್ವದಿಕ್ಕಿನ ಕಾಡಿಗೆ ಹೋದರು. ದೈವವಶಾತ್ ದಾರಿಯಲ್ಲಾರೂ ಸಿಕ್ಕದಿದ್ದುದು ಅವರ ಭಾಗ್ಯ ವೆನ್ನಬೇಕು ಕಾಡಿಗೆ ತಲಪಿದ ನಂತರ ಕರಮುಚಂದನು ಟೋರ್ಚ ಲೈಟಿನ ಪ್ರಕಾಶದಲ್ಲಿ ಹುಡುಕಲಾರಂಭಿಸಿದನು. ಅವನು ಕಾರಿರುಳಿನಲ್ಲಿ ಅದರಲ್ಲಿಯೂ ಅಡವಿಯಲ್ಲಿ ಏನನ್ನರಸುತ್ತಿರಬಹುದು? ಅದೋ ಕರಮು

ನಲ್ಲಾ ಎಂದು ದುಃಖಿಪಡಲು, ರಾಮದಾಸನು ಹೂಡಿದ ಕಪಟನಾಟಕ ವನ್ನು ವಿವರಿಸಿ ಹೇಳಿದ ನಂತರ ನಾವು ನೇಲಿ ಹೋಗುವ ಎಂದವನನ್ನು ಕರಮುಚಂದನಿದ್ದಲ್ಲಿಗೆ ಕರೆಕೊಂಡು ಹೋದನು. ಆವನು ಯಶವಂತನನ್ನು ಕಂಡು ಸಂತಸಗೊಂಡು ಸ್ವಲ್ಪ ಮಾತನಾಡಿ ಇನ್ನೇಕೆ ಮಾತನಾಡ ಬೇಡಿರಿ ಗದ್ದಲವಾದರೆ ಸೀಚರು ನಮ್ಮನ್ನು ನಿಮಿಷಾರ್ಧದಲ್ಲಿ ಭಸ್ಮ ಮಾಡಬಹುದೆಂದು ಹೇಳಿ ತಾನು ಕಂಡ ಯಂತ್ರದ ಕಡೆಗವರನ್ನು ಕರೆದು ಕೊಂಡು ಹೋಗಿ ಆ ಯಂತ್ರದ ವಿಷಯ ಆಲೋಚಿಸುತ್ತಾ ರಾಮದಾಸ ನೊಡನೆ ಇಲ್ಲೆಲ್ಲಾದರೂ ಗುಪ್ತ ಪತ್ರ, ಡೈರಿಗಳೇನಾದರೂ ಇದ್ದರೆ ಪತ್ತೆ ಮಾಡಿ ಬಾ. ಎನ್ನಲು ರಾಮದಾಸನು ಅಲ್ಲಿಂದ ಬೇರೊಂದು ಕೋಣೆಗೆ ಹೋದನು

ರಾಮದಾಸನು ಸ್ವಿಚ್‌ನ ಮನೆಯ ಸಂಪೂರ್ಣ ವಿಷಯವಿದ್ದ ಪುಸ್ತಕ ಹಿಡಿದು ಹೆಚ್ಚಿನ ಕೊಠಡಿಗೆ ಹೋದನು. ಕಡೆಗೆ ಭವ್ಯವಾದೊಂದು ಅತಿ ಸಣ್ಣ ಕೋಣೆಗೆ ಹೋದನು. ಅಲ್ಲಿನ ಸುತ್ತಮುತ್ತಲಿನ ವಸ್ತುಗಳನ್ನು ಕಂಡು ಇದು ಆಲೋಚನಾ ಮಂದಿರವೆಂದು ತಿಳಿದು ಅಲ್ಲಿರುವ ಮೇಜಿನಲ್ಲೇ ನಾದರೂ ಇದೆಯೆ? ಎಂದು ಪರೀಕ್ಷಿಸಿದನು. ಆದರೆ ಏನೂ ಫಲಕಾರಿ ಯಾಗಲಿಲ್ಲ. ಅನಂತರ ಅಲ್ಲಿನ ಗೋಡೆಯಲ್ಲಿರುವ ಸ್ವಿಚ್‌ನ್ನೊತ್ತಲು ಅಲ್ಲೊಂದು ಕಪಾಟುಂಟಾಯಿತು. ಆದರಲ್ಲೇನಿದೆಯೆಂದವನು ಕುತೂಹಲ ಪಟ್ಟು ನೋಡಲು ಒಂದು ಡೈರಿಯೂ ಒಂದು ಸಣ್ಣ ಪುಸ್ತಕವೂ ಸಿಕ್ಕಿತು. ಅವುಗಳನ್ನು ತೆಗೆದುಕೊಂಡು ಹೋಗಿ ಕರಮುಚಂದನಿಗೆ ಕೊಡಲು ಆವನು ಮೊದಲಾ ಪುಸ್ತಕವನ್ನು ತೆಗೆದು ನೋಡಿದನು. ಆದರಲ್ಲಿ ಆ ಟೆಲಿವಿಶನ್ ಯಂತ್ರದ ವಿಷಯವಿತ್ತು. ನ್ಯೂ ಮೋಡೆಲ್ ಬೇಂಕಿನಲ್ಲಿದ್ದ ನರ್ತನ ಬೊಂಬೆಯ ಕಣ್ಣುಗಳೇ ಟೆಲಿವಿಶನ್ ಯಂತ್ರದ ಉಪಕರಣಗಳೆಂದೂ ಆದರ ಕಿವಿಗಳೇ ಟೆಲಿಫೋನ್ ಎಂದೂ ಆ ಯಂತ್ರವನ್ನು ಉಪಯೋಗಿಸುವ ಕ್ರಮ ಸಹ ಆದರಲ್ಲಿ ಬರೆದಿದ್ದಿತು. ಆದರಲ್ಲಿದ್ದ ಒಂದು ಮೊಳೆಯನ್ನೊ ತ್ತಲು ನ್ಯೂ ಮೋಡೆಲ್ ಬೇಂಕ್‌ನ ಕಾರ್ಯಾಲಯದ ದೃಶ್ಯಗಳೆಲ್ಲ ಕನ್ನಡಿಯಲ್ಲಿ ಕಂಡು ಬಂದುವು. ಲೋಬೋನ ನೀಚ ಕಾರಸ್ಥಾನಗಳನ್ನು ಬಹಿರಂಗಪಡಿಸಲು ಈಗ ಯೋಗ್ಯ ಆಧಾರ ದೊರೆಕಿದಂತಾಯಿತು. ಅನಂ ತರ ಅವನು ಡೈರಿಯನ್ನು ನೋಡಲು ಆದರಲ್ಲಿ ನ್ಯೂ ಮೊಡೆಲ್ ಬೇಂಕ್

ನಿಂದ ಕಳವುಮಾಡಿದ ದಿನಗಳ ತಾರೀಕಲ್ಲದೆ ಆಭರಣಗಳ ಹೆಸರೂ ಇದ್ದವು. ಆ ಕಳವು ಮಾಡಲು ಸಹಾಯ ಮಾಡಿದ ಕೋಯಿಲೊ, ಪಿಟ್ಟ ಮತ್ತು ಜೋಸೆಫ ಇವರಿಗೆ ಕೊಟ್ಟ ಪ್ರತಿಫಲ ಮೊದಲಾದ ವಿಷಯಗಳೆಲ್ಲ ಅಡಕವಾಗಿದ್ದುವು. ಅಲ್ಲದೆ ಕಡೆಗೆ ತಾನು ಕರಮುಚಂದನನ್ನು ಬಂಧಿಸಲು ಅವನು ಫರಾರಿಯಾಗಿ ಹೋದಾಗ ಗುಪ್ತ ಕಾರಸ್ಥಾನದಿಂದ ಮುಂಬಾಯಿಗೆ ಬರುವಂತೆ ಮಾಡಿ ಪಿಟ್ಟ, ಜೋಸೆಫ ಇವರ ಸಹಾಯದಿಂದ ಕಪಟನಾಟಕವನ್ನಾಡಿ ಕಡೆಗೆ ಸಮುದ್ರಕ್ಕೆ ಅವನನ್ನು ದೂಡಿ ಹಾಕಿದ ವಿಷಯವೂ ಆ ಡೈರಿಯಲ್ಲಿ ಬರೆಯಲ್ಪಟ್ಟಿದ್ದಿತು. ಆ ಡೈರಿಯನ್ನು ಪತ್ತೇದಾರಿಯು ಸುಪರಿಡೆಂಟ್‌ನಿಗೂ ರಾಮದಾಸನಿಗೂ ತೋರಿಸಿ ಅಲ್ಲಿಂದ ಇನ್ನು ಮನೆಗೆ ಹೋಗುವ ಎಂದನು.

ವಾಚಕ ಮಹಾಶಯರೆ! ಆಗ ಸಾಧಾರಣ ರಾತ್ರಿ ಒಂದು ತಾಸಾಗಿರಬಹುದು ಕರಮುಚಂದನು ಯಶವಂತನೊಡನೆ ಲೋಬೋನನ್ನು ಇನ್ನು ಬೇಗನೆ ಕೈದಿಯನ್ನಾಗಿ ಮಾಡಬೇಕೆಂದು ಹೇಳಿ ಅಲ್ಲಿಗೆ ಹೊರಡಬೇಕೆಂದಿದ್ದನು. ಅಷ್ಟರಲ್ಲಿ ಲೋಬೋನು ತನ್ನ ಮನೆಯಿಂದ ಗುಪ್ತ ಮಾರ್ಗದಲ್ಲಿ ಆ ಸ್ವಿಚ್‌ನ ಮನೆಗೆ ಬಂದನು. ಅವನು ಬಂದ ಸಂಗತಿ ಕರಮುಚಂದ ಮೊದಲಾದವರಿಗೆ ತಿಳಿಯಲಿಲ್ಲ ಯಾರೋ ಪರರು ತನ್ನ ಗುಪ್ತಮಂದಿರಕ್ಕೆ ಬಂದಿರುವರು ಎಂಬದು ಲೋಬೋನಿಗೆ ತಿಳಿಯಲು ಅವನು ಸಖೇದಾಶ್ಚರ್ಯಗೊಂಡನು ಕೂಡಲೇ ಅವನು ಬೇರೊಂದು ಕೊಠಡಿಗೆ ಹೋಗಿ ಸ್ವಿಚ್ ಒತ್ತಿನೋಡಲು ಕನ್ನಡಿಯುಂಟಾಗಿ ಅದರಲ್ಲವನಿಗೆ ತ್ರಿಮೂರ್ತಿಗಳಂತೆ ರಾಮದಾಸ, ಯಶವಂತಸಿಂಹ ಮತ್ತು ತಾನು ಮುಂಬಾಯಿಯಿಂದ ಬರುವಾಗ ನೋಡಿದ ವಿಚಿತ್ರ ಮನುಷ್ಯ (ವೇಷಧಾರಿ ಕರಮುಚಂದ)ರನ್ನು ಕಂಡು ಭಯಭೀತನಾದನು ಅವನು ಈ ವಿಚಿತ್ರ ಮನುಜನಾರೆಂದು ತಿಳಿಯದೆ ರೋಷಗೊಂಡು ಭಯಂಕರ ಧ್ವನಿಯಲ್ಲಿ ಎಲೆ! ಪಿಶಾಚಿಗಳೆ, ನೀವಿಲ್ಲಿಂದ ಇನ್ನು ಜೀವದಿಂದ ಹೋಗಲಾರಿರಿ!!! ಎಂದು ಸಿಡಿಲಿನಂತೆ ಗರ್ಜಿಸಲು ಅವನ ಸ್ವರವನ್ನು ಕೇಳಿ ಕರಮುಚಂದನು ಮಂದಹಾಸದಿಂದ ಪ್ರಿಯ "ಚೋರ ಸಾರ್ವಭೌಮ"ನೆ, ನಿನ್ನ ಸ್ನೇಹಿತನಾದ ಕರಮುಚಂದನು ನಾನು ಇರುವಾಗ ಇವರಿಗೇಕೆ ಭಯ? ಎನ್ನಲು ಕರಮುಚಂದನು ಬದುಕಿ ಛದ್ಮವೇಷದಿಂದ ಬಂದು ನನ್ನಾಟವನ್ನು ಬಯಲಾಟಪಡಿಸಿದನಲ್ಲಾ ಎಂಬ

ಚಂದನು ಆ ಗುಡಿಯ ಒಳಗೆ ಹೋಗುತ್ತಿದ್ದಾನಲ್ಲ! ಓಹೋ ತಿಳಿಯಿತು, ಸ್ವಿಚ್‌ನ ಮನೆಯಿಂದ ಕೆಲವು ಸಮಯ ಮೊದಲು ಅವನೀ ಗುಡಿಯ ಮೂಲಕ ಕಾಡಿನಲ್ಲಿ ಹೊರಬಿದ್ದಿದ್ದಾತನಲ್ಲವೆ? ಆದ್ದರಿಂದವನು ಇಷ್ಟರ ವರೆಗೆ ಆ ಗುಡಿಯನ್ನು ಹುಡುಕಿದ್ದಾಗಿರಬಹುದು. ಸಹೋದರ ತುಬ್ಬುಗಾರರಿಬ್ಬರೂ ಆ ಗುಡಿಯೊಳಗೆ ಹೋಗಿ ಕೊಂಡಿಯನ್ನೊತ್ತಿ ವಿಗ್ರಹದ ಹಿಂದಿನಿಂದ ಇರುವ ಗುಪ್ತಮಾರ್ಗದ ಮೂಲಕ ಕೆಳಗಿಳಿದು ಸುರಂಗ ದಾರಿಯಲ್ಲಿ ಲೈಟ್‌ನ ಪ್ರಕಾಶದಲ್ಲಿ ಹೋದರು. ಸ್ವಲ್ಪ ದೂರ ಹೋಗಲು ಎದುರಿಗೊಂದು ಗೋಡೆ ಅಡ್ಡ ಸಿಕ್ಕಲು ಏನೂ ಶಬ್ದ ಮಾಡದೆ ಅಲ್ಲಿರುವ ಕೊಂಡಿಯನ್ನು ದೂಡಿ ಉಂಟಾದ ಬಾಗಿಲಿನಲ್ಲವರು ಮುಂದುವರಿದರು. ಮತ್ತು ದೂರ ಹೋಗಲು ಬೇರೊಂದು ಗೋಡೆ ಎದುರುಗಡೆಯಲ್ಲಿ ಸಿಕ್ಕಲು ಅಲ್ಲಿರುವ ಮುಳ್ಳನ್ನೊತ್ತಿ ಉಂಟಾದ ಬಾಗಿಲಿನಲ್ಲಿ ಹೋಗಲು ಒಂದು ಕೋಣೆ ಕಾಣಿಸಿತು. ಅವರಿಬ್ಬರೂ ಕೋಣೆಗೆ ಹೋಗಿ ಸ್ವಲ್ಪ ಸಮಯ ನಿಂತು ಕೈಕಾಲುಗಳಿಗೆ ರಬ್ಬರ್ ಚೀಲಗಳನ್ನು ಎಲ್ಲಿಯಾದರೂ ವಿದ್ಯುತ್ ಪ್ರವಾಹದಿಂದ ಅಪಾಯವುಂಟಾಗದಂತೆ ಕಟ್ಟಿಕೊಂಡು ಅಲ್ಲಿಂದ ಮುಂದು ವರಿದರು. ಅನಂತರವರು ವಿಶಾಲವಾದ ಹೋಲ್‌ಗೆ ಅಂದರೆ ಮೊದಲೊಂದು ಬಾರಿ ಬಂದ ಕೋಣೆಗೆ ಬಂದರು. ಅಲ್ಲಿ ಅವರು ಬಹಳ ಎಚ್ಚರದಿಂದಿದ್ದು ಬೇರೆ ಕೊಠಡಿಗೆ ಹೋದರು. ಯಾಕೆಂದರೆ ಆ ಕೋಣೆಯು ಥಕ್ಕನೆ ಸ್ವಿಚ್‌ನ ಜೋಡಣೆಗಳಿಂದಲಾಗಿ ಮೇಲೆ ಕೆಳಗೆ ಮಾಡಲಿಕ್ಕೆ ಬರುವುದರಿಂದ ನೀಚರು ತಮ್ಮ ಚಲನವಲನಗಳನ್ನರಿತರೆ ಅಪಾಯ ಉಂಟಾಗಬಹುದೆಂದು ಬೇರೆ ಕೋಣೆಗೆ ಹೋದರು. ಆ ಕೋಣೆಯ ಗೋಡೆಗಳಲ್ಲಿ ಅನೇಕ ಸ್ವಿಚ್‌ಗಳಿದ್ದುವು. ಕರಮಚಂದನು ಒಂದು ಸ್ವಿಚ್ಚನ್ನೊತ್ತಿದಾಗ ದಕ್ಷಿಣ ದಿಕ್ಕಿನ ಗೋಡೆಯಲ್ಲಿ ಬಾಗಿಲುಂಟಾಯಿತು. ರಾಮದಾಸನು ಅಲ್ಲಿಯೇ ನಿಂತಿರಲು ಕರಮಚಂದನು ಆ ಬಾಗಿಲಿನ ಮುಖಾಂತರ ಬೇರೆ ಕೋಣೆಗೆ ಹೋದನು. ಅಲ್ಲಿಗೆ ಹೋಗಿ ಪರಾಂಬರಿಸಿ ನೋಡಿ ಜನರಾರೂ ಹತ್ತಿರವಿಲ್ಲವೆಂದು ತಿಳಿದು ಲೈಟ್ ಉರಿಸಲು ತೇಜಸ್ಸಿನಿಂದ ಉರಿಯುತ್ತಿದ್ದ ದೀಪದ ಬೆಳಕಿನಲ್ಲಿ ಭಯಂಕರ ದೃಶ್ಯವನ್ನು ಕಂಡ ಅವನು ರೋಮಾಂಚನಗೊಂಡನು. ಆದರೆ ಭೀತಿಯನ್ನುಂಟು ಮಾಡುವ ದೃಶ್ಯವಾವುದೂ ಅಲ್ಲಿರಲಿಲ್ಲ. ಒಂದು ಕುರ್ಚಿಯೊಂದು ಮೇಜಿದ್ದಿತು. ವಿಸ್ತಾರವಾದ ಆ ಮೇಜಿನ

ಮೇಲೆ ಲೋಹದ ಒಂದು ಪೆಟ್ಟಿಗೆಯಾಕಾರದ ವಸ್ತುವಿದ್ದಿತು. ಮೇಲಿನಿಂದ ಅನೇಕ ವಿದ್ಯುತ್ ಪ್ರವಾಹದ ತಂತಿಗಳು ಆ ಪೆಟ್ಟಿಗೆಗೆ ಜೋಡಿಸಲ್ಪಟ್ಟಿದ್ದುವು. ಕರಮಚಂದನು ಮೇಜಿನ ಹತ್ತಿರ ಹೋಗಿ ನೋಡಿದನು.

ಪೆಟ್ಟಿಗೆಯ ಮೇಲ್ಭಾಗದಲ್ಲಿ ದೊಡ್ಡ ಕನ್ನಡಿಯಿತ್ತು. ಅದರಲ್ಲಿ ಬಗ್ಗಿ ನೋಡಲು ಅದರ ಕೆಳಗಡೆಯಲ್ಲಿ ಸೂಕ್ಷ್ಮವಾದ ಯಂತ್ರೋಪಕರಣಗಳಿದ್ದುವೆಂದು ಕರಮಚಂದನಿಗೆ ತಿಳಿಯಿತು. ಲೋಬೋನು ಅದ್ಭುತ ಕಲಾಕೌಶಲ್ಯದಿಂದ ವಿಜ್ಞಾನದ ಬಲದಿಂದ ರಚಿಸಿದ ಅದ್ಭುತ ಕಾರ್ಯ ಜರಗಿಸಲು ಸಮರ್ಥವಾದ ಯಾವುದೋ ಒಂದು ಉಪಕರಣವಿದು ಎಂದು ಚುರುಕು ಬುದ್ಧಿಯ ಕರಮಚಂದನು ಅರಿತನು ಆದರೆ ಆ ಯಂತ್ರದ ಪ್ರಯೋಜನವೇನು? ಮೊದಲಾದ ವಿಷಯ ತಿಳಿಯದೆ ಅವನು ಏನು ಮಾಡಬೇಕೆಂದು ತಿಳಿಯದೆ ಸುಮ್ಮನಿದ್ದನು ಇಷ್ಟರಲ್ಲಿ ರಾಮದಾಸನು ಕೆಲವು ಸ್ವಿಚ್‌ಗಳನ್ನೊತ್ತಿ, ಬೇರೊಂದು ಕೊಠಡಿಯಲ್ಲಿ ಹೋಗಿ ಅಲ್ಲಿರುವ ಕೊಂಡಿಯನ್ನು ದೂಡಿದಾಗ ಉಂಟಾದ ಕನ್ನಡಿಯಲ್ಲಿ ಯಾರೋ ಅತಿ ಆಳವಾದ ಹೊಂಡದಲ್ಲಿ ಬಿದ್ದಿರುವುದನ್ನು ಕಂಡನು. ಅನಂತರ ಕೂಡಲೇ ಈವನು ಕರಮಚಂದನಿದ್ದಲ್ಲಿಗೆ ಬಂದು ತಾನು ಕಂಡ ವಿಷಯವನ್ನು ಹೇಳಿದನು. ನೀಚರು ಸಾಧುಗಳನ್ನೊ ಬಂಧಿಸಿ ಬವಣಿಗೊಳಿಸಿದರಲ್ಲಾ ಎಂದು ಸಿಟ್ಟುಗೊಂಡು ಕರಮಚಂದನು ಬಂಧನದಲ್ಲಿದ್ದ ವ್ಯಕ್ತಿಯ ಬಿಡುಗಡೆ ಮಾಡಲು ಪ್ರಯತ್ನಪಟ್ಟನು. ಆದರೆ ಅವನಿದ್ದ ಸ್ಥಳಕ್ಕೆ ಹೇಗೆ ಹೋಗಲೆಂದು ಅವನಿಗೆ ತಿಳಿಯದೆ ಕಳವಳಗೊಂಡರೂ ಕಡೆಗೆ ಅದೇ ಕೋಣೆಯಲ್ಲಿದ್ದ ಕಪಾಟಿನಲ್ಲಿ ಆ ಸ್ವಿಚ್‌ನ ಮನೆಯ ನಕಾಶೆಯಿದ್ದು ಅಲ್ಲಿಗೆ ಹೋಗುವ ದಾರಿಯನ್ನೆಲ್ಲ ಉಲ್ಲೇಖಿಸಲ್ಪಟ್ಟ ಪುಸ್ತಕ ದೊರೆಕಿತು. ಆ ಪುಸ್ತಕದ ಸಹಾಯದಿಂದ ರಾಮದಾಸನು ಅನೇಕ ಕೋಣೆಗಳಿಗೆ ಹೋಗಿ ಕಡೆಗೆ ಆ ವ್ಯಕ್ತಿಯಿರುವ ಕೋಣೆಗೆ ಬಂದು ಅವನನ್ನೆಬ್ಬಿಸಲು, ತನ್ನನ್ನು ಕಾಪಾಡಲು ಬಂದವರಾರೆಂದು ಯಶವಂತನಿಗೆ ತಿಳಿಯದೆ ಆಶ್ಚರ್ಯಗೊಂಡನು. ರಾಮದಾಸನಿಗೆ ಯಶವಂತನ ಗುರುತು ಸಿಕ್ಕಲು ಅವನು ಸುಪರಿಂಡೆಂಟರೆ, ತಾವಿಲ್ಲಿಗೆ ಹೇಗೆ ಬಂದಿರೆಂದು ಕೇಳಲು ಅವನು ತನ್ನನ್ನು ಕಾಪಾಡಿದ ಬಂಧುವು ರಾಮದಾಸನೆಂದು ತಿಳಿದು ಅವನೊಡನೆ ನಡೆದ ವಿಷಯವನ್ನು ಹೇಳಿದನು. ಯಶವಂತನು ಅನಂತರ ಕರಮಚಂದನು ಮ್ಲಾತಪಟ್ಟ

ಭೀತಿಯಿಂದ ಲೋಬೋ ಮೂರ್ಛೆಗೊಂಡು ಬಿದ್ದ. ಆತ ಬಿದ್ದ ಶಬ್ದ ಇವರಿಗೆ ಕೇಳಿಸಿತಾದರೂ ಅವನೆಲ್ಲಿರುವನೆಂದು ಇವರಿಗೆ ತಿಳಿಯದೆ ಆಚೀಚೆ ಸಿಕ್ಕಿದ ಕಡೆಗೆ ಅವನನ್ನು ಹಿಡಿಯಲು ಹೋದರು. ಇಷ್ಟರವರೆಗೆ ಸುಮ್ಮನಿದ್ದ ಯಶವಂತಸಿಂಹನು ಬೇಗನೆ ಲೋಬೋನನ್ನು ಹಿಡಿದು ಬಿಡುವೆನೆಂದು ಓಡಿ ಹೋಗಿ ಸ್ವಿಚ್‌ಗಳು ಅನೇಕವಿರುವ ಕೋಣೆಗೆ ಹೋಗಿ ಸ್ವಿಚ್‌ಗಳನ್ನೊತ್ತಲಾರಂಭಿಸಲು ಕರಮಚಂದನು ಸುಪರಿಡೆಂಟರೆ! ಸಿಕ್ಕಿದ ಸ್ವಿಚ್‌ಗಳನ್ನೆಲ್ಲ ಒತ್ತಿದರೆ ಅನರ್ಥವಾದೀತು ಎಂದು ಹೇಳಿದರೂ ಕೇಳದೆ ಅವನು ಯಾವುದೋ ಒಂದು ಸ್ವಿಚ್‌ನ್ನೊತ್ತಲು ಭಯಂಕರವಾದ ಶಬ್ದವುಂಟಾಯಿತು. ಆಗ ರಾಮದಾಸ ಕರಮಚಂದ ಇವರಿಗೆ ಶಬ್ದವೆಲ್ಲಿಂದ ಬಂದಿತೆಂದು ಹೇಗುಂಟಾಯಿತೆಂದೂ ತಿಳಿಯದೆ ಹಾರಾಡಿ ಹೋಗುತ್ತಿರಲು, ಅಯ್ಯಯ್ಯೋ ಸತ್ತೆನು........ಎಂಬ ಕ್ರಂದನವು ಕೇಳಿಸಿತು ಆಗ ಯಶವಂತನು ಗಡಗಡನೆ ನಡುಗಿ ಪತ್ತೆದಾರಿಗಳಿಗೆಲ್ಲ ಅಪಾಯ ಉಂಟಾಯಿತೋ ಎಂದು ಭಯಪಟ್ಟು ಉಸಿರುಬಿಡದೆ ಚಿಂತೆಗೊಂಡನು ಅನಂತರ ಕರಮಚಂದ-ರಾಮದಾಸರು ಹೇಗಾದರೂ ಆ ಪುಸ್ತಕದ ಸಹಾಯದಿಂದ ಹುಡುಕುತ್ತಿರಲು ಒಂದು ಕೋಣೆಯ ಬಾಗಿಲು ತೆರೆದು ನೋಡಿದಾಗ ಅಬ್ಬಬ್ಬಾ ಏನೆನ್ನಲಿ!! ಬಹಳ ಧೈರ್ಯಶಾಲಿಗಳಾದ ಆ ಪತ್ತೆದಾರಿಗಳೇ ನಡುಗಿದರು. ಥಳಥಳನೆ ಹೊಳೆಯುತ್ತಿರುವ ಹರಿತವಾಗಿದ್ದ ಚೂಪಾದ ಅನೇಕ ಚೂರಿಗಳು ಆ ಕೋಣೆಯಲ್ಲಿ ಮೇಲ್ಮುಖವಾಗಿ ಹುಗಿಯಲ್ಪಟ್ಟಿದ್ದುವು ಅವುಗಳ ಬಿಳಿಯಾದ ಹೊಳಪಿನ ಪ್ರಭೆಯೇ ಕಣ್ಣು ಕುಕ್ಕುವಂತಿತ್ತು. ಅವುಗಳ ಮೇಲೆ ಯಶವಂತನು ಸ್ವಿಚ್ ಒತ್ತಿದುದರಿಂದ ಲೋಬೋನು ಕವುಚಿ ಬಿದ್ದಿದ್ದನು. ಹರಿತವಾದ ಚೂರಿಗಳ ಮೊನೆಗಳು ಅವನ ಶರೀರಕ್ಕೆ ನಾಟಿ ಕಾರಂಜಿಯಿಂದ ನೀರು ಚಿಮ್ಮುತ್ತಿದ್ದಂತೆ ಬಿಸಿ ನೆತ್ತರು ಅವನ ದೇಹದಿಂದ ಹೊರ ಹೊಮ್ಮುತ್ತಿತ್ತು. ಯಶವಂತನು ಹಿಂದುಮುಂದಿನ ವಿಚಾರವಿಲ್ಲದೆ ಸಿಕ್ಕಿದ ಕೊಂಡಿಗಳನ್ನು ಒತ್ತಿದುದರಿಂದಲೇ ವಿಜ್ಞಾನಿಯು ಈ ದುರವಸ್ಥೆಗೆ ಗುರಿಯಾದನು. ಕರಮಚಂದನು ಮಿತ್ರನೆಂದು ಗಣನೆಗೆ ತಾರದೆ ಯಶವಂತನ ಅಜಾಗರೂಕತೆಯಿಂದ ಅವನನ್ನು-ನಿಂದಿಸಿ ತಿರಸ್ಕರಿಸಲು ಅವನು ಪಿಟ್ ಎನ್ನದೆ ತಲೆ ತಗ್ಗಿಸಿ ನಿಂತನು. ರಾಮದಾಸನು ಹೇಗಾದರೂ ಚೂರಿಗಳೆಡೆಯಿಂದ ವಿಜ್ಞಾನಿಯ ಭಾರವಾದ ದೇಹವನ್ನು ಎತ್ತಿ ಹೊರತಂದು ಬೇರೊಂದು

ಕೋಣೆಯಲ್ಲಿದ್ದ ಹಾಸಿಗೆಯಲ್ಲಿ ಮಲಗಿಸಿದನು. ಪತ್ತೇದಾರಿಯು ಅವನ ಗಾಯಗಳಿಂದ ನೆತ್ತರವನ್ನೊರೆಸುತ್ತಾ ತನ್ನೊಡನೆ ಬೇಗನೆ ಡಾ|| ನಾಗೇಶ ನನ್ನು ಬರಮಾಡೆಂದನು. ಕೂಡಲೇ ರಾಮದಾಸನಲ್ಲಿಂದ ನಾಗೇಶನಲ್ಲಿಗೆ ಹೋದನು. ಲೋಬೋನಿಗೆ ಸ್ಮೃತಿ ತಪ್ಪಿದ್ದರೂ ಸ್ವಲ್ಪ ಹೊತ್ತಿನಲ್ಲಿ ಎಚ್ಚತ್ತನು. ಅವನು ಮಾತನಾಡಲಾರಂಭಿಸಿದನು. ತೀವ್ರವಾದ ಗಾಯಗಳಿಂದ ಲಾಗಿ ವೇದನೆಯುಂಟಾಗುತಿದ್ದುದರಿಂದ ಸರಾಗವಾಗಿ ಅವನಿಗೆ ಮಾತನಾಡಲು ಆಗುತ್ತಿರಲಿಲ್ಲವಾದರೂ ಅಸ್ತವ್ಯಸ್ತವಾಗಿ ಅವನ ಬಾಯಿಂದ ಹೊರಟ ಶಬ್ದಗಳನಷ್ಟು ಮಾತ್ರ ಇಲ್ಲಿ ಸಂಕ್ಷೇಪದಿಂದ ಹೇಳಲಾಗುತ್ತಿದೆ. ಅದಕ್ಕಾಗಿ ಕ್ಷಮಿಸಿರಿ! ಸಂಕ್ಷೇಪವಾಗಿ ಲೋಬೋನು ಹೇಳಿದ ವಿಷಯ ಈ ರೀತಿಯಾಗಿತ್ತು:-

ಪ್ರಿಯ ಮಿತ್ರ ಕರಮಚಂದರೆ! ನಾನೀಗ ಈಶ್ವರೀ ಸಂಕೇತದಿಂದ ಲಾಗಿ ಆಘಾತಕ್ಕೆ ಒಳಪಟ್ಟಿದ್ದಕ್ಕಾಗಿ ನೀವು ಮರುಗಬೇಡಿರಿ. ನನ್ನಂಥ ನೀಚರು ಪ್ರಪಂಚದಲ್ಲಿರಬಾರದು. ನಾನು ಚಿಕ್ಕಂದಿನಲ್ಲಿ ಉತ್ತಮ ಗುಣಗಳಿಂದ ಕೂಡಿದವನಾಗಿದ್ದರೂ ಅಮೇರಿಕಕ್ಕೆ ವಿಜ್ಞಾನ ಅಭ್ಯಾಸಿಸಲು ಹೋಗಿದ್ದಾಗ ಅಲ್ಲಿಯ ಮಿತ್ರರ ಬಲೆಗೆ ಸಿಕ್ಕಿ ನೀಚನಾಗಿ ಮಾಡಬಾರದ ಕೆಲಸಗಳನ್ನಾಚರಿಸಿದೆನು ದೇಶದ ಹಿತಚಿಂತಕರೂ ಬಡವರ ಜೀವದಾತರೂ ಲೋಕಪ್ರಿಯರೂ ಅನಾಥ ರಕ್ಷಕರೂ ಆದ ನಿಮ್ಮನ್ನೇ ಕೊಲ್ಲಲು ಹವಣಿಸಿದೆನು. ಆದರೂ ನನ್ನ ದುರ್ನಡತೆಯ ವಿಷಯ ಆದಾರಿಗೂ ಗೊತ್ತಾಗಲಿಲ್ಲ. ಕುಶಾಗ್ರ ಬುದ್ಧಿಯವರೂ ಯುಕ್ತಿಯುತರೂ ಮೇಧಾವಿಗಳೂ ಆದ ನೀವಲ್ಲದೆ ನನ್ನ ಕಪಟವನ್ನು ಹೀಗೆ ಬಯಲಿಗೆಳೆಯಲು ಬೇರಾರೂ ಸಮರ್ಥರಲ್ಲ ನಿಮ್ಮ ಸಾಹಸ ಧೈರ್ಯಗಳು ಶ್ಲಾಘನೀಯಗಳೇ ಸರಿ!! ನನ್ನ ತಪ್ಪನ್ನು ಕ್ಷಮಿಸಿ ಮತ್ತು ನಾನು ಅಪಹರಿಸಿದ ಸೊತ್ತುಗಳನ್ನು ಅದರ ನಿಜವಾದ ಒಡೆಯರಿಗೆ ಕೊಡಿಸಿರಿ........ಎಂದು ಹೇಳಿ ಸುಮ್ಮನಾದನು ಅಷ್ಟರಲ್ಲಿ ರಾಮದಾಸನೊಡನೆ ಡಾ|| ನಾಗೇಶನು ಅಲ್ಲಿಗೆ ಬಂದು ವಿಜ್ಞಾನಿಯನ್ನು ಕಂಡು ಅವನ ಶುಶ್ರೂಷೆಗಾರಂಭಿಸುತ್ತಾ ಕರಮಚಂದನೊಡನೆ ಮೆಲ್ಲನೆ ಇನ್ನು ಇವನು ಬದುಕಲಾರನೆಂದನು ಸ್ವಲ್ಪ ಸಮಯದಲ್ಲಿಯೇ ವಿಜ್ಞಾನಿಯು ಪತ್ತೇದಾರಿಯೊಡನೆ ನಾನು ಹೇಳಿದಂತೆ ಮೃತ್ಯುಪತ್ರ ಬರೆಯಿರಿ, ಎಂದು ಹೇಳಿ ಈ ರೀತಿ ಹೇಳಿದನು:- ನನ್ನ ಐಶ್ವರ್ಯದಲ್ಲಿ ಇಪ್ಪತ್ತು

ಸಾವಿರ ರೂಪಾಯಿಗಳು ಸಾರ್ವಜನಿಕ ಸಂಸ್ಥೆಗಳಿಗೂ ಹತ್ತು ಸಾವಿರ ಸರಕಾರಕ್ಕೂ ಅಲ್ಲದೆ ನನಗೆ ಅವಸಾನ ಕಾಲದಲ್ಲಿ ಜ್ಞಾನವನ್ನುಂಟು ಮಾಡಿದ ಶ್ರೀಮಾನ್ ಕರಮಚಂದರಿಗೆ ಹದಿನೈದು ಸಾವಿರವೆಂದೂ ಉಳಿದುದು ಸಂತತಿಗೆ ಎಂದು ಹೇಳಲು ಪತ್ತೆದಾರಿಯು ಆ ರೀತಿ ಮೃತ್ಯುಪತ್ರ ಬರೆದು ಓದಿ ಹೇಳಲು ವೇದನೆಯಿಂದ ನರಳುತಿದ್ದ ವಿಜ್ಞಾನಿಯು ಆ ಪತ್ರಕ್ಕೆ ಸಹಿ ಹಾಕಿದನು ಅನಂತರ ಡಾ। ನಾಗೇಶ, ಪೋಲೀಸ್ ಸುಪರಿಂಡೆಂಟ್ ಯಶವಂತ ಸಿಂಹ, ಪತ್ತೆದಾರಿ ಕರಮಚಂದ ಇವರು ಸಾಕ್ಷಿ ಹಾಕಿದರು. ಅಷ್ಟರಲ್ಲಿ ಸುಪ್ರಸಿದ್ಧ ವಿಜ್ಞಾನಿಯೆಂದು ಪ್ರಸಿದ್ಧನಾದ ಲೋಬೋನ ಆತ್ಮವು ಪರಲೋಕಕ್ಕೆ ಹೋಗಲು ಅವನ ಮುಖವು ನಿಸ್ತೇಜವಾಯಿತು.

ಆಗ ರಾಮದಾಸನು ಕರಮಚಂದನೊಡನೆ ಇವನಿಗೆ ಸಾಯುವಾಗಲಾದರೂ ನರಕಾಸುರನಂತೆ ಜ್ಞಾನೋದಯವಾಯಿತಲ್ಲಾ ! ಎಂದನು. ಅನಂತರ ಅವರು ಲೋಬೋನ ಶವವನ್ನು ಕೊಠಡಿಯಲ್ಲಿ ಭದ್ರವಾಗಿಟ್ಟು ತಮ್ಮ ಮನೆಗೆ ಹೋಗಿ ಫೋನ್‌ನಲ್ಲಿ ಲೋಬೋನ ಮಡದಿಗೆ ನಡೆದ ಸಂಗತಿಯನ್ನು ತಿಳಿಸಿದರು. ಅವನ ಪತ್ನಿಯಾಗ ವ್ಯಸನಪಟ್ಟು ಚರ್ಚಿಗೆ ಹೋಗಿ ಗುರುವಿಗೆ ತಿಳಿಸಿ ಅನಂತರ ಕ್ರೈಸ್ತಪದ್ಧತಿಯಂತೆ ಲೋಬೋನ ಶವಸಂಸ್ಕಾರ ಮಾಡಿದಳು ಕರಮಚಂದನು ಅತ್ಯಾಚಾರದ ವಿಷಯ ಕೋರ್ಟಿನಲ್ಲಿ ಬಹಿರಂಗಪಡಿಸಿ ಯುಕ್ತ ಪ್ರಮಾಣಗಳನ್ನೂ ಹಾಜರುಪಡಿಸಿದನು.

# ಉಪಸಂಹಾರ

ಶ್ರೀಮಾನ್ ಕರಮಚಂದನು ಚೋರ ಸಾರ್ವಭೌಮನೆಂಬ ಗುಪ್ತನಾಮದಿಂದ ಕಳವು ಅತ್ಯಾಚಾರ ಮಾಡುತಿದ್ದ ಸುಪ್ರಸಿದ್ಧ ವಿಜ್ಞಾನಿಯೂ ಇಲೆಕ್ಟ್ರಿಕಲ್ ಎಂಜಿನೀಯರನೂ ಆದ ಲೋಬೋನ ಕಪಟ ನಾಟಕವನ್ನು ಬಯಲಿಗೆಳೆದನು, ಎಂದು ಮರುದಿನ ನಗರದಲ್ಲೆಲ್ಲ ಗಲಭೆಯೋ ಗಲಭೆ! ಕಾಣೆಯಾದ ಯಶವಂತಸಿಂಹನು ಬಂದನು. ಎಂದು ಕೆಲವರು ಸಂತೋಷಪಡಲು, ಉಳಿದವರು ಪತ್ತೆದಾರಿಯು ಸತ್ತಿರುವನೆಂದು ದುಷ್ಟರಾರೋ ಅಪಪ್ರಚಾರ ಮಾಡಿರುವರೆಂದು ಹೇಳುತಿದ್ದರು. ಮಂಗಳೂರು ಡಿಸ್ಟ್ರಿಕ್ಟ್ ನ್ಯಾಯಾಲಯದಲ್ಲಿ ಈ ದಿನ ವಿಚಾರಣೆಯಾಗಲಿಕ್ಕಿದೆಯೆಂದು ಮುಂಚಿನ

ದಿನವೇ ವಾರ್ತೆ ಹಬ್ಬಿದ್ದಿತು. ಚೋರನ ಸಹಾಯಕರಾದ ಪಿಟ್ಟ ಮತ್ತು ಜೋಸೆಫ ಇವರನ್ನು ಪೋಲೀಸರು ಪತ್ತೆದಾರಿಯ ಹೇಳಿಕೆಯಂತೆ ಬಂಧಿಸಿದ್ದರು. ವಿಚಾರಣೆ ದಿನ ನ್ಯಾಯಾಧಿಪತಿಗಳ ತೀರ್ಪನ್ನು ಕೇಳಲು ಅನೇಕ ಜನರು ಬಂದು ನೆರೆದಿದ್ದರು. ಜನರ ತಿಕ್ಕಾಟದಲ್ಲಿ ಕೆಲವರು ಬಿದ್ದು ಎದ್ದು ನಾ ಮುಂದೆ ನಾ ಮುಂದೆ ಎಂದು ಮುಂದೆ ಬಂದು ನಿಲ್ಲುತ್ತಿದ್ದರು. ಕ್ಲುಪ್ತ ಸಮಯಕ್ಕೆ ಘನ ಹೊಂದಿದ ನ್ಯಾಯಾಧಿಪತಿಗಳು ಬಂದು ಸಿಂಹಾಸನದಲ್ಲಿ ಮಂಡಿತರಾದರು. ವಿಚಾರಣೆಗೆ ಪ್ರಾರಂಭವಾಯಿತು. ಕರಮುಚಂದನು ಬೇಕಾದ ಪ್ರಮಾಣಗಳನ್ನೆಲ್ಲ ಹಾಜರು ಪಡಿಸಿದನು. ಪಿಟ್ಟ, ಜೋಸೆಫರು ಏನೂ ಹೇಳದೆ ತಪ್ಪನ್ನೊಪ್ಪಿಕೊಂಡರು. ನ್ಯಾಯಾಧೀಶರು ಮೊದಲು ಆ ಸ್ವಿಚ್‌ನ ಮನೆಯನ್ನು ಸಂಪೂರ್ಣ ನಾಶಪಡಿಸಬೇಕೆಂದೂ ನ್ಯೂ ಮೋಡೆಲ್ ಬೇಂಕಿನಲ್ಲಿದ್ದ ನರ್ತನ ಜೊಂಬೆಯನ್ನು ತೆಗೆಯಬೇಕಲ್ಲದೆ ಡೈರಿಯಲ್ಲಿ ಕಾಣುವಂತೆ ವಿಶ್ರಾಂತಿಭವನದ ಮೇನೇಜರ್ ಮಾಧವನು ಲೋಬೋನಿಗೆ ಆಗಾಗ ಸಹಾಯ ಮಾಡಿ ಲಂಚ ಪಡೆದುಕೊಂಡಿದ್ದುದರಿಂದವನು ೫೦೦ ರೂ. ದಂಡ ತೆರಬೇಕೆಂದೂ ವಿವರಿಸಿದರು. ಚೋರಸಾರ್ವಭೌಮನಾದ ಲೋಬೋನು ದೈವವಶಾತ್ ದುರ್ಮರಣಕ್ಕೆ ತುತ್ತಾದುದರಿಂದ ಅವನಿಗಿನ್ನು ಶಿಕ್ಷೆ ವಿಧಿಸಬೇಕೆಂದಿಲ್ಲವೆಂದೂ ಪಿಟ್ಟನು ಅವನ ಬಲಗೈ ಬಂಟನಾಗಿ ಅನೇಕ ಹೇಯಕೆಲಸ ಮಾಡಿದುದರಿಂದ ೫೦೦ರೂ ಜುಲ್ಮಾನ್ ಕಟ್ಟಬೇಕಲ್ಲದೆ ೭ ವರುಷ ಕಠಿಣಸಜೆಯಲ್ಲಿರಬೇಕೆಂದೂ ಜೊಸೆಫನಿಗೆ ಐದು ವರ್ಷ ಕಠಿಣ ಶಿಕ್ಷೆಯೆಂದೂ ತೀರ್ಪನ್ನಿತ್ತು ಅವರವರ ಸೊತ್ತುಗಳನ್ನು ಕರಮುಚಂದನು ಅವರವರಿಗೆ ಹಂಚಿಕೊಟ್ಟು ಮೃತ್ಯುಪತ್ರದಲ್ಲಿರುವಂತೆ ಮುಂದಿನ ಕಾರ್ಯವನ್ನು ಮಾಡ ಬೇಕೆಂದೂ ತೀರ್ಪನ್ನಿತ್ತರು. ಜಜ್ಜರ ತೀರ್ಪನ್ನು ಕೇಳಿ ಜನರೆಲ್ಲ ಸಂತೋಷಪಟ್ಟರು. ಪತ್ತೆದಾರಿಯು ಲೋಬೋನ ಅಪಹರಿಸಿದ ಒಡವೆಗಳನ್ನೆಲ್ಲ ಅವರವರಿಗೆ ಕೊಡಿಸಿದನು.

ಯಾವ ದಿನ ಕೋರ್ಟಿನಲ್ಲಿ ವಿಚಾರಣೆ ನಡೆಯಿತೋ ಅದೇ ದಿನ ಸಾಯಂಕಾಲ ಮೈದಾನಿನಲ್ಲಿ ಸಾರ್ವಜನಿಕ ಸಭೆಯೊಂದು ಜರಗಿಸಲ್ಪಟ್ಟಿತು. ಅಂದಿನ ಸಭೆಗೆ ಮಂಗಳೂರಿನಲ್ಲಿ ಪ್ರಸಿದ್ಧಪಟ್ಟ ವಕೀಲರೊಬ್ಬರು ಅಧ್ಯಕ್ಷರಾಗಿದ್ದರು. ಅನೇಕರು ಕರಮುಚಂದ ರಾಮದಾಸರ ಚಮತ್ಕಾರವಾದ ಪತ್ತೆದಾರಿಕೆಯನ್ನು ಹೊಗಳಿ ಕೃತಜ್ಞತೆ ಸಲ್ಲಿಸಿದರು. ನ್ಯೂಮೋಡೆಲ್ ಬೇಂಕ್‌ನ

ಡೈರೆಕ್ಟರ್, ಸಿರಿವಂತ ಸಾಹುಕಾರ್ ಜಾನ್ ಅಲ್ಲದೆ ಸರಾಫ ಮೊದಲಾದವರು ಪತ್ತೆದಾರಿಗಳಿಗೆ ವಂದನಾಪತ್ರಗಳನ್ನರ್ಪಿಸಿ ಕೃತಜ್ಞತೆ ಸಲ್ಲಿಸಿದರು. ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನು ಬಹಳ ಸಂತೋಷದಿಂದ ತನ್ನ ಕುವರಿಯನ್ನು ಪತ್ತೆಹಚ್ಚಿಕೊಟ್ಟ ಮತ್ತು ತನ್ನನ್ನು ಕಾಪಾಡಿದ ಪತ್ತೆದಾರಿ ಸಹೋದರರಿಗೆ ಕೃತಜ್ಞತೆ ಸಲ್ಲಿಸಿದನು. ಮಹನೀಯರನೇಕರ ಭಾಷಣವಾಗಲು ಪ್ರಚಂಡ ಕರತಾಡನದಿಂದ ಸಭೆಯು ವಿಸರ್ಜಿಸಲ್ಪಟ್ಟಿತು

ಅನಂತರ ಸಾಹುಕಾರ ಜಾನರು ತಮ್ಮ ಮನೆಯ ಉದ್ಯಾನದಲ್ಲೊಂದು ಟೀ ಪಾರ್ಟಿಯನ್ನೇರ್ಪಡಿಸಿದರು ಕರಮಚಂದ ರಾಮದಾಸ್ ಯಶವಂತ ಸರಾಫ್ ಅಲ್ಲದೆ ಇನ್ನಿತರ ಸದ್ಗೃಹಸ್ಥರಿಗೂ ಆಮಂತ್ರಣವಿದ್ದಿತಾದುದರಿಂದ ಮಹನೀಯರನೇಕರು ನೆರೆದಿದ್ದರು. ಉತ್ತಮ ತರದ ಸಿಹಿ ತಿಂಡಿಗಳೂ ಪಾನೀಯಗಳೂ ಜಾನ್‌ರಿಂದ ಅತಿಥಿಗಳು ಸ್ವೀಕರಿಸಿದರು ಜಾನ್‌ರು ನಗೆದಾಡುತ್ತಾ ಕರಮಚಂದನೊಡನೆ ಆ ದಿನ ಸತ್ತುಹೋದವರು ಈಗೆಲ್ಲಿಂದ ಬಂದರು? ಎಂದು ಕೇಳಲು ಎಲ್ಲರೂ ನಕ್ಕರು. ಪತ್ತೆದಾರಿ ಸಹೋದರರ ವಿಚಿತ್ರ ವೇಷಪಲ್ಲಟಿಸುವ ಕ್ರಮ ಕೇಳಿ ಆವರೆಲ್ಲರು ಆನಂದಗೊಂಡು ಅಚ್ಚರಿಗೊಂಡರು ಕಡೆಗೆ ಜಾನ್‌ರು ಕರಮಚಂದನಿಗೊಂದು ಮೋಟಾರು ಕಾರನ್ನೂ ರಾಮದಾಸನಿಗೊಂದು ಮೋಟಾರ್ ಸೈಕಲನ್ನೂ ಬಹುಮಾನವಾಗಿ ಕೊಟ್ಟರು. ನ್ಯೂಮೋಡೆಲ್ ಬೇಂಕಿನ ಡೈರೆಕ್ಟರನು ಕರಮಚಂದನಿಗೆ ಎರಡು ಸಾವಿರ ರೂಪಾಯಿಗಳನ್ನೂ ರಾಮದಾಸನಿಗೊಂದು ವೆಸ್ಟ್ ಎಂಡ್ ವಾಚನ್ನು ಬಹುಮಾನವಾಗಿ ಕೊಟ್ಟು ತನ್ನ ಅಲ್ಪಸೇವೆಯನ್ನು ಸ್ವೀಕರಿಸಿರಿ ಎಂದನು ಪೋಲೀಸ್ ಸುಪರಿಡೆಂಟ್ ಯಶವಂತಸಿಂಹನು ಆನಂದಬಾಷ್ಪ ಸುರಿಸುತ್ತಾ ಚಿನ್ನದ ಹರಿವಾಣದಲ್ಲಿ ಒಂದು ಪಟ್ಟೆಶಾಲು ಮತ್ತು ಕೆಲವು ಹಣ್ಣುಹಂಪಲಗಳನ್ನು ಕೊಟ್ಟು ಕರಮಚಂದನಿಗೆ ತನ್ನ ಅಲ್ಪ ಕಾಣಿಕೆಯನ್ನು ಸ್ವೀಕರಿಸಿರಿ ಎಂದು ಹೇಳಿ ರಾಮದಾಸನಿಗೊಂದು ಚಿನ್ನದ ಚೈನನ್ನು ಪಾರಿತೋಶಕವಾಗಿ ಕೊಟ್ಟು ತಮ್ಮಾ, ನೀನಿನ್ನು ಅಣ್ಣನಂತೆ ಕೀರ್ತಿವಂತನಾಗಿ ಬಾಳೆಂದು ಆಶೀರ್ವದಿಸಿದನು ಸರಾಫನು ಕೆಲವು ರತ್ನಗಳನ್ನು ಪತ್ತೆದಾರಿಗಳಿಗೆ ಕಾಣಿಕೆಯಾಗಿತ್ತನು ಆ ಪತ್ತೆದಾರಿ ದ್ವಯರು ಎಲ್ಲರಿಗೂ ವಿನಯದಿಂದ ನಮಸ್ಕರಿಸಿ ಕೃತಜ್ಞತೆ ಸಲ್ಲಿಸಿದರು. ಕರಮಚಂದನು ಒಂದು ಚಿಕ್ಕ ಭಾಷಣಕೊಡಲು ಅವನ ವಾಕ್ಚಾತುರ್ಯಕ್ಕೆಲ್ಲರೂ

ಬೇಗಾಗಿ ಬೆರಳುಕಚ್ಚಿದರು. ಕಡೆಗೆ ಮಹನೀಯರೆಲ್ಲರೂ ಹೊರಡಲು ಜಾನ್‌ರು ಹಸ್ತಲಾಘವವನ್ನಿತ್ತು ಕಳುಹಿಸಿದರು.

೦೦ ೦೦ ೦೦ ೦೦

ಈ ದಿನ ಮಂಗಳೂರು ಪೋಲೀಸ್ ಸುಪರಿಡೆಂಟ್ ಯಶವಂತಸಿಂಹ ರಲ್ಲಿ ವಿವಾಹ ಜರಗಲಿಕ್ಕಿದೆಯೆಂದು ಕರಮುಚಂದರೇ ಮೊದಲಾದ ಪುರ ಪ್ರಮುಖರಿಗೆ ಆಮಂತ್ರಣ ಹೋಗಿದ್ದಿತು. ಬಹಳ ಮನೋಹರವಾಗಿ ಮದುವೆಮಂಟಪವನ್ನಲಂಕರಿಸಿದ್ದರು. ಕುಂದಾಪುರದಿಂದ ಡಾ|| ವಿಶ್ವ ನಾಥ್‌ನು ದಿಬ್ಬಣ ಸಮೇತವಾಗಿ ಬಂದ ಆ ರೀತಿಯನ್ನೇನೆನ್ನಲಿ! ವಧೂ ವರರು ಪರಸ್ಪರ ಹೂಮಾಲೆಗಳಿಂದ ಅಗ್ನಿಸಾಕ್ಷಿಯಾಗಿ ವರಿಸಿದರು. ವೇದ ಜ್ಞರತ್ನರು ಮಂತ್ರಪೂರ್ವಕವಾಗಿ ಆಶೀರ್ವದಿಸಲು ಸುಮಂಗಲೆಯರು ಮಂಗಳಾರತಿಯೆತ್ತಿದರು ಕಿರಿಯರು ವಧೂವರರ ಕಾಲು ಹಿಡಿಯಲು ಗುರುಹಿರಿಯರು ವಧೂವರರನ್ನು ಹರಸಿ ಹರ್ಷಗೊಳಿಸಿದರು, ಕರಮು ಚಂದನು ಅಮೂಲ್ಯವಾದ ಒಡವೆಗಳನ್ನು ಉಡುಗೋರೆ ಮಾಡಲು ಸಭ್ಯ ನಾಗರೀಕರು ತಮ್ಮ ತಮ್ಮ ಸಾಮಾಜಿಕ ಸ್ಥಿತಿಗತಿಗನುಸಾರವಾಗಿ ಯೋಗ್ಯ ಉಡುಗೋರೆ ಮಾಡಿ ವಧುವರರನ್ನಾಶೀರ್ವದಿಸಿ ಬೀಳ್ಕೊಟ್ಟರು. ಬಹಳ ಸಂತೋಷದಿಂದ ಮದುವೆಯ ಸಮಾರಂಭವು ಜರಗಿತು ಸುಮಾರು ದಿನ ಗಳ ಹಿಂದೆ ಮದುವೆ ದಿನ ಆದ ಗಲಾಟೆಯು ನೆನಪೇ ಈಗ ಜನರಿಗೆ ಇರದೆ ಸಂತಸದಿಂದುಬ್ಬಿ ಹೋಗಿದ್ದರು. ಕರಮುಚಂದನು ವಧೂವರರನ್ನು ಹರಸಿ ಯಶವಂತನಿಗೆ ನಮಸ್ಕಾರವನ್ನಿತ್ತು ರಾಮದಾಸನೊಡನೆ ಮನೆಗೆ ಹೊರಡಲು ಸುಪರಿಡೆಂಟ್‌ನು ನಮಗಿನ್ನು ಚನ್ನಾಗಿ ನಿದ್ರೆಮಾಡಲು ಅಡ್ಡಿಯಿಲ್ಲವೆಂದು ಪತ್ತೆದಾರಿಯೊಡನೆ ಹೇಳಲು ರಾಮದಾಸನು ನಗುತ್ತ ಲೋಬೋನು ಮೃತ ನಾದರೂ ಅವನಿಗಿಂತಲೂ ನೀಚರು ಇನ್ನೆಷ್ಟು ಮಂದಿಯಿರುವರೊ? ಎಂದನು. ಆ ದಿನ ರಾತ್ರಿ ಅವರೆಲ್ಲರೂ ಸಂತೋಷದಿಂದ ಕಾಲಕಳೆಯುತ್ತ ಸಿನೆಮಕ್ಕೆ ಹೋದರು; ಆದರೆ ನಾವಿಲ್ಲಿಯೇ ಉಳಿದೆವಲ್ಲ? ಆಗಲಿ.

"ಜೈ! ಹಿಂದ"

---

ಸಂಪೂರ್ಣಂ

ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ

# ನಾನೇ ಕೊಲೆಗಡಕ

(ಪತ್ತೇದಾರಿ ಕತೆ)



ಲೇಖಕ:

ಪಿ. ನರಸಿಂಹ ಶಾಸ್ತ್ರೀ

ಮುದ್ರಕ-ಪ್ರಕಾಶಕ

ಬಿ. ಪಿ. ಕಾಳೆ,

ಶ್ರೀ ಶೇಷಾಚಲ ಪ್ರೆಸ್, ಮದಿಹಾಳ-ಧಾರವಾಡ

೧೯೫೨

೪ ಆಣೆ

## ನಮ್ಮ ಐತಿಹಾಸಿಕ ಪುಸ್ತಕಗಳು

| ಪುಸ್ತಕದ ಹೆಸರು | ಲೇಖಕ | ಬೆಲೆ—ರೂ | ಆ |
|---|---|---|---|
| ಅಡವುಟ್ಟ ಸಿಪಾಯಿ | ಕಾಳೆ | ೦ | ೬ |
| ಅಮಾತ್ಯ ರಾಕ್ಷಸ | ನಾಗೇಶ | ೦ | ೭ |
| ಊರ್ಮಿಳೆ | ನಾಗೇಶ | ೨ | ೦ |
| ಕಂಕಣ ಚೋರ | ಕಾಳೆ | ೩ | ೦ |
| ಕುಣಿ ಕನ್ಯೆ | ,, | ೨ | ೦ |
| ಕಲಿಂಗ ವಿಜಯ | ಮುರಲಿ | ೨ | ೮ |
| ದಳವಾಯಿ ಸಾತನಾಮಿ | ಆಂಗಿರಸ | ೦ | ೪ |
| ನೇತಾಜಿ | ಕಾಳೆ | ೧ | ೪ |
| ಪತಿತೋದ್ಧರಣ | ನಾಗೇಶ | ೦ | ೪ |
| ಪ್ರಾರಬ್ಧ ಪ್ರಹಾರ | ,, | ೦ | ೭ |
| ಪ್ರಾಣದಾನ | ಬಿಳ್ಕಿ | ೦ | ೬ |
| ಪ್ಲಾಸೀ ಕದನ | ಅಚ್ಯುತರಾವ | ೦ | ೬ |
| ಮ್ಯಾಝಿನಿ-ಸಾವರಕರ | ಕಾಳೆ | ೧ | ೦ |
| ಮಯೂಖ | ,, | ೨ | ೮ |
| ಮಂದಾಕಿನಿ | ಕರ್ಜಗಿ | ೨ | ೦ |
| ರಕ್ತ ಸಿಂಚನ | ನಾಗೇಶ | ೦ | ೪ |
| *ವಡಗಾಂವದ ವಿಜಯ | ಕಾಳೆ | ೨ | ೦ |
| ವೀರರಾಜ ವಿಜಯ | ಕೃಷ್ಣಯ್ಯ | ೦ | ೧೨ |
| ಶಕ್ತಿಮಯಿ | ಕಾಳೆ | ೧ | ೮ |
| ಸಿರಾಜ ಉದ್ದೌಲ | ನಾಗೇಶ | ೧ | ೮ |
| ಸೂರ್ಯಾಸ್ತ | ನಾಗೇಶ | ೦ | ೧೨ |
| ಹಿಂದೂ-ಮುಸಲ್ಮಾನರ ಐಕ್ಯ | ಕಾಳೆ | ೦ | ೪ |

### ಪೌ ರಾ ಣಿ ಕ

| | | | |
|---|---|---|---|
| ಅಮೃತ ಕಿರಣ | ನವಗಿರಿನಂದ | ೧ | ೪ |
| ಅಪರಾಧಿಗಳಾರು? | ಕಾಳೆ | ೧ | ೧೨ |
| ಸತಿ ಸೀಮಂತಿನಿ | ನಾಗೇಶ | ೦ | ೬ |
| ಸತೀ ಸುಕನ್ಯೆ | ,, | ೧ | ೪ |
| ಅಂಗದನ ಫಿರ್ಯಾದು | ಎಂ. ಟಿ. ವ. | ೩ | ೯ |

OO ಬಿ. ಪಿ. ಕಾಳೆ, ಮದಿಹಾಳ—ಧಾರವಾಡ

# ನಾನೇ ಕೊಲೆಗಡಕ

(ಪತ್ತೇದಾರಿ ಕತೆ)

## ನಿಗೂಢ ಕೊಲೆ

ಇತ್ತೀಚೆಗೆ ರಂಗಪುರದ ಪೋಲೀಸ್ ಇಲಾಖೆಯ ಸರ್ಕಲ್ ಇನ್ ಸ್ಪೆಕ್ಟರ್ ಕುಮಾರಸ್ವಾಮಿಯವರು ಕೊಂಕ್ರೀಟ್ ರಸ್ತೆಯ ಬಳಿ ಹೊಸತಾಗಿ ಒಂದು ಭವ್ಯವಾದ ಗೃಹವನ್ನು ಬಾಡಿಗೆಗೆ ಪಡೆಕೊಂಡಿರುವರು.

ಅವರು ತಮ್ಮ ಪತ್ನಿಯೊಂದಿಗೆ ಸುಖವಾಗಿ ಸಂಸಾರ ಸಾಗಿಸುತಿದ್ದರು. ಮಕ್ಕಳಿರಲಿಲ್ಲ ಪ್ರಾಯ ಸಾಧಾರಣ ನಲುವತ್ತು ವರ್ಷ. ಒಳ್ಳೇ ದೃಢಕಾಯರೂ ಸುಂದರರೂ ಆಗಿದ್ದರು. ವ್ಯವಹಾರಗಳಲ್ಲಿ ಎಳ್ಳಷ್ಟೂ ವಂಚನೆಯನ್ನು ಮಾಡುತ್ತಿರಲಿಲ್ಲ. ಆದುದರಿಂದ ಇವರು ರಂಗಪುರದಲ್ಲೆಲ್ಲಾ ಉತ್ತಮರೆಂದು ಹೇಳಲ್ಪಡುತ್ತಿದ್ದರು

ಒಂದು ದಿವಸ ಯಥಾಕ್ರಮದಂತೆ ಪ್ರಾಥಃಕಾಲ ಕುಮಾರಸ್ವಾಮಿಯವರು ಎದ್ದಿರಲಿಲ್ಲ. ಅವರ ಪತ್ನಿ ಮನೋರಮೆಯು ಏನೋ ರಾತ್ರಿ ಬಹಳವಾಗಿ ಬರೆಯುತ್ತಿದ್ದುದರಿಂದ ಏಳಲು ತಡವಾಗಿರಬಹುದೆಂದು ಊಹಿಸಿದಳು ಏಳು ಗಂಟೆಗೆ ಸರಿಯಾಗಿ ಎಂದಿನಂತೆ ಕಾಫಿಯು ಸಿದ್ಧವಾಯಿತು. ಮನೋರಮೆಯು ಅವರನ್ನು ಕರೆದಳು ಸದ್ದಿಲ್ಲ. ಗಾಢನಿದ್ರೆ ಬಂದಿರಬಹುದೆಂದು ಯೋಚಿಸಿ ಬಾಗಿಲನ್ನು ತೆರೆದಳು. ನೋಡುವುದೇನು! ಮಂಚದ ಮೇಲೆ ಸರ್ಕಲ್ ಇನ್ಸ್ಪೆಕ್ಟರರ ಮೃತದೇಹವು ಕಂಡುಬಂತು. ಈ ದಾರುಣವಾದ ದೃಶ್ಯವನ್ನು ನೋಡಿದೊಡನೆ ಅವರ ಪತ್ನಿ ಚೇತನಾರಹಿತಳಾಗಿ ನೆಲದ ಮೇಲೆ ಬಿದ್ದುಬಿಟ್ಟಳು.

ಕೂಡಲೆ ಈ ಗಲಭೆಯು ರಂಗಪುರದಲ್ಲೆಲ್ಲಾ ಹಬ್ಬಿತು. ಪಟ್ಟಣದ ಮೂಲೆ ಮೂಲೆಗಳಿಗೂ ವದಂತಿಯು ಹರಡಿತು.

ಒಡನೆಯೇ ಪೋಲೀಸ್ ಸಬ್ ಇನ್‌ಸ್ಪೆಕ್ಟರ್ ಅರಬ್‌ಖಾನರು ಇಬ್ಬರು ಪೋಲೀಸರೊಂದಿಗೆ ಅಲ್ಲಿಗೆ ಧಾವಿಸಿ ಹೋದರು; ಮತ್ತು ಮೃತ ದೇಹವಿರುವಲ್ಲಿಗೆ ಬಂದರು ಆಗ ಮನೋರಮೆಯು ಎದ್ದು ಕುಳಿತಳು. ಅರಬ್‌ಖಾನರು ಮನೋರಮೆಯಿಂದ ನಡೆದ ವಿಷಯಗಳನ್ನು ತಿಳಕೊಂಡರು. ತದನಂತರ ಎಲ್ಲರನ್ನೂ ಹೊರಗೆ ಹೋಗಲು ಹೇಳಿ ಪೋಲೀಸರನ್ನು ಒಳಗೆ ಬರಮಾಡಿ ಬಾಗಿಲನ್ನು ಮುಚ್ಚಿ ಸಂಪೂರ್ಣ ಶೋಧಿಸಲಾರಂಭಿಸಿದರು. ಶವದ ಎದೆಯನ್ನು ಹರಿತವಾದ ಒಂದು ಚೂರಿಯಿಂದ ತಿವಿಯಲ್ಪಟ್ಟಿತ್ತು. ಮಂಚದ ಮೇಲೆಲ್ಲಾ ರಕ್ತವು ಬಿದ್ದಿತ್ತು. ಕುತ್ತಿಗೆಯಲ್ಲಿ ಆವರದೇ ಆದ ಒಂದು ಚಿನ್ನದ ಹಾರವು ಇದ್ದಿತು. ಸಬ್ ಇನ್‌ಸ್ಪೆಕ್ಟರರು ಒಬ್ಬ ಫೋಟೋಗ್ರಾಫರನನ್ನೂ ಎಕ್ಸರೇ ಡಾಕ್ಟರನನ್ನೂ ಬರಹೇಳಿ ಕಳುಹಿಸಿದರು. ಅಲ್ಲೆಲ್ಲಾ ಶೋಧಿಸುವಲ್ಲಿ ಅವರಿಗೆ ಗೋಡೆಯ ಮೇಲೆ ರಕ್ತದಿಂದ ಬರೆದ ದಪ್ಪವಾದ ಅಕ್ಷರಗಳು ಕಾಣಿಸಿದುವು. ಆ ಅಕ್ಷರಗಳು ಬಹಳ ಸ್ಪಷ್ಟವಾಗಿ ಕಾಣಿಸುತ್ತಿದ್ದುವು. ಆ ಅಕ್ಷರಗಳಲ್ಲಿ

"ನಾನೇ ಕೊಲೆಗಡಕ"

ಎಂಬುದಾಗಿತ್ತು ಇದನ್ನು ನೋಡಿ ಅರಬ್‌ಖಾನರು ಕೊಲೆಯ ಪತ್ತೆಯನ್ನು ಸುಲಭದಲ್ಲಿ ಹಚ್ಚಬಹುದೆಂದು ಶವವನ್ನು ಮುಟ್ಟಲು ಹೋಗದೆ, ಕಾಗದ-ಪತ್ರಗಳನ್ನೆಲ್ಲಾ ಶೋಧಿಸಿದರು; ಆದರೆ ಅಲ್ಲಿ ಏನೂ ಸಿಗಲಿಲ್ಲ.

ಅಷ್ಟರಲ್ಲಿ ಫೋಟೋಗ್ರಾಫರ್ ಮತ್ತು ಎಕ್ಸರೇ ಸಾಮಾಗ್ರಿಗಳನ್ನು ತೆಗೆದುಕೊಂಡು ಡಾಕ್ಟರರು ಅಲ್ಲಿಗೆ ಬಂದರು. ನಂತರ ಮೃತಶರೀರದ ಎಕ್ಸರೇ ಪಠವು ಕೂಡಾ ತೆಗೆಯಲ್ಪಟ್ಟಿತು.

ಖಾನರು ಆ ಹರಿತವಾದ ಚೂರಿಯನ್ನು ತೆಗೆದು ಪರೀಕ್ಷಿಸಲಾಗಿ ಅದರಲ್ಲೇನೂ ತೋರಲಿಲ್ಲ. ಖಾನರು ಅದನ್ನು ಡಾಕ್ಟರರ ಕೈಗಿತ್ತು ಹೀಗೆಂದರು:—

ಅರಬ್‌ಖಾನ್—ಇದರ ಹಿಡಿಯಲ್ಲಿ ಏನೋ ಅಸ್ಪಷ್ಟವಾದ ಅಕ್ಷರಗಳಿದ್ದಂತೆ ಕಾಣಿಸುತ್ತಿದೆಯಲ್ಲಾ?

ಡಾಕ್ಟರರು ಕೋಟಿನ ಜೇಬಿನಿಂದ ದುರ್ಬೀನನ್ನು ತೆಗೆದು ನೋಡಿ 'ಎಸ್. ಆನಂದರಾವ್' ಎಂದಿದೆ, ಎಂದರು.

ಖಾನ — ಹಾಗಿದ್ದರೆ ಯಸ್. ಆನಂದರಾಯನು ಕೊಲೆಪಾತಕನಾಗಿರಬೇಕು; ಅಲ್ಲದೆ ಅದನ್ನು ಸ್ಪಷ್ಟಪಡಿಸಲು ಗೋಡೆಯಲ್ಲಿ ರಕ್ತದಿಂದ ' ನಾನೇ ಕೊಲೆಗಡಕ ' ಎಂಬುದಾಗಿ ಬರೆದಿರುವನು. ಕೆಳಗಡೆ ದಸ್ತಕತಿನ ಬದಲಾಗಿ ಶವದ ಮೇಲೆ ತನ್ನ ಕತ್ತಿಯನ್ನಿಟ್ಟಿರುವನು. ಆತನ ಪತ್ತೆಯಾದಲ್ಲಿ ಅವನು ತಾನಾಗಿಯೇ ಕೊಲೆಮಾಡಿದುದನ್ನು ಒಪ್ಪಿಕೊಳ್ಳುವನು.

ಡಾಕ್ಟರ್-ಕುಮಾರಸ್ವಾಮಿಯವರೊಡನೆ ಆನಂದರಾಯನಿಗೆ ಏನೋ ಬಲವಾದ ಸೇಡು ಇರಬೇಕು. ಆದುದರಿಂದ ಇವರ ಕೊಲೆಗೈದು ನಂತರ ತಾನಾಗಿಯೇ ಗಲ್ಲಿಗೆ ಹೋಗುವೆನೆಂದು ಯೋಚಿಸಿರಬೇಕು.

ಖಾನ್—ಕಾರ್ಯವು ಸುಲಭವಾಗಿ ಕೈಗೂಡುವುದು. ಆನಂದರಾಯನ ಪತ್ತೆಯೇ ಮುಖ್ಯವಾದ ಕೆಲಸ.

ಹೀಗೆಂದು ಅವರು ಶವವನ್ನು ಮನೋರಮೆಯ ವಶಕ್ಕೆ ಕೊಟ್ಟು, ಅಲ್ಲಿರುವ ಸಂಪೂರ್ಣ ಸಾಮಾಗ್ರಿಗಳೊಂದಿಗೆ ಹೊರಬಿದ್ದರು.

——

# ಈಗೇನು ಮಾಡೋಣ?

ಆನಂದರಾಯರಿಗೆ ಸ್ವಾಮಿನಾಥದಲ್ಲಿ ಸಾಧಾರಣ ನಲುವತ್ತು ಎಕ್ರೆ ಜಮೀನಿದ್ದಿತು. ಇದನ್ನು ಅನುಭವಿಸಿಕೊಂಡು ಅವರು ಪತ್ನಿ ಪುತ್ರರೊಂದಿಗೆ ಸಂತೋಷದಿಂದ ಸಂಸಾರ ಸಾಗಿಸುತಿದ್ದರು.

ಈ ದಿನ ಆನಂದರಾಯರು ರಾತ್ರಿ ಊಟಮುಗಿಸಿಕೊಂಡು ಆರಾಮಾಸನದ ಮೇಲೆ ಕುಳಿತುಕೊಂಡು ಸಿಗಾರ್ ಸೇದುತ್ತಾ ಇದ್ದರು. ಒಡನೆಯೇ ಇಬ್ಬರು ಪೋಲೀಸರು ಮನೆಯ ಒಳಹೊಕ್ಕರು. ಆನಂದರಾಯರಿಗೆ ಆಶ್ಚರ್ಯವಾಯಿತು.

ಪೋಲೀಸ್—ನಿಮಗೆ ಸ್ಟೇಷನಿಗೆ ಬರಲು ಅಪ್ಪಣೆಯಾಗಿದೆ.

ಆನಂದ—ಯಾಕಾಗಿ ನನ್ನನ್ನು ಬರಹೇಳಿದರು?

ಪೋಲೀಸ್—ಆ ವಿಷಯ ನಮಗೆ ತಿಳಿದಿಲ್ಲ

ಪೋಲೀಸರು ಆನಂದರಾಯರ ಕೈಗೆ ಬೇಡಿಯನ್ನು ತೊಡಿಸಿದರು, ಅಲ್ಲಿಂದ ಸ್ಟೇಷನಿಗೆ ಕರೆದುಕೊಂಡು ಬಂದರು.

ಆನಂದ—(ಸಬ್ ಇನ್‌ಸ್ಪೆಕ್ಟರರೊಡನೆ) ನನ್ನನ್ನು ಯಾವ ಕಾರ್ಯಕ್ಕೋಸ್ಕರ ಇಲ್ಲಿಗೆ ಕರೆತಂದಿರಿ?

ಸಬ್—ಆ ವಿಷಯ ನಿಮಗೆ ಬೇಡ. ನಿಮ್ಮನ್ನು ರಂಗಪುರಕ್ಕೆ ಕಳುಹಿಸಲು ನಮಗೆ ತಂತಿ ಬಂದಿರುತ್ತದೆ. ಆ ಪ್ರಕಾರ ನೀವು ಈಗಲೇ ರಂಗಪುರಕ್ಕೆ ಹೋಗತಕ್ಕದ್ದು. ಬಳಿಕ ಸಬ್ ಇನ್‌ಸ್ಪೆಕ್ಟರರು ಹನ್ನೊಂದು ಗಂಟೆಯ ಪೇಸೆಂಜರ್ ಬಂಡಿಯಲ್ಲಿ ಎರಡು ಜನ ಪೋಲೀಸ್ ಜವಾನರೊಂದಿಗೆ ಅವರನ್ನು ರಂಗಪುರಕ್ಕೆ ಕಳುಹಿಸಿದರು.

ಪ್ರಾತಃಕಾಲ ಆರುಗಂಟೆಗೆ ಸರಿಯಾಗಿ ಆ ಟ್ರೇನು ರಂಗಪುರವನ್ನು ತಲಪಿತು. ಪೋಲೀಸರು ಆನಂದರಾಯರೊಡನೆ ರಂಗಪುರದ ಸ್ಟೇಷನಿಗೆ ಬಂದರು. ಆನಂದರಾಯರು ದೇವರನ್ನು ಒಂದೇಸವನೆ ಪ್ರಾರ್ಥಿಸುತ್ತಿದ್ದರು. ಅರಬ್‌ಖಾನರು ಅಲ್ಲಿಗೆ ಆಗಮಿಸಿ ಆನಂದರಾಯರ ಸಂಪೂರ್ಣ ಸಂಗತಿಗಳನ್ನು ತಿಳಕೊಂಡು ಕುಮಾರಸ್ವಾಮಿಯವರ ಎದೆಗೆ ಚುಚ್ಚಿದ್ದ ಚೂರಿಯನ್ನು ತಂದು "ಇದು ನಿಮ್ಮ ಕತ್ತಿಯೇ?

ಆನಂದ—ಅದು ಸರಿ. ಇದು ಇಲ್ಲಿಗೆ ಹೇಗೆ ಬಂತು?

ಅರಬ್—ಪಾಪಿ! ಕುಮಾರಸ್ವಾಮಿಯವರನ್ನು ನಿನ್ನ ಕೈಯಿಂದಲೇ ಕೊಲೆ ಮಾಡಿ, ಈಗ ಏನೂ ತಿಳಿಯದಂತೆ ನಟಿಸುವೆಯಾ? ಅದೂ ಅಲ್ಲದೆ ನಿನ್ನ ಸ್ವಹಸ್ತದಿಂದಲೇ ರಕ್ತದಲ್ಲಿ "ನಾನೇ ಕೊಲೆಗಡಕ" ಎಂಬುದಾಗಿಯೂ ಬರೆದಿರುತ್ತೀ.

ಆನಂದರಾಯರಿಗೆ ಈ ಮಾತುಗಳನ್ನು ಕೇಳುವಾಗ ದಿಗಿಲು ಬಿದ್ದಂತಾಯಿತು. ಆದರೂ ಕುಮಾರಸ್ವಾಮಿಯವರ ಕೊಲೆನಡೆದಿದೆಯೆಂದು ತಿಳಿಯಿತು.

ಆನಂದ—ನಾನು ನನ್ನ ಆತ್ಮರಕ್ಷಣೆಗಾಗಿ ನನ್ನೊಡನಿಟ್ಟುಕೊಂಡಿದ್ದ ಈ ಕತ್ತಿಯನ್ನು ಸಾಣೆಹಿಡಿಯಲಿಕ್ಕಾಗಿ ಸಾಣೆಯವನೊಡನೆ ಕೊಟ್ಟಿದ್ದೆ. ಇದು ಪ್ರಾಯಶಃ ನನ್ನ ದುರದೃಷ್ಟದಿಂದ ಕೊಲೆಗೆ ಬಂದಿರಬೇಕು; ಆದರೂ ನನಗೆ ಕುಮಾರಸ್ವಾಮಿಯರ ಕೊಲೆಗೈಯುವ ಆಗತ್ಯವೇನು? ನನಗೂ ಅವರಿಗೂ ಏನೊಂದೂ ಸಂಬಂಧವಿಲ್ಲವಲ್ಲಾ!

ಸಬ್—ಸುಳ್ಳು ಹೇಳುವೆಯಾ? ಎರಡು ವರ್ಷಗಳ ಹಿಂದೆ ನೀನು ನಿನ್ನ ಮಾವನ ಕ್ರಿಮಿನಲ್ ಮೊಕದ್ದಮೆಯಲ್ಲಿ ಸರ್ಕಲ್ ಇನ್‌ಸ್ಪೆಕ್ಟರರ ವಿರುದ್ಧ

ಸಾಕ್ಷಿಹೇಳಲಿಲ್ಲವೇ? ಆ ಮೊಕದ್ದಮೆಯಲ್ಲಿ ಸರ್ಕಲ್ ಇನ್‌ಸ್ಪೆಕ್ಟರರ ಸಾಹಸ ದಿಂದಾಗಿ ನಿನ್ನ ಮಾವನು ಗಲ್ಲಿಗೇರಿಸಲ್ಪಟ್ಟನು. ಈ ವಿಷಯದಲ್ಲಿ ನಿನಗೆ ಸರ್ಕಲ್ ಇನ್‌ಸ್ಪೆಕ್ಟರರ ಮೇಲೆ ದ್ವೇಷವಿದೆ ಅದನ್ನು ಸಾಧಿಸುವುದಕ್ಕಾಗಿ ಅವರ ಕೊಲೆಗೈದಿರುವೆ

ಆನಂದ—ಈ ಕೃತ್ಯವು ನಡೆದುದಾದರೂ ಯಾವಾಗ?

ಸಬ್—ತಿಳಿಯದಂತೆ ನಟಿಸುವಿಯಾ? ಆದರೂ ಹೇಳುತ್ತೇನೆ. ನಿನ್ನಿಂದ ಸಾಧ್ಯವಾದಷ್ಟು ತಪ್ಪಿಸಿಕೊಳ್ಳಲು ಪ್ರಯತ್ನಿಸು. ಮೊನ್ನೆಯ ರಾತ್ರಿ ನಡೆಯಿತು.

ಆನಂದ—ಆ ಸಮಯದಲ್ಲಿ ನಾನು ಇಲ್ಲೆಲ್ಲಿಯೂ ಇರಲಿಲ್ಲ. ನನ್ನ ಒಂದು ಕಾರ್ಯನಿಮಿತ್ತ ಮುಂಬಾಯಿಗೆ ಹೋಗಿದ್ದೆ.

ಸಬ್—ಅದಕ್ಕೆ ನಿದರ್ಶನವೇನು?

ಆನಂದ—ನಾನು ಮೊನ್ನೆರಾತ್ರಿ ಮುಂಬಯಿಯ ದಲಾಲ್ ಸ್ಟ್ರೀಟ್‌ನೊಳಗಿನ ಜೈರಾಜ್ ಕೆಫೆಯಲ್ಲಿ ಉಳಕೊಂಡಿದ್ದೆ. ಅಲ್ಲಿ ವಿಚಾರಿಸಿ ತಿಳಿಯಿರಿ. ಆಗ ಸ್ಪಷ್ಟವಾಗುವುದು.

ಇಷ್ಟರಲ್ಲಿ ಅರಬ್‌ಖಾನರ ಮನಸ್ಸಿನಲ್ಲಿ ಆನಂದರಾಯರ ವಿಷಯದಲ್ಲಿ ಸ್ವಲ್ಪ ಸಂಶಯತೋರಿತು. ಕೂಡಲೇ ಅವರು ಬೊಂಬೈಯ ದಲಾಲ್ ಸ್ಟ್ರೀಟನೊಳಗಿನ ಜೈರಾಜ್ ಕೆಫೆಗೆ ಅವರ ಹೊಟೆಲಿನ ಹದಿನೆಂಟನೇ ನಂಬರಿನ ರೂಮಿನಲ್ಲಿ ಮೊನ್ನೆ ರಾತ್ರಿ ಉಳಕೊಂಡಿದ್ದವರ ಹೆಸರು ಮತ್ತು ಫೋಟೋವನ್ನು ಕೂಡಲೇ ಕಳುಹಿಸಿಕೊಡಬೇಕೆಂದು ತಂತಿಯನ್ನು ಕೊಟ್ಟರು.

ನಾಲ್ಕುಗಂಟೆಯ ನಂತರ ಬೊಂಬ್ಯಾಯಿಂದ ತಂತಿಯಲ್ಲಿ 'ಸ್ವಾಮಿನಾಥ ಎಂಬಲ್ಲರುವ ಆನಂದರಾಯರೆಂದೂ, ಛಾವಚಿತ್ರವನ್ನು ಎಕ್ಸಪ್ರೆಸ್ ಡೆಲಿವರಿ ಮೂಲಕ ಕಳುಹಿಸಿರುವೆವೆಂದೂ' ಉತ್ತರ ಬಂದಿತು. ಇದನ್ನು ಓದಿದೊಡನೆ ಅರಬ್‌ಖಾನರು ಆಶ್ಚರ್ಯಮಗ್ನರಾಗಿ ಕುಳಿತುಬಿಟ್ಟರು.

೦೦ ೦೦ ೦೦ ೦೦ ೦೦

ಮರುದಿವಸ ಅರಬ್‌ಖಾನರು ಸ್ಟೇಷನಿನಲ್ಲಿ ಕುಳಿತುಕೊಂಡು ವರ್ತಮಾನ ಪತ್ರಿಕೆಯನ್ನೋದುತ್ತಿದ್ದರು. ಅಷ್ಟರಲ್ಲಿ ಅಂಚೆಯವನು ಸಾಯಕಲಿನಲ್ಲಿ ಬಂದು ಒಂದು ಎಕ್ಸಪ್ರೆಸ್ ಕವರನ್ನು ಕೊಟ್ಟು ಹೋದನು. ಅದನ್ನು

ಒಡೆದು ನೋಡುವಾಗ ಅದರೊಳಗೆ ಆನಂದರಾಯರ ಛಾಯಾ ಚಿತ್ರವು ಹೊಳೆಯುತ್ತಿತ್ತು. ಚಿತ್ರವನ್ನು ನೋಡುತ್ತಾ ಅರಬ್‌ಖಾನರು ವಿಚಾರ ಪರವಶರಾಗಿ ಕುಳಿತುಬಿಟ್ಟರು.

ಖಾನರು ವಿಚಾರಮಗ್ನರಾಗಿರುವುದನ್ನು ನೋಡಿ ಹೆಡ್ ಕೊನ್ ಸ್ಟೇಬಲರು " ಏನು ಸ್ವಾಮಿ, ಬಹಳ ಆಲೋಚನೆ ಮಾಡುತ್ತಿರುವಿರಿ? ವಿಷ ಯವೇನಾಯಿತು? ಎನ್ನಲು ಅರಬ್‌ಖಾನರು ಆನಂದರಾಯರ ಸಂಪೂರ್ಣ ವಿಷಯಗಳನ್ನೆಲ್ಲಾ ಹೇಳಿ ಭಾವಚಿತ್ರವನ್ನು ಅವರ ಕೈಗಿತ್ತರು.

ಹೆಡ್—ಹಾಗಿದ್ದರೆ ಯಾವನೋ ಒಬ್ಬ ಧೂರ್ತನು ಈ ಕೃತ್ಯವನ್ನು ಮಾಡಿರಬೇಕು. ಮತ್ತು ಹೊರೆಯನ್ನು ಆನಂದರಾಯ ರತಲೆಯ ಮೇಲಿ ಟ್ಟಿರುತ್ತಾರೆ.

ಅರಬ್—ನೀವನ್ನುವುದು ನಿಜ. ಈ ಕಾರ್ಯವನ್ನು ನಮ್ಮಿಂದ ಪತ್ತೆ ಹಚ್ಚಲು ಸಾಧ್ಯವಿಲ್ಲ. ಕೆಲಸವು ಎಷ್ಟು ಸರಳವಾಗಿ ಕಾಣಿಸಲ್ಪಟ್ಟಿತೋ ಅಷ್ಟೇ ಕಠಿಣವೂ ಇರುತ್ತದೆ.

ಹೆಡ್—ಹಾಗಾದರೆ ಈಗೇನು ಮಾಡೋಣ?

ಅರಬ್—ನಾವು ಸಮಯ ಕಳೆಯದೆ ರಂಗಪುರದ ಸುಪ್ರಸಿದ್ಧ ಪತ್ತೆ ದಾರರಾದ ಶ್ಯಾಮರಾಯರನ್ನು ಇಲ್ಲಿಗೆ ಬರಮಾಡಿ ಮುಂದಿನ ನಮ್ಮ ಕರ್ತವ್ಯವನ್ನು ಆಲೋಚಿಸತಕ್ಕದು

ಆನಂತರ ಅವರು ಒಬ್ಬ ಪೋಲೀಸನೊಡನೆ ಒಂದು ಪತ್ರವನ್ನು ಕೊಟ್ಟು ಅಜಾದ್ ಬೀದಿಯೊಳಗಿನ ಶ್ಯಾಮರಾಯರ ಮನೆಗೆ ಕಳುಹಿಸಿದರು.

---

# ಪತ್ತೆದಾರ ಶ್ಯಾಮರಾವ

ರಂಗಪುರದ ಪತ್ತೆದಾರ ಶ್ಯಾಮರಾಯರೆಂದರೆ ಸಾಮಾನ್ಯ ಪತ್ತೆ ದಾರರಲ್ಲ. ಅವರು ಈ ಮೊದಲು ಕೆಲವು ಕಠಿಣವಾದ ವಿಷಯಗಳನ್ನು ಗೌಪ್ಯವಾಗಿ ತುಬ್ಬು ಮಾಡಿ ಎಷ್ಟೋ ಜನ ಧೂರ್ತರಿಗೆ ಶಿಕ್ಷೆವಿಧಿಸಿರುವರು. ಆದುದರಿಂದ ಶ್ಯಾಮರಾಯರೆಂದರೆ ಪ್ರತಿಯೊಬ್ಬರಿಗೂ ಅಚ್ಚು ಮೆಚ್ಚಿನವ ರಾಗಿದ್ದರು. ಅವರು ಅಜಾದ್ ಬೀದಿಯ ಒಳಿಯ ಒಂದು ಮನೆಯಲ್ಲಿ ವಾಸಿಸುತ್ತಿದ್ದರು.

ಈ ದಿನ ಬೆಳಿಗ್ಗೆ ಸಾಧಾರಣ ಹನ್ನೊಂದು ಗಂಟೆಯ ಸಮಯದಲ್ಲಿ ಅವರು ತಮ್ಮ ಆಫೀಸು ಕೋಣೆಯಲ್ಲಿ ಕುಳಿತು ಏನನ್ನೊ ಬರೆಯುತ್ತಿದ್ದರು. ಒಡನೆಯೇ ಹೊರಗಿನ ಗಂಟೆಯು "ಢಣಲ್" ಎಂದು ಬಾರಿಸಿದುದು ಕೇಳಿಸಿತು.

ಶ್ಯಾಮರಾಯರು ಬರೆಯುವುದನ್ನು ಅಲ್ಲೇ ಬಿಟ್ಟು ಹೊರಗೆ ಹೋಗಿ ನೋಡಿದರು. ಬಾಗಿಲಿನ ಬಳಿ ಒಬ್ಬ ಜವಾನನು ನಿಂತುಕೊಂಡಿದ್ದನು. ಅವನು ಶ್ಯಾಮರಾಯರ ಕೈಗೆ ಒಂದು ಕಾಗದವನ್ನಿತ್ತು ಅಲ್ಲಿಂದ ಹೊರಟು ಹೋದನು. ಶ್ಯಾಮರಾಯರು ಕಾಗದವನ್ನು ಬಿಚ್ಚಿ ಓದಿದರು. ಅದರ ಸಾರಾಂಶವು ಈ ರೀತಿಯಾಗಿತ್ತು:—

ರಂಗಪುರದ ಸುಪ್ರಸಿದ್ಧ ಪತ್ತೆದಾರ್ ಶ್ಯಾಮರಾಯರಿಗೆ ಅರಬ್ ಖಾನನ ನಮಸ್ಕಾರಗಳು:-

ತಾವು ಒಂದು ಅಗತ್ಯ ಕೆಲಸ ನಿಮಿತ್ತ ಕೂಡಲೇ ಸ್ಟೇಷನಿಗೆ ಹೊರಟು ಬರಬೇಕಾಗಿ ಅಪೇಕ್ಷಿಸುತ್ತೇನೆ.

ಇಂತಿ ನಮಸ್ಕಾರಗಳು
ಅರಬ್ ಖಾನ್.

ಕೂಡಲೇ ಶ್ಯಾಮರಾಯರು ಬರೆಯುವುದನ್ನು ಅಲ್ಲೇ ಬಿಟ್ಟು ಶರ್ಟನ್ನು ಹಾಕಿಕೊಂಡು ಸಿಗರೇಟ್ ಹೊತ್ತಿಸುತ್ತಾ ಸ್ಟೇಷನಿನ ಕಡೆಗೆ ಹೊರಟರು.

ಸ್ಟೇಷನಿನ ಬಾಗಿಲಲ್ಲೇ ಸಬ್ ಇನ್‌ಸ್ಪೆಕ್ಟರ್ ಅರಬ್‌ಖಾನರು ಇವರನ್ನು ಸ್ವಾಗತಿಸಿ ಒಳಕರೆಕೊಂಡೊಯ್ದರು. ತದನಂತರ ಒಬ್ಬ ಪೋಲೀಸ್ ಜವಾನನೊಡನೆ ಹೋಟೆಲಿನಿಂದ ಕಾಫಿಯನ್ನು ತರಲು ಹೇಳಿದರು.

ಶ್ಯಾಮರಾವ್— ಖಾನರೇ ಅರಬ್, ನನ್ನನ್ನು ಯಾವ ಅಗತ್ಯದ ವಿಷಯಕ್ಕಾಗಿ ಬರಮಾಡಿದಿರಿ ?

ಅರಬ್—ಅಂತಹ ವಿಶೇಷ ಕಾರ್ಯವಿದ್ದುದರಿಂದಲೇ ನಿಮ್ಮನ್ನು ಇಲ್ಲಿಯ ತನಕ ಬರಹೇಳಬೇಕಾಯಿತು.

ಶ್ಯಾಮ-ಅದಾದರೂ ಏನು ?

ಅರಬ್—ಮೊನ್ನಿನ ಕುಮಾರ ಸ್ವಾಮಿಯವರ ಕೊಲೆಯ ವಿಷಯ ನಿಮಗೆ ತಿಳಿದಿದೆಯಷ್ಟೆ ?

ಶ್ಯಾಮು-ಸರಿ. ತಿಳಿದಿರುವೆನು.

ಅಷ್ಟರಲ್ಲಿ ಕಾಫಿಯು ಬಂದಿತು. ಅದನ್ನು ಇಬ್ಬರೂ ಕುಡಿದು ಸಿಗರೇಟ್ ಸೇದುತ್ತಾ ಅರಬ್ ಖಾನರು ನಡೆದ ಸಂಗತಿಗಳನ್ನೆಲ್ಲಾ ಒಂದೂ ಬಿಡದೆ ವಿವರಿಸಿದರು. ಇದನ್ನೆಲ್ಲಾ ಕೇಳಿದ ಶ್ಯಾಮುರಾಯರು ಆಶ್ಚರ್ಯ ದಿಂದ ಈ ಕೊಲೆಮಾಡಲು ಸಾಮಾನ್ಯದವರಿಂದ ಸಾಧ್ಯವಿಲ್ಲ, ಆದರೆ ಆಗಂದರಾಯನು ಕೊಲೆ ಮಾಡಲಿಲ್ಲವೆಂಬುದಾಗಿ ಹೇಳಬಹುದು. ಅವನೇ ಕೊಲೆಗೈದಿರುವನಾದರೆ ತಾನೆಂದು ತಿಳಿಯಬೇಕೆಂದೆ ತನ್ನ ಚೂರಿಯನ್ನು ಅಲ್ಲೇ ಬಿಟ್ಟು ಗೋಡೆಯಮೇಲೆ ನಾನೇ 'ಕೊಲೆಗಡುಕ' ಎಂಬುದಾಗಿ ಬರೆದಿರು ವನು. ಕೊಲೆ ಮಾಡಿದುದನ್ನು ಆತನು ಒಪ್ಪಿಕೊಳ್ಳಲಿಲ್ಲವೆಂದಾಗ ಈ ಕೃತ್ಯವು ಅವನಿಂದ ಮಾಡಲ್ಪಡಲಿಲ್ಲವೆಂದು ಖಂಡಿತವಾಗಿ ಹೇಳಬಹುದು. ಅಲ್ಲದೆ ಇದಕ್ಕೆ, ನಿದರ್ಶನವಾಗಿ ಅವನು ಆ ಸಂದರ್ಭದಲ್ಲಿ ಮುಂಬೈಯಲ್ಲಿದ ನೆಂಬುದು ಸ್ಪಷ್ಟವಷ್ಟೆ! ಯಾರೋ ಖೂಳರು ಅವನ ಚೂರಿಯನ್ನು ಕದ್ದು ಅದರಲ್ಲೇ ಖೂನಿಮಾಡಿ, ಅಪರಾಧವನ್ನು ಆನಂದರಾಯನ ಮೇಲೆ ಹೊರಿಸಬೇಕೆಂದು ಉಪಾಯ ಹೂಡಿರುತ್ತಾರೆ. ಈ ಚೂರಿಯು ಅವನ ದೆಂಬುದು ನಿಜವಷ್ಟೆ?

ಅರಬ್—ಚೂರಿಯು ಅವನದೆಂದು ಅವನು ಒಪ್ಪಿಕೊಳ್ಳುವನು.

ಶ್ಯಾಮು—ಹಾಗಾದರೆ ಅದು ಇಲ್ಲಿಗೆ ಹೇಗೆ ಬಂತು?

ಅರಬ್—ಅವನು ಇದನ್ನು ಸ್ವಾಮಿನಾಥದಲ್ಲಿ ಒಬ್ಬನೊಡನೆ ಸಾಣೆ ಹಿಡಿಯಲು ಕೊಟ್ಟಿದ್ದನಂತೆ. ಅದನ್ನು ಕಳ್ಳರು ಅಲ್ಲಿಂದ ಲಪಟಾಯಿಸಿ ಈ ಕೆಲಸಕ್ಕಾಗಿ ತಂದಿರಬೇಕು.

ಶ್ಯಾಮು—ನಾನಿನ್ನು ತೆರಳುವೆ. ಸಾಧ್ಯವಾದಷ್ಟು ಪ್ರಯತ್ನಿಸುವೆ.

ಬಳಿಕ ಶ್ಯಾಮುರಾಯರು ಆನಂದರಾಯನನ್ನು ಕೈದು ಮಾಡಿಟ್ಟಲ್ಲಿಗೆ ಹೋದರು. ಅಲ್ಲಿ ಒಂದು ಕಡೆ ಆನಂದರಾಯರು ಕುಳಿತು ದುಃಖಿಸುತ್ತಿದ್ದರು. ಅವರನ್ನು ನೋಡಿದೊಡನೆ ಶ್ಯಾಮುರಾಯರಲ್ಲಿ ಕನಿಕರ ಭಾವ ಉಂಟಾಯಿತು.

ಶ್ಯಾಮು—ನಿನಗೆ ಕುಮಾರ ಸ್ವಾಮಿಯವರ ಪರಿಚಯವಿದೆಯೇ?

ಆನಂದ—ಸರಿಯಾಗಿದೆ. ಅವರು ಎರಡು ವರ್ಷಗಳ ಹಿಂದೆ ನನ್ನ ಮಾವನು ಕಳ್ಳನೊಬ್ಬನನ್ನು ಕೊಂದುದಕ್ಕಾಗಿ ಬಹಳ ಪ್ರಯತ್ನಪಟ್ಟು

ಅವರಿಗೆ ಫಾಶಿ ಶಿಕ್ಷೆಯನ್ನು ವಿಧಿಸಿರುತ್ತಾರೆ. ನಾನು ನನ್ನ ಮಾವನ ಪಕ್ಷದಿಂದ ಬಂದು ಸಾಕ್ಷಿಯನ್ನು ಹೇಳಿದ್ದೆ. ನನ್ನ ಮಾವನ ಮೊಕದ್ದ ಮೆಯ ವಿಷಯದಲ್ಲಿ ನನಗೆ ಕುಮಾರಸ್ವಾಮಿಯವರಲ್ಲಿ ಬಹಳ ಬೇಸರ ವಿರುವುದು ಸರಿ. ನನ್ನ ಕತ್ತಿಯು ಯಾವನೋ ಓರ್ವ ಧೂರ್ತನ ಕೈಗೆ ಸಿಕ್ಕಿ ಆರೋಪವನ್ನು ನನಗೆ ಹೊರಿಸುವುದಕ್ಕಾಗಿ ಆತ ಈ ರೀತಿಯಾಗಿ ಕೊಲೆ ಮಾಡಿರುತ್ತಾನೆ. ಸರ್ಕಲ್ ಇನ್‌ಸ್ಪೆಕ್ಟರರ ವಿರುದ್ಧ ಸಾಕ್ಷಿ ಹೇಳಿದುದರಿಂದ ರಿಕಾರ್ಡನ್ನು ನೋಡಿ ನನ್ನನ್ನು ಇಲ್ಲಿಗೆ ಹಿಡಿದು ತಂದರು. ನಾನು ಈ ಕಾರ್ಯವನ್ನು ಮಾಡಿರುವೆನೋ ಇಲ್ಲವೋ ಎಂಬುದು ಪರಮೇಶ್ವರನಿಗೇ ಗೊತ್ತು. ನನ್ನನ್ನು ಕಾಪಾಡುವ ಭಾರವು ನಿಮ್ಮ ಮೇಲೆ ಇರುತ್ತದೆ.

ಹೀಗೆಂದು ಹೇಳಿ ಕಣ್ಣೀರಿಡುತ್ತಿರುವ ಆನಂದರಾಯನನ್ನು ನೋಡಿ ಶ್ಯಾಮರಾಯರಿಗೆ ಕನಿಕರ ಹುಟ್ಟಿತು.

ಶ್ಯಾಮ—ಈ ಸಂಗತಿಯನ್ನು ನಾನು ಆದಷ್ಟು ಬೇಗನೆ ತುಬ್ಬು ಮಾಡಿ ನಿನ್ನನ್ನು ಬಂಧಮುಕ್ತನನ್ನಾಗಿ ಮಾಡುವೆನು. ಅಷ್ಟರ ತನಕ ನೀನು ಸುಮ್ಮನಿರು. ನಿನಗೇನೂ ಭಯವಿಲ್ಲ, ಎಂದವರೇ ಸರ್ಕಲ್ ಇನ್ ಸ್ಪೆಕ್ಟರರ ಸಂಬಂಧವ ಕಾಗದ ಪತ್ರಗಳನ್ನು ತೆಗೆದುಕೊಂಡು ಅಲ್ಲಿಂದ ಹೊರ ಬಿದ್ದರು.

---

# ಸುರಂಗ ಮಾರ್ಗ

ಕುಮಾರ ಸ್ವಾಮಿಯವರು ಮರಣಪಟ್ಟು ದಿನಗಳು ಮೂರು ಸಂದಿ ದ್ದುವು. ಮನೋರಮೆಯು ಬಹಳ ದುಃಖದಿಂದ ಮನೆಯಲ್ಲಿದ್ದಳು. ಮೃತ ಶರೀರವನ್ನು ದಹಿಸಿದ್ದರು. ಬೆಳಗಿನ ಸಮಯ. ಮನೋರಮೆಯು ಒಂದು ಕೋಣೆಯಲ್ಲಿ ಕುಳಿತುಕೊಂಡು ಬಹಳವಾಗಿ ರೋದಿಸುತ್ತಿದ್ದಳು. ಹೊರ ಗಿನಿಂದ ಯಾರೋ ಅಮ್ಮಾ, ಎಂದು ಕರೆಯುವುದು ಕೇಳಿಸಿತು. ಮನೋ ರಮೆಯು ಹೊರಗೆ ಹೋಗಿ ನೋಡಿದಳು. ಬಂದವರು ಶ್ಯಾಮರಾಯ ರಾಗಿದ್ದರು.

ಮನೋರಮೆ—( ಕಣ್ಣೀರನ್ನು ಒರೆಸಿಕೊಳ್ಳುತ್ತಾ ) ಒಳಗೆ ಬನ್ನಿ ಶ್ಯಾಮರಾಯರೇ, ಎಂದು ಒಂದು ಕುರ್ಚಿಯನ್ನು ತೋರಿಸಿದಳು.

ಶ್ಯಾಮ—ಅಮ್ಮಾ, ದುಃಖಿಸಬೇಡಿರಿ ಪರಮಾತ್ಮನ ಆಜ್ಞೆಯಂತೆ ಅವರು ಹೊರಟು ಹೋದರು. ಅದಕ್ಕಾಗಿ ಇನ್ನು ದುಃಖಿಸಿದರೇನು ಫಲ? ಕೊಲೆಗಡಕನ ಪತ್ತೆ ಹಚ್ಚುವುದೇ ಮುಂದೆ ಮಾಡಬೇಕಾದ ಕರ್ತವ್ಯ. ಈ ಕಾರ್ಯವು ಅಷ್ಟು ಸುಲಭದಿಂದ ಸಾಧ್ಯವಿಲ್ಲ. ಅಮ್ಮಾ, ಕೊಲೆಗಡೆದಿರುವ ಸ್ಥಳವಾದರೂ ಎಲ್ಲಿ?

ಕೂಡಲೇ ಮನೋರಮೆಯು ಶ್ಯಾಮರಾಯರಿಗೆ ಆ ಕೋಣೆಯನ್ನು ತೋರಿಸಿದಳು.

ಮನೋರಮೆ—ಈ ಕೋಣೆಯ ಮಂಚದ ಮೇಲೆ ಅವರು ಪವಡಿಸಿದ್ದರು. ಇದರ ಬಾಗಿಲು ಕೋಣೆಯ ಒಳಗಿನಿಂದ ಚಿಲಕ ಹಾಕಿ ಮುಚ್ಚಲ್ಪಟ್ಟಿರಲಿಲ್ಲ. ಇದಕ್ಕೆ ತಾಗಿರುವ ಆ ಕೋಣೆಯಲ್ಲಿ ನಾನು ಮಲಗಿದ್ದೆ. ಅದರ ಬಾಗಿಲನ್ನು ಭದ್ರವಾಗಿ ಮುಚ್ಚಿದ್ದೆನು. ಆದುದರಿಂದ ಈ ಭಾಗಕ್ಕೆ ಪ್ರವೇಶಿಸಲು ಬೇರೆಲ್ಲಿಯೂ ಸ್ಥಳವಿಲ್ಲ. ಕಳ್ಳರು ಇಲ್ಲಿಗೆ ರಾತ್ರಿಯ ಸಮಯ ಹೇಗೆ ಬಂದರೋ ತಿಳಿಯುವುದಿಲ್ಲ.

ಶ್ಯಾಮರಾಯರು ಅಲ್ಲೆಲ್ಲಾ ಸೂಕ್ಷ್ಮವಾಗಿ ಪರೀಕ್ಷಿಸಹತ್ತಿದರು. ಮಂಚದ ಕೆಳಗಡೆಯ ನೆಲವನ್ನು ನೋಡುವಾಗ ಅಲ್ಲಿ ಒಂದು ದಪ್ಪವಾದ ಹಲಗೆಯು ಇರಿಸಲ್ಪಟ್ಟಿತ್ತು.

ಶ್ಯಾಮ—ಇದ್ಯಾಕಾಗಿ ಇಲ್ಲಿ ಹಲಗೆಯನ್ನಿಟ್ಟಿರುವಿರಿ?

ಮನೋ—ಈ ಹಲಗೆಯ ಅಡಿಯಲ್ಲಿ ಒಂದು ಹೊಂಡವಿರುವುದು. ಇದನ್ನು ಬಾಳೆಕಾಯನ್ನು ಹಣ್ಣುಮಾಡುವದಕ್ಕೋಸ್ಕರ ಉಪಯೋಗಿಸುತ್ತಿದ್ದೆವು.

ಶ್ಯಾಮ—ಸರಿ. ನೀವು ಈ ಮನೆಯನ್ನು ಬಾಡಿಗೆಗೆ ಪಡೆಕೊಂಡು ಎಷ್ಟು ಸಮಯವಾಯಿತು?

ಮನೋ—ಕೇವಲ ಹದಿನೈದು ದಿವಸಗಳುರುಳಿದುವಷ್ಟೆ.

ಶ್ಯಾಮ—ನೀವು ಬರುವಾಗಲೇ ಈ ಹೊಂಡವಿತ್ತೇ?

ಮನೋ—ಸರಿ. ನಾವು ಇಲ್ಲಿಗೆ ಪ್ರವೇಶಿಸುವಾಗಲೇ ಇದ್ದಿತು.

ಬಳಿಕ ಶ್ಯಾಮರಾಯರು ಆ ಹೊಂಡದ ಮೇಲಿನ ಹಲಗೆಯನ್ನು ಪ್ರಯತ್ನಪಟ್ಟು ತೆಗೆದು ಆಚೆಗೆ ಸರಿಸಿ, ಹೊಂಡವನ್ನು ಸೂಕ್ಷ್ಮವಾಗಿ ಪರಿ

ತೀಲಿಸಿದರು. ಹೊಂಡಕ್ಕೆ ಕೆಳಭಾಗಕ್ಕೆ ಹಾಸಲ್ಪಟ್ಟ ಹಲಗೆಯು ಹೊರಗೆ ಬರಲು ಸಾಧ್ಯವಾಗುವಂತೆ ತೋರಿತು.

ಅವರು ಬಹು ಪ್ರಯಾಸದಿಂದ ಜಾಗ್ರತೆಯಾಗಿ ಹಲಗೆಯನ್ನು ಮೇಲಕ್ಕೆ ಎಳೆದು ತೆಗೆವರು ಇದೇನಾಶ್ಚರ್ಯ! ಆ ಸ್ಥಳದಲ್ಲಿ ದೊಡ್ಡದಾದ ಒಂದು ಸುರಂಗ ಮಾರ್ಗವೇ ಕಾಣಿಸಿತು

ಶಾಮರಾಯರು ಒಂದು ಟಾರ್ಚ ಲೈಟನ್ನು ತೆಗೆದುಕೊಂಡು ಸುರಂಗದೊಳಗೆ ಇಳಿದರು. ಅದರೊಳಗೆ ಒಬ್ಬ ಮನುಷ್ಯನಿಗೆ ಬಗ್ಗಿಕೊಂಡು ಹೋಗಲು ಮಾತ್ರ ಸ್ಥಳವಿದ್ದಿತಷ್ಟೆ. ನೆಲದ ಮೇಲೆ ತುಂಬಾ ಧೂಳಿದ್ದಿತು. ಹೆಚ್ಚಾಗಿ ಮನುಷ್ಯಸಂಚಾರವಿರುವಂತೆ ತೋರಲಿಲ್ಲ. ಮಾಸಿದ ಹೆಜ್ಜೆಗಳು ಮತ್ತು ಯಾವುದೋ ಒಂದು ಭಾರವಾದ ವಸ್ತುವನ್ನು ನೆಲದ ಮೇಲೆ ಎಳೆದುಕೊಂಡು ಹೋದಂತೆ ಭಾಸವಾಗುತ್ತಿತ್ತು. ಸಾಧಾರಣ ಇಪ್ಪತ್ತೈದು ಗಜ ದೂರ ಹೋಗುವಷ್ಟರಲ್ಲಿ ಸುರಂಗ ಮಾರ್ಗವು ಮುಗಿಯಿತು. ಮೇಲಿನ ಭಾಗದಲ್ಲಿ ಒಂದು ಹಲಗೆಯು ಕಾಣಿಸಿತು. ಶ್ಯಾಮರಾಯರು ಹಿಂದೆ ಬಂದು ಮೊದಲಿನಂತೆಯೇ ಆ ಸುರಂಗಮಾರ್ಗವನ್ನು ಮುಚ್ಚಿಬಿಟ್ಟರು.

ಮನೋ—ಈ ಸುರಂಗಮಾರ್ಗ ಯಾವ ಕಡೆ ಹೋಗುವುದು?

ಶ್ಯಾಮ—ಇದು ಈ ಮನೆಯ ಹಿತ್ತಲಿಗೆ ಹೋಗುತ್ತದೆ. ಸಾಧಾರಣ ಇಪ್ಪತ್ತೈದು ಗಜ ದೂರ ಹೋಗುವಷ್ಟರಲ್ಲಿ ದಾರಿಯು ಮುಗಿಯಿತು. ಮುಂದೆ ಒಂದು ಹಲಗೆಯು ಮುಚ್ಚಲ್ಪಟ್ಟಿತ್ತು. ಇದು ಪ್ರಾಯಶಃ ಈ ಮೊದಲು ಈ ಮನೆಯಲ್ಲಿ ವಾಸಮಾಡಿದವರಿಂದ ಮಾಡಲ್ಪಟ್ಟಿರಬೇಕು. ಇಲ್ಲಿ ಈ ಮೊದಲು ಯಾರು ವಾಸಿಸುತ್ತಿದ್ದರು?

ಮನೋ—ಓರ್ವ ಮೋಟರ್ ಕಾರ್ ಡ್ರೈವರನಂತೆ.

ಶ್ಯಾಮ—ಅವನು ಈಗ ಎಲ್ಲಿರುವನು?

ಮನೋ—ಆ ವಿಷಯವನ್ನು ನಾನು ತಿಳದಿಲ್ಲ.

ಶ್ಯಾಮರಾಯರು ಹಿತ್ತಲಿಗೆ ಹೋದರು. ಅಲ್ಲಿ ಒಂದು ಕಡೆ ಮಣ್ಣನ್ನು ಅಗೆದಂತೆ ತೋರಿತು. ಅಲ್ಲಿಯ ಮಣ್ಣನ್ನು ಎರಡು ಅಡಿ ಆಳಕ್ಕೆ ತೆಗೆದಲ್ಲಿ ಹಲಗೆಯು ಕಾಣಿಸಿತು. ಹಲಗೆಯನ್ನು ತೆಗೆದೊಡನೆ ಸುರಂಗವು ಗೋಚರಿಸಿತು. ಶ್ಯಾಮರಾಯರು ಮೊದಲಿನಂತೆಯೇ ಇರಿಸಿ, ಮನೋರಮೆಯೊಡನೆ ಈ ಮನೆಯು ಯಾರದಾಗಿರುತ್ತದೆ?

ಮನೋ—ರಂಗಪುರದ ಪ್ರಸಿದ್ಧ ವ್ಯಾಪಾರಸ್ಥ ಮುಕುಂದರಾಯರದು.

ಶ್ಯಾಮ—ಅಮ್ಮಾ, ನಾನಿನ್ನು ಹೋಗುವೆನು ಸಾಧ್ಯವಾದಷ್ಟು ಬೇಗನೆ ಈ ವಿಷಯವನ್ನು ತುಚ್ಛ ಮಾಡಲಿಕ್ಕಿರುವೆನು.



ಅಲ್ಲಿಂದ ಹೊರಟ ಶ್ಯಾಮರಾಯರು ನೆಟ್ಟಗೆ ಮುಕುಂದರಾಯರಲ್ಲಿಗೆ ಹೋದರು. ಶ್ಯಾಮರಾಯರು ಬರುವುದನ್ನು ಕಂಡೊಡನೆ ಮುಕುಂದರಾಯರೇ ಅವರನ್ನು ಕರೆತಂದು ಕುಳ್ಳಿರಿಸಿ, ಬಂದ ಕಾರ್ಯವನ್ನು ಕೇಳಿದರು

ಶ್ಯಾಮ—ಸರ್ಕಲ್ ಇನ್‌ಸ್ಪೆಕ್ಟರರ ಕೊಲೆಯ ವರ್ತಮಾನವು ನಿಮಗೆ ತಿಳಿದಿರಬಹುದು. ಅವರ ಮನೆಯಲ್ಲಿ ಮೊದಲು ಯಾರು ವಾಸಿಸುತ್ತಿದ್ದರು?

ಮುಕುಂದ—ಓರ್ವ ಮೋಟರ್ ಕಾರ್ ಡ್ರೈವರನು ವಾಸಿಸುತ್ತಿದ್ದನು. ಯಾಕಾಗಿ ಕೇಳಿದಿರಿ?

ಶ್ಯಾಮ—ಕುಮಾರಸ್ವಾಮಿಯವರ ಕೊಲೆಯು ಈಗ ಬಂಧಿಸಲ್ಪಟ್ಟಿರುವ ಆನಂದರಾಯನಿಂದ ಮಾಡಲ್ಪಡಲಿಲ್ಲ. ಈ ಕೃತ್ಯವು ಯಾವನೋ ಒಬ್ಬ ಚಾಣಾಕ್ಷ ಕಳ್ಳನಿಂದ ನಡೆದಿರುವುದು ಇತ್ತೀಚೆಗೆ ನಮ್ಮ ರಂಗಪುರದಲ್ಲಿ ಚಿಕ್ಕ ದೊಡ್ಡ ಕಳವುಗಳಾಗುತ್ತಲೇ ಇವೆ. ಇವುಗಳೆಲ್ಲಾ ಯಾವುದೋ ಒಂದು ಕಳ್ಳರ ತಂಡದಿಂದ ನಡೆಯುತ್ತಿರುವುವು. ಆ ತಂಡವನ್ನು ಬೇಗನೆ ಪತ್ತೆಹಚ್ಚಿ ತಕ್ಕಶಿಕ್ಷೆಯನ್ನು ವಿಧಿಸದಿದ್ದಲ್ಲಿ ರಂಗಪುರದ ಅವಸ್ಥೆಯು ಶೋಚನೀಯವಾಗುವುದೆಂಬುದು ನಿರ್ವಿವಾದ. ಅದಿರಲಿ. ಆ ಡ್ರೈವರನ ಪತ್ತೆಯನ್ನು ಹೇಳಬಲ್ಲಿರಾ?

ಮುಕುಂದ—ಅವನ ಈಗಿನ ವಾಸಸ್ಥಾನವನ್ನು ನಾನು ತಿಳಿದಿಲ್ಲ. ಅವನ ಮೋಟರ್ ಕಾರಿನ ನಂಬರನ್ನು ಮಾತ್ರ ಹೇಳಬಲ್ಲೆನು. ಮುಕುಂದರಾಯರು ಆ ನಂಬರನ್ನು ಒಂದು ಚೀಟಿನಲ್ಲಿ ಬರೆಕೊಟ್ಟರು. ಅದನ್ನು ತೆಗೆದುಕೊಂಡು ಹೊರಟವರೇ ಶ್ಯಾಮರಾಯರು ನೇರವಾಗಿ ತಮ್ಮ ಮನೆಗೇ ಬಂದರು.

# ಡ್ರೈವರನೆಲ್ಲಿ

ಶಾಮರಾಯರು ಮನೆಗೆ ಬಂದವರೇ ಮಧ್ಯಾಹ್ನದ ಊಟವನ್ನು ತೀರಿಸಿಕೊಂಡು ಸರ್ಕಲ್ ಇನ್‌ಸ್ಪೆಕ್ಟರ ಸಂಬಂಧದ ಕಾಗದ-ಪತ್ರಗಳನ್ನು ತಿರುವಿ ಹಾಕುತ್ತಿದ್ದರು. ಅಷ್ಟರಲ್ಲಿ ಅವುಗಳೊಳಗೆ ಅವರಿಗೆ ರಂಗಪುರದ ಪ್ರಸಿದ್ಧ ಡಾಕ್ಟರರಾದ ಯನ್. ಬಿ. ಹೊಳ್ಳರಿಂದ ಕುಮಾರಸ್ವಾಮಿಯವರ ಒಂದು ಹೃದಯರೋಗ ನಿಮಿತ್ತ ಎಕ್ಸರೇ ಪಠ ತೆಗೆದುದರ ರಶೀದಿಯು ಸಿಕ್ಕಿತು. ಕೂಡಲೇ ಅವರು ಕುಮಾರಸ್ವಾಮಿಯವರ ಮೃತದೇಹದ ಎಕ್ಸರೇ ಪಠವನ್ನು ಒಂದು ಕಾಗದದಲ್ಲಿಟ್ಟು ಏನನ್ನೋ ಬರೆದು, ತಮ್ಮ ಆಳು ರಾಮಯ್ಯ ಎಂಬ ಒಬ್ಬ ಕೂಲಿಯವನೊಡನೆ ಕೊಟ್ಟು ಯನ್. ಬಿ. ಹೊಳ್ಳರ ಶಾಪಿಗೆ ಕಳುಹಿಸಿದರು. ರಾಮಯ್ಯನು ಡಾಕ್ಟರರಲ್ಲಿಗೆ ಬಂದು ಕಾಗದ ಮತ್ತು ಎಕ್ಸರೇ ಪಠವನ್ನು ಅವರ ಕೈಗಿತ್ತನು.

ಹೊಳ್ಳರು ಅದನ್ನೋದಿಕೊಂಡು ಕುಮಾರಸ್ವಾಮಿಯವರ ಮೊದಲಿನ ಎಕ್ಸರೇ ಪಠವನ್ನೂ ಮೃತದೇಹದ ಎಕ್ಸರೇ ಪಠವನ್ನೂ ಹೋಲಿಸಿ ನೋಡಿದರು ಬಳಿಕ ಅವರು ರಾಮಯ್ಯನೊಡನೆ ಒಂದು ಕಾಗದದಲ್ಲಿ ಏನನ್ನೋ ಬರೆದುಕೊಟ್ಟು ಕಳುಹಿಸಿದರು

ಶ್ಯಾಮರಾಯರು ಆ ಪತ್ರವನ್ನೋದಿ ಯೋಚನಾಮಗ್ನರಾಗಿ ಆರಾಮಾಸನದ ಮೇಲೆ ಕುಳಿತುಬಿಟ್ಟರು. ಆ ಪತ್ರದಲ್ಲಿ ಈ ರೀತಿಯಾಗಿ ಬರೆಯಲ್ಪಟ್ಟಿತ್ತು.

ಮಿತ್ರರಾದ ಶ್ಯಾಮರಾಯರಿಗೆ ನಮಸ್ಕಾರಗಳು—ಇದೊಂದು ಬಹಳ ಆಶ್ಚರ್ಯದ ವಿಷಯವಾಗಿರುತ್ತದೆ. ಕುಮಾರ ಸ್ವಾಮಿಯವರ ಎರಡು ತಿಂಗಳಿನ ಮೊದಲಿನ ಎಕ್ಸರೇ ಪಠವನ್ನೂ, ಮೃತ ದೇಹದ ಪಠವನ್ನೂ ಹೋಲಿಸಿ ನೋಡಿದೆನು. ಇವೆರಡಕ್ಕೂ ಎಷ್ಟೋ ವ್ಯತ್ಯಾಸಗಳು ಕಂಡು ಬಂದುವು. ಆದುದರಿಂದ ಈ ಮೃತ ದೇಹದ ಪಠವು ಖಂಡಿತವಾಗಿಯೂ ಕುಮಾರಸ್ವಾಮಿಯವರದಲ್ಲವೆಂಬುದನ್ನು ನಂಬಿರಿ. ಕುಮಾರಸ್ವಾಮಿಯವರು ಚೋರರಿಂದ ಕಾಣೆಮಾಡಲ್ಪಟ್ಟಿರುವರೇ ಹೊರತು ಮರಣ ಪಟ್ಟಿಲ್ಲ, ಆದರೆ ನಾನು ಇದನ್ನು ಗೌಪ್ಯವಾಗಿರಿಸುವೆನು. ಕಾರಣವೇನೆಂದರೆ, ಸ್ಫೋಟನಗೊಳಿಸಿದಲ್ಲಿ ನಿಮ್ಮ ಕೆಲಸಕ್ಕೆ ತೊಂದರೆ ಬರಬಹುದು.

ಇಂತಿ ನಮಸ್ಕಾರಗಳು. ಡಿ ಯನ್. ಬಿ. ಹೊಳ್ಳ

● ● ● ●

ಮರು ದಿವಸ ಸಾಧಾರಣ ಸಂಜೆಯ ಐದು ಗಂಟೆಯ ವೇಳೆಯಲ್ಲಿ ರಂಗಪುರದ ಮುಖ್ಯ ರಸ್ತೆಯಲ್ಲಿ ಕಾರೊಂದು ವೇಗವಾಗಿ ಓಡುತ್ತಿತ್ತು. ಒಳಗೆ ಕುಳಿತಿದ್ದ ಡ್ರೈವರನಿಗೆ ಥಕ್ಕನೆ ಯಾರೋ ಬಿಗಿಲು ಮಾಡಿದಂತೆ ಕೇಳಿಸಿತು. ಕೂಡಲೇ ಅವನು ಕಾರನ್ನು ನಿಲ್ಲಿಸಿ ಕೆಳಗಿಳಿಯುವಷ್ಟರಲ್ಲಿ ಓರ್ವ ಯುವಕನು ಬಂದು ನಿನ್ನೊಡನೆ ಕೆಲವು ಮಾತುಗಳಾಡುವ ಅವಶ್ಯ ಕತೆಯಿರುವುದು. ಆದುದರಿಂದ ನೀನು ಈಗಲೇ ನನ್ನೊಡನೆ ಬರಬೇಕಾ ಗಿದೆ, ಎಂದನು. ಆಗ ಡ್ರೈವರನು ಕಂಪಿತ ಧ್ವನಿಯಿಂದ ಈಗ ನನಗೆ ಬರಲು ಸಾಧ್ಯವಿಲ್ಲ. ಕ್ಷಮಿಸಿರಿ. ಈ ಪ್ರಯಾಣಿಕರನ್ನು ಈಗ ಒಂದು ಮದುವೆಗೋಸ್ಕರ ಅಗತ್ಯವಾಗಿ ಹುಬ್ಬಳ್ಳಿಗೆ ತಲಪಿಸಲಿರುವುದು. ನಾಳೆ ನಾನು ನಿಮ್ಮನ್ನು ಖಂಡಿತವಾಗಿಯೂ ಕಾಣಲಿರುವೆನು, ಎಂದನು.

ಯುವಕ—ಆಗಬಹುದು. ಆದಷ್ಟು ಜರೂರಾಗಿ ಬರತಕ್ಕದು. ತಪ್ಪಿದರೆ ನಿನ್ನ ಅವಸ್ಥೆ ಶೋಚನೀಯವಾದೀತು.

ಕಾರು ಅಲ್ಲಿಂದ ಹೊರಟು ಹೋದೊಡನೆ ಯುವಕ—ಶ್ಯಾಮರಾಯರು ಅಲ್ಲಿಂದ ಹೊರಟು ಬಂದು ಉಪಾಹಾರ ಗೃಹಕ್ಕೆ ಹೋಗಿ ಸ್ವಲ್ಪ ಉಪಾಹಾರ ತೀರಿಸಿಕೊಂಡು ಸಿಗರೇಟ್ ಸೇದುತ್ತಾ ಮನೆಯತ್ತ ಹೊರಟು ಹೋದರು.

ರಾತ್ರೆಯ ಊಟವನ್ನು ತೀರಿಸಿಕೊಂಡು ಶ್ಯಾಮರಾಯರು ಹತ್ತು ಗಂಟೆಗೆ ಸರಿಯಾಗಿ ಹರಕು ಪೋಷಾಕನ್ನು ಧರಿಸಿಕೊಂಡು ಒಬ್ಬ ಮುದುಕ ನಂತೆ ವೇಷ ಪಲ್ಲಟ ಮಾಡಿ ಮನೆಯಿಂದ ಹೊರಬಿದ್ದರು.

ಅವರು ಸೀದಾ ವೈನ ರೋಡಿನಲ್ಲಿ ನಡೆದು ಯಾವುದೋ ಒಂದು ಚಿಕ್ಕದಾದ ಬೀದಿಯ ಒಳಹೊಕ್ಕರು. ಸಾಧಾರಣ ಒಂದು ಮೈಲು ಮುಂದೆ ಹೋದರೂ ಮನುಷ್ಯರ ಸುಳಿವಾಗಲೀ, ದೀಪದ ಬೆಳಕಾಗಲೀ ತೋರುತ್ತಿರಲಿಲ್ಲ. ಕಟ್ಟ ಕಡೆಗೆ ಒಂದು ಮುರುಕು ಗುಡಿಸಲಿನೊಳಗೆ ಒಂದು ದೀಪವಿದ್ದುದು ಕಂಡು ಬಂತು. ಅದರೊಳಗೆ ಇಬ್ಬರು ಹೆಂಗಸರ ಸ್ವರ, ಕೇಳ ಬರುತ್ತಿತ್ತು. ಶ್ಯಾಮರಾಯರು ಬಂದು ಕಿಟಕಿಯ ಸಹಾಯದಿಂದ ಅವರನ್ನು ನೋಡುತ್ತಲೂ ಅವರ ಮಾತುಗಳನ್ನು ಕೇಳುತ್ತಲೂ ಇದ್ದರು.

ಮುದುಕಿ—ಯಾವಾಗ ಬರುವನೋ ಏನೋ?

ಯುವತಿ—ಇಷ್ಟರ ತನಕ ಒಂದು ಪತ್ರವಾದರೂ ಬರಲಿಲ್ಲವಲ್ಲಾ! ಶೀಘ್ರ ಬರೆಯುವನೆಂದು ಹೇಳಿದ್ದರು.

ಮುದುಕಿ— ಹಾಗಾದರೆ ಆ ರೂಪಾಯಿಗಳನ್ನೇಕೆ ಇಲ್ಲಿ ಇಟ್ಟಿರುವೆ?

ಯುವತಿ—( ದುಃಖದಿಂದ ) ಯುದ್ಧಕ್ಕೆ ಹೋದರೆ ಅವಸ್ಥೆ ಏನಾಗುವುದೆಂದು ಹೇಗೆ ಹೇಳಲಿ ?

ಅವರ ಇಷ್ಟು ಮಾತುಗಳನ್ನು ಕೇಳಿ ದಶ್ಯಾಮರಾಯರು ಮನೆಎದುರಿಗೆ ಬಂದು ಮುದಕನಂತೆ ನಟಿಸುತ್ತಾ ಅಮ್ಮಾ, ಮಲಗಿಕೊಳ್ಳಲು ಹೊರಗೆ ಒಂದಿಷ್ಟು ಸ್ಥಳ ಕೊಡುವಿರಾ? ಎಂದು ಕೇಳಿದರು.

ಮುದುಕಿ ( ಹೊರಗೆ ಬಂದು ) — ಯಾರು ನೀನು ? ಈ ಸಮಯದಲ್ಲಿ ಇಲ್ಲಿಗೇಕೆ ಬಂದೆ? ಇಷ್ಟರ ತನಕ ಎಲ್ಲಿದ್ದಿ ?

ಮುದುಕ—ಇಲ್ಲಿಂದ ಸಾಧಾರಣ ಒಂದು ಮೈಲು ದೂರದಲ್ಲಿ ನನ್ನ ಮಗಳ ಮನೆ ಇರುವುದು. ನನಗೆ ಅಲ್ಲಿಗೆ ಹೋಗಬೇಕು. ಎಂಟು ಗಂಟೆಗೆ ಬಸ್ಸಿನಲ್ಲಿ ಬಂದಿಳಿದೆನು ಇಲ್ಲಿಯ ತನಕ ನಡೆಯುತ್ತಾ ಬರಲು ಇಷ್ಟು ಹೊತ್ತಾಯಿತು. ಇನ್ನು ನಡೆಯಲು ಸಾಧ್ಯವಿಲ್ಲ. ಇಲ್ಲಿ ನೀವು ಮಲಗಿಕೊಳ್ಳಲು ಸ್ವಲ್ಪ ಜಾಗ ಕೊಟ್ಟಲ್ಲಿ ಪ್ರಾತಃಕಾಲ ಎದ್ದು ಹೋಗುವೆನು.

ಮುದುಕಿ—ಆಗಬಹುದು; ನಮಗೇನು.

ಮುದುಕ—( ಕೆಮ್ಮುತ್ತಾ ) ಅಮ್ಮಾ, ನೀವು ಇಷ್ಟು ದುಃಖದಲ್ಲಿರಲು ಕಾರಣವೇನು ? ಇಲ್ಲಿ ಗಂಡಸರಾರೂ ಇಲ್ಲವೇ ?

ಮುದುಕಿ—ನನಗೊಬ್ಬ ಹುಡುಗನಿರುವನು. ಇವಳು ನನ್ನ ಸೊಸೆ. ಇಬ್ಬರು ಚಿಕ್ಕ ಮಕ್ಕಳಿರುವರು. ನನ್ನ ಮಗನು ಸೈನ್ಯಕ್ಕೆ ಸೇರಲಿಕ್ಕೆಂದು ಹೋಗಿ ಐದಾರು ದಿವಸಗಳಾದುವು ಪತ್ರ ಬರೆಯುವೆನೆಂದವನು ಇಷ್ಟರ ತನಕವೂ ಪತ್ರ ಬರೆಯಲಿಲ್ಲ.

ಮುದುಕ—ನನ್ನ ಮಗನೊಬ್ಬನೂ ಕೂಡ ಮೊನ್ನೆ ಮಿಲಿಟರಿಗೆ ಹೋಗಿರುವನು. ಅವನೊಡನೆ ಕಾಗದ ಹಾಕಿ ಬೇಕಾಗಿದ್ದರೆ ನಿಮ್ಮ ಮಗನ ವಿಷಯ ತಿಳಿಯುವೆನಮ್ಮಾ. ಅವರ ಹೆಸರೇನು ?

ಮುದುಕಿ—ಮಾಧವನೆಂದು.

ಶ್ಯಾಮರಾಯರಿಗೆ ಗೋಡೆಯಲ್ಲಿ ಬಂದು ಪಶವು ತೂಗ ಹಾಕಿಕೊಂಡಿದ್ದಂತೆ ತೋರಿತು.

ಶ್ಯಾಮ—ನಾನು ನನ್ನ ಮಗನಿಗೆ ಯಾವ ರೀತಿಯಾಗಿ ಅವರ ಗುರತು ಹೇಳಲಿ ?

ಮುದುಕಿ—ಇಗೋ ( ಗೋಡೆಯಲ್ಲಿದ್ದ ಮಾಧವನ ಭಾವಚಿತ್ರವನ್ನು ಕೊಟ್ಟಳು. )

ಮುದುಕ—ಹಾಗಾದರೆ ನೀವು ಈಗ ಜೀವನಕ್ಕೆ ಏನು ಮಾಡುತ್ತೀರಿ?

ಯುವತಿ—ಹೋಗುವಾಗ ಮುಂಗಡವಾಗಿ ನೂರು ರೂಪಾಯಿ ತೆಗೆದುಕೊಂಡು ಕೊಟ್ಟು ಹೋಗಿರುತ್ತಾರೆ ಆಗಲಿ. ನಿಮ್ಮ ಮಗನಿಗೆ ಪತ್ರ ಬರೆದು ತಿಳಿಯಿರಿ. ನಾವಿನ್ನು ಮಲಗುತ್ತೇವೆ; ನೀವೂ ಇಲ್ಲಿ ಮಲಗಿಕೊಂಡು ಬೆಳಗ್ಗೆ ಎದ್ದು ಹೋಗಿರಿ.

ಬಳಿಕ ಅವರು ಬಾಗಿಲನ್ನು ಮುಚ್ಚಿ ದೀಪವನ್ನು ಆರಿಸಿದರು. ಕೂಡಲೇ ಮುದುಕ ವೇಷಧಾರಿಯಾದ ಶ್ಯಾಮರಾಯರು ಕತ್ತಲೆಯಲ್ಲಿ ಎತ್ತಲೋ ಮಾಯವಾಗಿ ಬಿಟ್ಟರು.

---

# ಹರ್ಕ್ಯೂಲಸ್ ನಾಯಿ.

ಆಫೀಸು ಕೋಣೆಯಲ್ಲಿ ಮಲಗಿದ್ದ ಶ್ಯಾಮರಾಯರು ಟೆಲಿಫೋನಿನ "ಟಿರೀಂ" ಎಂಬ ಶಬ್ದವನ್ನು ಕೇಳಿ ಎಚ್ಚತ್ತರು. ಎದ್ದು ಟೆಲಿಫೋನಿಗೆ ಕಿವಿಗೊಟ್ಟರು

"ಹಲ್ಲೋ, ಶ್ಯಾಮರಾಯರೇ"

"ಯಾರು, ಮುಕುಂದರಾಯರೇ ?" ಸರಿ.

ಈ ಹೊತ್ತಿನಲ್ಲಿ ನನ್ನನ್ನು ಯಾಕಾಗಿ ಕರೆದಿರಿ.

ನನ್ನ ಮನೆಯಲ್ಲಿ ಎಷ್ಟೋ ಸಾವಿರ ರೂಪಾಯಿ ಬೆಲೆ ಬಾಳುವ ರತ್ನಖಚಿತವಾದ ಶ್ರೀ ಕೃಷ್ಣನ ಮೂರ್ತಿಯೊಂದರ ಕಳವು ಈಗಿಂದೀಗಲೇ ನಡೆಯಿತು. ಆದುದರಿಂದ ತಾವು ಅಗತ್ಯ ಇಲ್ಲಿಗೆ ಬರಬೇಕು.

ಹೂಂ ಸರಿ. ಅಗತ್ಯವಾಗಿ ಜರೂರಿನಿಂದ ಬರುವೆನು ಕೂಡಲೇ ಅವರು ಪೋಷಾಕವನ್ನು ಧರಿಸಿಕೊಂಡು ಹೊರಡಲನುವಾದರು ಅಷ್ಟರಲ್ಲಿ ಅವರಿಗೆ ತಮ್ಮ ಪತ್ತೇದಾರ್ ನಾಯಿಯನ್ನು ಸಂಗಡ ಕರೆದೊಯ್ಯಬೇಕೆಂದು ನಿಸಲು "ಹರ್ಕ್ಯುಲೆಸ್" ಎಂದು ಕೂಗಿದರು ಒಡನೆಯೇ ಒಳಗೆ ಮಲಗಿಕೊಂಡಿದ್ದಲ್ಲಿಂದ ಶ್ಯಾಮರಾಯರಿದ್ದಲ್ಲಿಗೆ ಅದು ಬಂದಿತು. ಅದರ ಜಾಣ್ಮೆ ಇಷ್ಟರತನಕ ಹಲವು ಕಡೆ ಕಂಡುಬಂದಿತ್ತು. ಅದಿರಲಿ. ನಾಯಿಯು ಹತ್ತಿ

ರಕ್ಕೆ ಬಂದೊಡನೆ ಅವರು ಅದರ ಕೊರಳಿಗೆ ಒಂದು ಸಂಕೋಲೆಯನ್ನು ಬಿಗಿದು ಕೈಯಲ್ಲಿ ಹಿಡಕೊಂಡರು. ಬಳಿಕ ಬೀದಿಗಿಳಿದು ಮುಂದೆ ಸಾಗಿ ಮುಕುಂದರಾಯರ ಮನೆಗೆ ಬಂದರು.

ಆಗ ರಾತ್ರಿ ಮೂರುಗಂಟೆಯಾಗಿತ್ತು. ಮುಕುಂದರಾಯರಲ್ಲಿ ಕೋಲಾ ಹಲವೇಳುತ್ತಿತ್ತು. ಶ್ಯಾಮರಾಯರು ಹಕರ್ಕ್ಯುಲೆಸಿನೊಂದಿಗೆ ಕಳವಾದ ಕೋಣೆಯನ್ನು ಪ್ರವೇಶಿಸಿ "ರಾಯರೇ, ಕಳವಾದ ಸಮಯವೆಷ್ಟು?"

ಎಷ್ಟು ಗಂಟೆಗೆ ಕಳವಾಯಿತೆಂದು ತಿಳಿದಿಲ್ಲ. ನಾನು ಸಾಧಾರಣ ಒಂದೂವರೆ ಗಂಟೆಗೆ ಎಚ್ಚತ್ತು ಸಿಗರೇಟ್ ಸೇದಲಿಕ್ಕೆಂದು ಇಲ್ಲಿಗೆ ಬಂದಾಗ ಫಕ್ಕನೆ ಕೃಷ್ಣಮೂರ್ತಿ ಮಾಯವಾದಂತೆ ತೋರಿತು. ಇದು ಕನಸೋ ಎಂದು ನನಗೆ ಭಾಸವಾಯಿತು. ಆ ಮೇಲೆ ಪರೀಕ್ಷಿಸಿ ನೋಡಿದಲ್ಲಿ ಮೂರ್ತಿ ಮಾಯವಾದುದು ನಿಜವೇ ಆಯಿತು.

ಶ್ಯಾಮ—ಇಷ್ಟು ಭಧ್ರವಾದ ಕೋಣೆಗೆ ಕಳ್ಳರು ಪ್ರವೇಶಿಸಿದೆಲ್ಲಿಂದ?

ಮುಕುಂದ—ಅದೇ ಬಹಳ ವಿಚಿತ್ರವಾಗಿ ತೋರುವುದು. ಈ ಕೋಣೆಯಿಂದಲೇ ಮಾಳಿಗೆಗೆ ಹೋಗಲು ದಾರಿ ಇದೆ. ಕೂಡಲೆ ಅವರಿಬ್ಬರೂ ಮಾಳಿಗೆಗೆ ಹೋದರು.

ಆ ಮನೆಯು ಭವ್ಯವಾದ (ಮಾಡಿಲ್ಲದ) ಟಾರ್ಸಿ ಮನೆ. ಅವರಿಬ್ಬರೂ ಮಾಳಿಗೆಯ ಮೇಲೆಲ್ಲಾ ಪರೀಕ್ಷಿಸಿದರು; ಆದರೆ ಅಲ್ಲಿ ಏನೂ ಪ್ರಯೋಜನವಾಗಲಿಲ್ಲ. ಅಲ್ಲಿಂದ ಅವರು ಮೇಲಿನ ಭಾಗಕ್ಕೆ ಹೋದರು. ಆದರೂ ಅಲ್ಲಿ ಏನೂ ಕುರುಹು ತೋರಲಿಲ್ಲ. ತದನಂತರ ಗೋಡೆಯ ಮೇಲೆಲ್ಲಾ ಪರೀಕ್ಷಿಸಲಾಗಿ ಶ್ಯಾಮರಾಯರಿಗೆ ಒಂದು ಕಡೆಯಲ್ಲಿ ಸಿಮೆಂಟು ಹಾಕಿದ ಸ್ಥಳದಲ್ಲಿ ಉಗುರಿನಿಂದ ಪರಚಿದಂತೆ ಭಾಸವಾಯಿತು.

ಶ್ಯಾಮ—ಕಳ್ಳರು ಬಹುಶಃ ಹಿತ್ತಲಿನಿಂದ ಮೇಲೇರಿ ಬಂದಿರಬೇಕು.

ಮುಕುಂದ—ಇಷ್ಟು ಎತ್ತರವಾದ ಗೋಡೆಯನ್ನು ಕಳ್ಳರದೆಂತು ಏರಿಬರುವರು?

ಶ್ಯಾಮ—ನಾವೀಗ ಕೆಳಗಿಳಿದು ಹಿತ್ತಲಿಗೆ ಹೋಗೋಣ. ಅಲ್ಲಿ ಏನಾದರೂ ರಹಸ್ಯ ತಿಳಿಯಲು ಸಾಕು.

ಅವರು ಕೆಳಗಿಳಿದು ತೋಟಕ್ಕೆ ಬಂದರು. ಶ್ಯಾಮರಾಯರು ಟಾರ್ಚ್ ಲೈಟಿನಿಂದ ಯಾವ ಸ್ಥಳದಲ್ಲಿ ಮೇಲೆ ಉಗುರಿನಿಂದ ಪರಚಿದಂತೆ ತೋರಿತೋ,

ಅದೇ ಸ್ಥಳಕ್ಕೆ ಸರಿಯಾಗಿ ಗೋಡೆಯ ಮೇಲೆ ಪ್ರಕಾಶ ಬೀರಿ:–ಮುಕುಂದ ರಾಯರೇ, ಕಳ್ಳರು ಖಂಡಿತವಾಗಿಯೂ ಈ ಗೋಡೆಯನ್ನೇ ಏರಿ ಮನೆಯ ಒಳಗೆ ಪ್ರವೇಶಿಸಿರಬೇಕು ನೋಡಿರಿ, ಗೋಡೆಯ ಮೇಲೆ ಹೆಜ್ಜೆಯ ಗುರುತು ಸಹ ಕಾಣಿಸುತ್ತಿವೆ.

ಮುಕುಂದ—ಈ ಗೋಡೆಯ ಮೇಲೆ ಕಳ್ಳರು ಹತ್ತುವುದು ಹೇಗೆ?

ಶ್ಯಾಮ—ಆ ಜಾಣಾಕ್ಷ ಕಳ್ಳರೊಡನೆ ಹಿಂದೆ ಶಿವಾಜಿಯೊಡನಿದ್ದಂತೆ ಪ್ರಾಯಶಃ ಒಂದು ಉಡವೆಂಬ ಪ್ರಾಣಿ ಇರಬೇಕು. ಅದರ ಬಾಯಿಗೆ ಹಗ್ಗವನ್ನು ಕಚ್ಚಿಸಿಬಿಟ್ಟಲ್ಲಿ ಅದು ಗೋಡೆಯನ್ನೇರಿ ಹೋಗಿ ಹಗ್ಗವನ್ನು ಬಹಳ ಗಟ್ಟಿಯಾಗಿ ಕಚ್ಚಿ ಹಿಡಿಕೊಳ್ಳುವುದು. ಆಗ ಹಗ್ಗದಲ್ಲಿ ಎಷ್ಟು ಭಾರ ನೇತಾಡಿದರೂ ಅದು ಹಗ್ಗವನ್ನು ಬಿಡಲಾರದು. ಆ ಹಗ್ಗದ ಸಹಾಯ ದಿಂದ ಕಳ್ಳರು ಮೇಲೇರಿರಬೇಕು. ಗೋಡೆಯ ಮೇಲೆ ನೋಡಿರಿ. ಉಗುರಿ ನಿಂದ ಪರಚಿದಂತೆ ಅಲ್ಲಿಯೂ ತೋರುವುದು. ಬಳಿಕ ಅವರು ಆ ತೋಟ ವನ್ನು ಸುತ್ತಾಡಿದರು. ಅಲ್ಲಿ ಒಂದು ಕಡೆ ಒಂದು ರುಮಾಲು ಬಿದ್ದಿತ್ತು. ಶ್ಯಾಮರಾಯರು ಅದನ್ನು ಮೂಸುತ್ತಾ 'ರಾಯರೇ, ಈ ರುಮಾಲು ಎಷ್ಟು ಪರಿಮಳವಾಗಿದೆ. ಕಳ್ಳರು ಬಹುಶಃ ಯಾವುದೋ ಒಂದು ವಿಚಿತ್ರವಾದ ಹೇರ್ ಓಯಿಲನ್ನು ತಲೆಗೆ ಸವರುತ್ತಿರುವರು. ಇಂತಹ ಎಣ್ಣೆಯು ನಮ್ಮ ದೇಶದಲ್ಲೆಲ್ಲೂ ಸಿಗುತ್ತಿಲ್ಲ.

ಮುಕುಂದರಾಯರೂ ಕೂಡಾ ಅದನ್ನು ಮೂಸಿ ಹೌದೆಂದರು.

ಬಳಿಕ ಶ್ಯಾಮರಾಯರು ಹರ್ಕ್ಯುಲೆಸನ್ನು ಮೇಲೆ ಕರೆದುಕೊಂಡು ಹೋಗಿ ಯಾವ ಗೋಡೆಯ ಮೇಲೆ ಉಡವು ಪರಚಿ ಹಿಡಿದುಕೊಂಡಿದ್ದಂತೆ ತೋರಿತೋ, ಆ ಸ್ಥಳವನ್ನು ನಾಯಿಗೆ ಮೂಸಲು ಹೇಳಿದರು ಹರ್ಕ್ಯುಲೆಸ ಆ ಸ್ಥಳವನ್ನು ಬಹಳವಾಗಿ ಮೂಸಿಕೊಂಡು 'ಭೌಂ ಭೌಂ' ಎಂದು ಗರ್ಜಿಸಿತು. ಅನಂತರ ಅವರು ಆ ರುಮಾಲನ್ನು ಕೂಡಾ ಅದಕ್ಕೆ ಮೂಸಿಸಿ ದರು. ಆಗ ಕೂಡಾ ಅದು ಗರ್ಜಿಸಿತು. ಆ ಶಬ್ದಕ್ಕೆ ಸುತ್ತುಮುತ್ತಲಿನವ ರೆಲ್ಲರೂ ಎಚ್ಚತ್ತರು. ಬಳಿಕ ಶ್ಯಾಮರಾಯರು ಮುಕುಂದರಾಯರೊಡನೆ ನಾನಿನ್ನು ಹೋಗುತ್ತೇನೆ ಕಾರ್ಯವು ಬೇಗನೆ ಕೈಗೂಡಬಹುದು, ಎಂದು ಹರ್ಕ್ಯುಲೆಸಿನೊಡನೆ ಹೊರಬಿದ್ದರು.

ಶ್ಯಾಮರಾಯರು ಪುನಃ ಅರು ವಾಲನ್ನೊಮ್ಮೆ ಅದಕ್ಕೆ ಮೂಸಿಸಿ ದರು. ಆಗ ಅದು ಅದರ ಪರಿಮಳ ನನಗೆ ಸಿಕ್ಕಿತು ಎಂಬಂತೆ ಬೊಗಳುತ್ತಾ ಮುನ್ನುಗ್ಗಿ ಹೋಗುತ್ತಿದ್ದಿತು. ಅದರ ಸಂಕೋಲೆಯನ್ನು ಕೈಯಲ್ಲಿ ಹಿಡ ಕೊಂಡು ಅದರ ಹಿಂದೆಯೇ ಶ್ಯಾಮರಾಯರೂ ಹೋಗಹತ್ತಿದ್ದರು. ಅದು ನೆಲವನ್ನು ಮೂಸುತ್ತಾ ಬಹಳ ವೇಗವಾಗಿ ನಡೆಯುತ್ತಿತ್ತು. ನಡೆಯುತ್ತಾ ಅದು ಮೈನ್‌ರೋಡನ್ನು ಬಿಟ್ಟು ದೇವದಾರ್ ರೋಡಿಗೆ ಬಂತು.

ಮುಕುಂದರಾಯರ ಮನೆಯಿಂದ ಸಾಧಾರಣ ಒಂದೂವರೆ ಮೈಲು ದೂರ ಬಂದು ಹರ್ಕ್ಯುಲೆಸ ಒಂದು ಚಿಕ್ಕದಾದ ಮನೆಯ ಒಳಹೋಗಲು ಪ್ರಯತ್ನಿಸಿತು; ಆದರೆ ಆಗ ಅದರ ಬಾಗಿಲು ಮುಚ್ಚಿತ್ತು. ಆ ನಾಯಿ ಬೇರೆ ಕಡೆಗೆ ಹೋಗುತ್ತಿರಲಿಲ್ಲ, ಶ್ಯಾಮರಾಯರಿಗೆ ಆ ಸ್ಥಳವನ್ನು ನೋಡುವಾಗ ಕಳ್ಳರ ವಾಸಸ್ಥಾನದಂತೆ ತೋರಲಿಲ್ಲ. ಅಲ್ಲೆಲ್ಲೂ ಮನೆಗಳು ಕಾಣಿಸುತ್ತಿರಲಿಲ್ಲ. ಈ ದಿನ ಅವರು ಹೆಚ್ಚಿನ ಪರೀಕ್ಷೆಗೆ ತೊಡಗದೆ ನಾಯಿ ಯೊಡನೆ ಹಿಂದಿರುಗಿದರು.

---

# ಸರ್ ಕ್ಷಮಿಸಿ.

ಶ್ಯಾಮರಾಯರ ಮನೆಯ ಹೊರಗಿನ ಗಂಟೆಯು ಢಣಲ್ ಎಂದಿತು. ಅವರು ಹೊರಗೆ ಹೋಗಿ ನೋಡಿದಲ್ಲಿ ಒಬ್ಬ ಹುಡುಗನು ಅವರ ಕೈಗೆ ಒಂದು ಕಾಗದವನ್ನಿತ್ತು ಅದೃಶ್ಯನಾದ. ಶ್ಯಾಮರಾಯರು ಅವಸರದಿಂದ ಆ ಕಾಗದವನ್ನು ಬಿಚ್ಚಿ ಓದಿದರು. ಅದಿಂತಿತ್ತು.

ಹೇ ಪತ್ತೆದಾರ ನೊರಜೇ! ನಿನ್ನ ಆಟ ನನ್ನಲ್ಲಿ ನಡೆಯಲಾರದು. ಈ ರಂಗಪುರದಲ್ಲಿ ಬದುಕಬೇಕೆಂಬ ಆಶೆ ನಿನಗಿದ್ದಲ್ಲಿ ನಿನ್ನೀ ಕಸಬನ್ನು ಬಿಟ್ಟು ಸುಮ್ಮನಿರು. ಮುಂದರಿಸಿ ಬಂದರೆ ಮೃತ್ಯುವಿಗೊಳಗಾಗುವೆ.

ಇತಿ ನಿನ್ನ ಭೀಕರ ಶತ್ರು, ಅಜೇಯ ಸಿಂಹ

ಈ ಪತ್ರವನ್ನೋದಿ ಶ್ಯಾಮರಾಯರು ಕೊಂಚವೂ ಅಂಜಲಿಲ್ಲ. ಅಷ್ಟರಲ್ಲಿ ಹೊರಗಿನಿಂದ “ ಒಡೆಯಾ ” ಎಂದು ಕೂಗುವುದು ಕೇಳಿಸಿತು.

ಶ್ಯಾಮ—( ಒಳಗಿನಿಂದಲೇ ) ಯಾರು ಡ್ರೈವರನೇ ?

ಡ್ರೈವರ್—ಹೌದು ಸ್ವಾಮಿ.

ಶ್ಯಾಮು—ಒಳಗೆ ಬಾ, ಕುಳಿತುಕೋ.

ಡ್ರೈವರ ಒಳಗೆ ಬಂದು ಒಂದು ಬೆಂಚಿನ ಮೇಲೆ ಕುಳಿತುಕೊಂಡನು.

ಶ್ಯಾಮು—ನಿನ್ನ ಹೆಸರೇನು ?

ಡ್ರೈವರ್—ಬಾಬೂಸಿಂಗ ಎಂದು ಸ್ವಾಮಿ.

ಶ್ಯಾಮು—ನಿನ್ನ ಈಗಿನ ವಾಸಸ್ಥಾನವೆಲ್ಲಿ ?

ಬಾಬೂಸಿಂಗ್—ತೆಂಗಿನ ತೋಟದಲ್ಲಿ

ಶ್ಯಾಮು—ಮೊದಲು ಎಲ್ಲಿ ವಾಸಿಸುತ್ತಿದ್ದೆ?

ಬಾಬೂ—ಸರ್ಕಲ್ ಇನ್‌ಸ್ಪೆಕ್ಟರರ ಮನೆಯಲ್ಲಿ ಇದ್ದೆ ಜೀಯಾ.

ಶ್ಯಾಮು—ಅದರೊಳಗೆ ಒಂದು ಸುರಂಗವಿರುವುದಲ್ಲವೇ ?

ಬಾಬೂ—ಹೌದು.

ಶ್ಯಾಮು—ಸತ್ಯವನ್ನು ನುಡಿ. ಅದು ಯಾರಿಂದ ರಚಿಸಲ್ಪಟ್ಟಿತು ?

ಬಾಬೂ—ಅದನ್ನು ನಾನು ನನ್ನ ಉಪಯೋಗಕ್ಕಾಗಿ ರಚಿಸಿದ್ದೆ.

ಶ್ಯಾಮು—ಯಾಕಾಗಿ ರಚಿಸಿದೆ.

ಬಾಬೂ— ( ನಡುಗುತ್ತಾ) ಕಳೆದ ರೇಶನ್ ಕಾಲದಲ್ಲಿ ಅಕ್ಕಿಯನ್ನು ಕಳ್ಳ ಸಂತೆಯಲ್ಲಿ ಮಾರುತ್ತಿದ್ದೆ. ಬೇರೆ ಕಡೆಗಳಿಂದ ಅಕ್ಕಿಯನ್ನು ಕಡಿಮೆ ಕ್ರಯಕ್ಕೆ ಕಾರಿನಲ್ಲಿ ತಂದು ಆ ಸುರಂಗದಲ್ಲಿ ದಾಸ್ತಾನಿರಿಸಿ, ಹೆಚ್ಚು ಕ್ರಯಕ್ಕೆ ಮಾರುತ್ತಿದ್ದೆ. ಕ್ಷಮಿಸಬೇಕು.

ಶ್ಯಾಮುರಾಯರಿಗೆ ಬಾಬೂಸಿಂಗನನ್ನು ನೋಡುವಾಗ ಇವನು ತಪ್ಪಿತಸ್ಥನಲ್ಲವೆಂದು ಮನವರಿಕೆಯಾಯಿತು.

ಶ್ಯಾಮು—ನೀನಿನ್ನು ಹೋಗಬಹುದು.

ಬಾಬೂಸಿಂಗನು ಬದುಕಿದೆನೆಂದು ಮನಸ್ಸಿನಲ್ಲಿ ದೇವರನ್ನು ಸ್ಮರಿಸುತ್ತಾ ಶ್ಯಾಮುರಾಯರಿಗೆ ನಮಸ್ಕರಿಸಿ ಅಲ್ಲಿಂದ ನಡೆದನು. ಶ್ಯಾಮುರಾಯರು ಕೆಲ ಸಮಯ ಆಲೋಚಿಸುತ್ತಾ ಕಡೆಗೆ ಬೇಸರಬಂದು ಹೆಕ್ಯ್ರೂಲೆಸನನ್ನು ಕರೆಕೊಂಡು ಪೇಟೆಯತ್ತಾ ಹೊರಟರು. ಅವರು ಒಂದು ಕಡೆ ಬಂದು ಕಾಫಿ ಹೋಟೆಲಿನಲ್ಲಿ ಒಳಹೊಕ್ಕರು. ನಾಯಿಯು ಸಂಕೋಲೆಯನ್ನು ಎಳೆಯುತ್ತಾ ಮುಂದುವರಿಯುತ್ತಿತ್ತು. ಹೋಟೇಲಿನೊಳಗೆ ಒಂದು ತರವಾದ ಪರಿಮಳವು ಬರುತ್ತಿತ್ತು. ಆಗ ಶ್ಯಾಮುರಾಯರಿಗೆ ಮುಕುಂದರಾಯರಲ್ಲಿ ಸಿಕ್ಕಿದ ಮಾಲಿನ ಪರಿಮಳ ನೆನಪಾಯಿತು. ಅವರು

ಒಂದು ಕಡೆ ಒಂದು ಕುರ್ಚಿಯಲ್ಲಿ ಕುಳಿತರು. ಅಲ್ಲೇ ನಾಲ್ಕು ಗಜ ದೂರದಲ್ಲಿ ಒಂದು ಕುರ್ಚಿಯಲ್ಲಿ ಓರ್ವ ದೃಢಕಾಯನಾದ ತರುಣನು ಕುಳಿತಿದ್ದನು. ಆತನು ಹರ್ಕ್ಯೂಲೆಸಿನ ಕಡೆಗೆ ಎರಡು ಬಿಸ್ಕೇಟುಗಳನ್ನು ಎಸೆದನು. ಶ್ಯಾಮರಾಯರು ಹರ್ಕ್ಯೂಲೆಸಿಗೆ ಆ ಬಿಸ್ಕತ್ತುಗಳನ್ನು ತಿನ್ನಲಿಕ್ಕೆ ಬಿಡದೆ, ದೂರ ಒದೆದು ಆ ವ್ಯಕ್ತಿಯೊಡನೆ—ಇದಕ್ಕೆ ಬಿಸ್ಕೇಟನ್ನು ತಿಂದರೆ ಆರೋಗ್ಯವು ಸರಿಯಾಗಿ ನಿಲ್ಲುವುದಿಲ್ಲ, ಎಂದರು. ಶ್ಯಾಮರಾಯರು ಕುಳಿತು ಕಾಫಿ ಕುಡಿಯುತ್ತಿದ್ದರು. ಈ ಸಮಯದಲ್ಲಿ ಕೈಯ ಸಂಕೋಲೆಯು ಸ್ವಲ್ಪ ಸಡಿಲವಾಗಿದ್ದಿತು. ಮೊದಲೇ ಆ ವ್ಯಕ್ತಿಯ ಕಡೆಗೆ ಮುನ್ನುಗ್ಗುತ್ತಿದ್ದ ಹರ್ಕ್ಯೂಲೆಸ ಈ ಸಮಯವನ್ನು ಕಾದು ಫಕ್ಕನೆ ಬೊಗಳುತ್ತಾ ಆತನ ಮೇಲೆ ಹಾರಲು ಹೋಯಿತು. ಆತನು ಹೆದರಿ ಹಿಂದೆ ಸರಿಯುವಷ್ಟರಲ್ಲಿ ಕುಳಿತಿದ್ದ ಕುರ್ಚಿಯು ಮಗುಚಿ ಕೆಳಗುರುಳಿದನು. ಕೂಡಲೇ ಶ್ಯಾಮರಾಯರು ನಾಯಿಯ ಸಂಕೋಲೆಯನ್ನು ಹಿಂದೆ ಎಳೆದರು. ಬಿದ್ದಾತನು ಎದ್ದು ಕುಳಿತು, ಕೋಪದಿಂದ ಕಿಡಿಕಿಡಿಯಾಗಿ-ಎಲ್ಲೈ ಪತ್ತೆದಾರರೆ, ಇಂತಹ ದುಷ್ಟ ಜಂತು ಸಾಕಿ ಪರರ ಪ್ರಾಣ ತೆಗೆಯುವಿರಾ ? ಸ್ವಲ್ಪ ತಪ್ಪಿದಲ್ಲಿ ಅದು ನನ್ನ ಪ್ರಾಣವನ್ನು ಹೀರುತ್ತಿರಲಿಲ್ಲವೇ ? ಎಂದನು.

ಶ್ಯಾಮ—ಕ್ಷಮಿಸಿರಿ ಸರ್. ಇದು ಇಷ್ಟು ಮುಂದುವರಿಸುವುದೆಂದು ನಾನು ತಿಳಿದಿರಲಿಲ್ಲ. ಇನ್ನು ಮುಂದೆ ಇದನ್ನು ಯಾವ ಸ್ಥಳಕ್ಕೂ ಕೊಂಡು ಹೋಗುವುದಿಲ್ಲ. ನನ್ನ ಅವಿವೇಕಕ್ಕಾಗಿ ನನ್ನನ್ನು ಕ್ಷಮಿಸಿರಿ.

——

# ವಿರೋಜಿ.

ಮಧ್ಯ ರಾತ್ರಿಯ ಸಮಯ. ಗಾಢಾಂಧಕಾರ ಎಲ್ಲೆಡೆಗಳಲ್ಲೂ ತುಂಬಿಕೊಂಡಿತ್ತು. ಎಲ್ಲ ಜನರು ನಿದ್ರಾವಸ್ಥೆಯಲ್ಲಿದ್ದರು. ಈ ಸಮಯದಲ್ಲಿ ರಂಗಪುರ ದೇವದಾರ್ ರೋಡಿನಲ್ಲಿ ಇಬ್ಬರು ತರುಣರು ಪಿಸಪಿಸನೆ ಮಾತನಾಡುತ್ತಾ ಹೋಗುತ್ತಿದ್ದರು.

೧ನೆಯವ—ಇಂದು ನಾವು ಆ ಧೂರ್ತನನ್ನು ಹೆದರಿಸಿ ಮೃತ್ಯು ಪತ್ರ ಬರೆಸಿಕೊಳ್ಳದೆ ಬಿಟ್ಟಲ್ಲಿ ನಮಗೆ ಉಳಿಗಾಲವಿಲ್ಲ.

೨ನೆಯವ—ಹಾಗೆಂದೂ ಮಾಡಬಾರದು.

೧ನೆಯವ—ಒಡೆಯಾ, ಹಾಗಿದ್ದರೆ ನಾವು ಅವನ ಆಸ್ತಿಯ ಅಭಿಲಾಷೆ ಬಿಟ್ಟು ಬಿಡಬೇಕು. ನಾವು ಪ್ರಯತ್ನ ಪಟ್ಟರೆ ನಮ್ಮ ಈ ಕಸುಬಿನಿಂದಲೇ ಬೇಕಷ್ಟು ಉತ್ಪನ್ನ ಮಾಡಬಹುದು.

೨ನೆಯವ—ಫಿರೋಜಿ, ನಿನ್ನ ಈ ಆಲೋಚನೆಗೆ ನಾನು ಮೆಚ್ಚಿರುವೆನು. ನೀನು ಹೇಳಿದಂತೆ ನಾವು ಈ ಕಸುಬಿನಿಂದ ಸಾಕಷ್ಟು ಹಣ ಸಂಪಾದಿಸಬಹುದು. ನಮಗೆ ಆ ಮೂರ್ಖನ ಆಸ್ತಿಯ ಅಗತ್ಯವಿಲ್ಲ,

೧ನೆಯವ—ಆ ಧೂರ್ತನನ್ನು ಕೊಲ್ಲುವ ಬಗೆಯೇ ಬೇರಿರುವುದು.

೨ನೆಯವ—ಅದೆಂತು ?

೧ನೆಯವ—ಆತನಿಗೆ ಇನ್ನು ನಾವು ಯಾವ ಆಹಾರವನ್ನೂ ಕೊಡಬಾರದು; ಅಂದರೆ ಇನ್ನು ಹದಿನೈದು ದಿವಸಗಳಲ್ಲೇ ಸಾಯುವನು.

೨ನೆಯವ—ಮಿತ್ರಾ ! ಸರಿಯಾದ ಉಪಾಯ ಸೂಚಿಸಿದೆ; ಆದರೆ ನಮ್ಮ ವಾಸಸ್ಥಾನ ಸರಕಾರಕ್ಕೆ ತಿಳಿಯುವ ಸಂಭವವಿದೆಯೇ?

೧ನೆಯವ—ಒಡೆಯಾ, ಆ ಚಿಂತೆ ಬಿಟ್ಟು ಬಿಡಿ. ತಿಳಿದಿದ್ದರೆ ಯಾವ ಅಧಿಕಾರಿಗಳ ಗಮನವಾದರೂ ಇತ್ತ ಕಡೆ ಹರಿಯುತ್ತಿತ್ತು.

೨ನೆಯವ—ಅದಿರಲಿ. ನಿನ್ನೆಯ ಮುಕುಂದರಾಯನ ಮನೆಯ ಕಳವಿನ ಗಲಾಟೆ ಕೇಳಿಸುತ್ತಿಲ್ಲವಲ್ಲಾ !

೧ನೆಯವ—ಗಲಾಟೆ ಏನು ? ಇದನ್ನು ಪತ್ತೆ ಹಚ್ಚುವವರಾರು ? ಆ ಬಡ ಶ್ಯಾಮರಾಯನೊಬ್ಬನಿರುವ. ನಾವು ಆವನಿಗೆ ಕಳುಹಿಸಿದ ಪತ್ರವನ್ನೋದಿ ಆತ ನಮ್ಮ ಗೋಜಿಗೆ ಬರಲಾರ.

೨ನೆಯವ—ಇಂದು ಬೆಳಿಗ್ಗೆ ನಾನು ಒಂದು ಕಾಫಿ ಹೋಟೆಲಿನಲ್ಲಿರುವಾಗ ಒಂದು ಘಟನೆ ಸಂಭವಿಸಿತು.

೧ನೆಯವ—ಅದೇನು ?

೨ನೆಯವ—ನಾನು ಕಾಫಿ ಹೋಟೆಲಿನಲ್ಲಿದ್ದಾಗ ಆ ಧೂರ್ತ ಪತ್ತೆದಾರ ಶ್ಯಾಮರಾಯ ತನ್ನ ನಾಯಿಯೊಂದಿಗೆ ಅಲ್ಲಿಗೆ ಬಂದ. ಆತ ಬಂದು ನನ್ನ ಪಕ್ಕದಲ್ಲೇ ಕುಳಿತ. ನಾನೆಸೆದ ಎರಡು ಬಿಸ್ಕೇಟ್‌ಗಳನ್ನು ಆತ ತನ್ನ ನಾಯಿಗೆ ತಿನ್ನಲು ಬಿಡಲಿಲ್ಲ. ಬಳಿಕ ಅದು ನನ್ನ ಮೇಲೆ ಹಾರಲು ಬಂದಿತು. ನಾನು ಫಕ್ಕನೆ ಹಿಂದೆ ಸರಿಯುವಷ್ಟರಲ್ಲಿ ಕುರ್ಚಿ ಮಗುಚಿ

ನಾನು ಕೇಳಿಗುರುಳಿದೆ. ತದನಂತರ ನಾನು ಆತನನ್ನು ಬಹಳವಾಗಿ ಗದ್ದಿಸಿದೆ. ಅಬ್ಬಾ! ಆ ನಾಯಿಯು ನೋಡುವಾಗಲೇ ವ್ಯೈಜಂ ಎನ್ನುವುದು.

ಗನೆಯುವ—ಈ ರೀತಿಯಾಗಿ ನಿಮಗೆ ಅವಮಾನ ಮಾಡಿದನೆ ಆತ? ಇರಲಿ. ಒಂದಿಲ್ಲ ಒಂದು ದಿನ ಆತ ನಮ್ಮಿಂದಲೇ ಧ್ವಂಸವಾಗುವನು.

ಹೀಗೆಂದು ಮಾತನಾಡುತ್ತಾ ಆ ಇಬ್ಬರೂ ಯುವಕರೂ ದೇವದಾರ್ ಸ್ಟ್ರೀಟಿನ ಬಳಿಯ ಒಂದು ಚಿಕ್ಕದಾದ ಮನೆಯ ಒಳ ಹೊಕ್ಕರು. ಅದರಲ್ಲಿ ಯಾರೂ ವಾಸಿಸುತ್ತಿರಲಿಲ್ಲ. ಒಳಹೊಕ್ಕು ಗೋಡೆಯ ಮೇಲಿನ ಒಂದು ಸ್ವಿಚ್ಚನ್ನೊತ್ತಿದರು. ಕೂಡಲೇ ನೆಲದ ಮೇಲೆ ಒಬ್ಬ ಮನುಷ್ಯ ಹೋಗುವಷ್ಟು ದೊಡ್ಡದಾದ ಒಂದು ದ್ವಾರ ತೆರೆಯಲ್ಪಟ್ಟಿತು. ಅವರಿಬ್ಬರೂ ಆ ದ್ವಾರದಲ್ಲಿ ಕೆಳಗಿಳಿದರು. ಸಾಧಾರಣ ಒಂದು ಫರ್ಲಾಂಗು ದೂರ ಹೋದ ನಂತರ ಜೇರೊಂದೆರಡು ಸ್ವಿಚ್‌ಗಳನ್ನೊತ್ತಿ ಬಾಗಿಲುಗಳನ್ನು ತೆರೆಯುತ್ತಾ ಮುಚ್ಚುತ್ತಾ ಮುಂದೆ ಹೋಗಿ ಒಂದು ಕೋಣೆಯನ್ನು ಸೇರಿದರು. ಅಲ್ಲಿ ಕೈಕಾಲುಗಳನ್ನು ಬಂಧಿಸಲ್ಪಟ್ಟ ಕುಮಾರಸ್ವಾಮಿಯವರು ನೆಲದ ಮೇಲೆ ಕುಳಿತಿದ್ದರು. ಇಬ್ಬರೂ ಯುವಕರು ಅವರ ಇದಿರಿನಲ್ಲಿ ಬಂದು ನಿಂತುಕೊಂಡರು. ವಾಚಕರೇ, ಅವರಿಬ್ಬರೂ ಕಳ್ಳರೆಂಬುದು ಇಷ್ಟರಲ್ಲಿಯೇ ನಿಮ್ಮ ಸ್ಮೃತಿಪಥಕ್ಕೆ ಬಂದಿರಬಹುದು. ಅವರಲ್ಲಿ ಒಬ್ಬನ ಹೆಸರು ವಿರೋಜಿ ಯೆಂಬುದನ್ನು ನೀವರಿತಿರುವಿರಿ. ಇನ್ನೊಬ್ಬನೇ ಕಳ್ಳರ ನಾಯಕ ಅಜೇಯ.

ಅಜೇಯಸಿಂಹ—(ಕುಮಾರಸ್ವಾಮಿಯವರೊಡನೆ) ಲುಚ್ಚಾ, ನಿನ್ನ ನ್ನಿನ್ನು ಜೀವಂತವಾಗಿರಿಸುವೆನೆಂದು ಭಾವಿಸುವೆಯಾ? ನಿನಗೆ ಅನ್ನ-ನೀರುಗಳನ್ನು ಕೊಡದೆ ಚಿತ್ರಹಿಂಸೆಯಿಂದ ಕೊಲ್ಲುವೆನು.

ಕುಮಾರಸ್ವಾಮಿ—ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ. ನಿನಗೆ ಮೃತ್ಯುಪತ್ರ ಬರೆದುಕೊಡಲಾರೆ.

ಅಜೇಯ—ನಿನ್ನ ಹಣಕ್ಕೆ ನಾವು ಆಶೆಪಟ್ಟಿರುವೆವೆಂದು ತಿಳಿದೆಯಾ? ನಿನ್ನನ್ನು ಇಲ್ಲಿಯತನಕ ತಂದರೂ ಇನ್ನು ನಿನ್ನ ಆಸ್ತಿಯನ್ನು ಆಶಿಸಲಾರೆವು. ಹೇಡಿ, ಪಾಖಂಡಿ. ಇನ್ನು ಕೆಲವೇ ದಿನಗಳಲ್ಲಿ ನೀನು ಯಮಲೋಕವನ್ನು ಸೇರಲಿರುವೆ. ಅಷ್ಟರೊಳಗಾಗಿ ನಿನ್ನನ್ನು ಬಿಡಿಸಿಕೊಂಡು ಹೋಗುವ ಮಹಾತ್ಮರು ಬರಲಿ.

ಅರಬ್—ಅದಕ್ಕೇನು ? ಅದಕ್ಕಾಗಿ ನಮ್ಮ ಪೋಲೀಸರೆಷ್ಟು ಜನ ಬೇಕು ? ಹೇಳಿರಿ. ಕೂಡಲೇ ಬಂದವಾಡುವೆನು.

ಶ್ಯಾಮ—ಖಾನರೇ. ದುಡುಕ ಬೇಡಿರಿ; ದುಡುಕೇ ಕೆಡಕು ನಾನು ಅದಷ್ಟು ಬೇಗನೆ ಶೋಧಿಸಲಿರುವೆನು ಅದಕ್ಕೆ ಮೊದಲು ಅವರನ್ನು ಬಂಧಿಸಿದಲ್ಲಿ ಅವರ ಮೇಲೆ ಖಟ್ಲೆ ಹೂಡಲು ನಮಗೆ ಆಧಾರಗಳೆಲ್ಲಿ ?

ಅರಬ್—ಅದು ಸರಿ ನೀವು ಬೇಗನೆ ಆ ಕರ್ತವ್ಯ ಮಾಡಿರಿ.

ಶ್ಯಾಮ—ಕೆಲಸಗಳು ಬಹಳ ಇವೆ ಆದುದರಿಂದ ಸಮಯ ಕಳೆಯಲು ಸಾಧ್ಯವಿಲ್ಲ ನಾನು ಹೋಗುವೆ.

ಮಧ್ಯ ರಾತ್ರಿಯ ಒಂದು ಗಂಟೆ ಶ್ಯಾಮರಾಯರು ದೇವದಾರ್ ರೋಡಿನಲ್ಲಿ ಆ ಚಿಕ್ಕದಾದ ಮನೆಯ ಬಾಗಿಲಿನಲ್ಲಿ ಇಣಿಕಿ ನೋಡುತ್ತಿದ್ದಾಗ ಒಬ್ಬ ವ್ಯಕ್ತಿ ಪಹರೆ ನಡೆಸುತ್ತಿದ್ದ. ಆಗ ಅವರು ಅಲ್ಲೇ ಒಂದು ಮರದಡಿಯಲ್ಲಿ ನಿಂತುಕೊಂಡರು. ಸ್ವಲ್ಪ ಸಮಯ ಕಳೆಯುತ್ತಲೇ ಆ ವ್ಯಕ್ತಿ ಏತಕ್ಕಾಗಿಯೋ ಹೊರಬಂದನು. ಈ ಸಮಯವನ್ನು ಕಾದು ಶ್ಯಾಮರಾಯರು ಒಳ ಹೊಕ್ಕು ಗೋಡೆಯ ಮೇಲಿದ್ದ ಸ್ವಿಚ್ಚನ್ನೊತ್ತಿ ಸುರಂಗದಲ್ಲಿ ಕೆಳಗಿಳಿದು ವಿದ್ಯುತ್ ಗೃಹವನ್ನು ಪ್ರವೇಶಿಸಿದರು. ಅಲ್ಲಿ ಒಂದು ಕೋಣೆಯಲ್ಲಿ ಒಂದು ಕಡೆ ಶ್ಯಾಮರಾಯರು ಯೋಚಿಸಿದ್ದ ಪ್ರಾಣಿಯಾದ ಉಡವು ಕನ್ನಡಿಯ ಪೆಟ್ಟಿಗೆಯೊಳಗೆ ಇರಿಸಲ್ಪಟ್ಟಿತ್ತು. ಆ ಕೋಣೆಯಲ್ಲಿ ಅದರ ಹೊರತು ಬೇರೇನೂ ಇರಲಿಲ್ಲ. ಅಲ್ಲಿಂದ ಅವರು ಇನ್ನೊಂದು ಸ್ವಿಚ್ಚನ್ನೊತ್ತಿದರು. ಅಷ್ಟರಲ್ಲಿ ಕುಮಾರ ಸ್ವಾಮಿಯವರನ್ನು ಬಂಧಿಸಲ್ಪಟ್ಟಿದ್ದ ಭಾಗ ತೋರಿತು ಅವರು ಕುಮಾರ ಸ್ವಾಮಿಯವರೊಡನೆ— ಸುಖವಾಗಿದ್ದೀರಾ ? ಎಂದರು.

ಕುಮಾರ— ( ದುಃಖಿಸುತ್ತಾ ) ಈ ಅವಸ್ಥೆಯಲ್ಲಿ ಸುಖವಾಗಿದ್ದೇನೆ. ಮಾತನಾಡಬೇಡಿರಿ. ಸದ್ದು ಕೇಳಿಸಿದರೆ ಆ ಧೂರ್ತನು ಬಂದು ನಿಮ್ಮ ಅವಸ್ಥೆ ಕಠಿಣವಾಗಬಹುದು. ಜಾಗ್ರತೆ.

ಒಡನೆಯೇ ಶ್ಯಾಮರಾಯರು ಗೋಡೆಯ ಮೇಲಿನ ಇನ್ನೊಂದು ಸ್ವಿಚ್ಚಿಗೆ ಕೈಕೊಟ್ಟರು. ಕವಡಲೆ ಅವರು ನಿಂತಲ್ಲಿಂದ ಇನ್ನೊಂದು ಭಾಗಕ್ಕೆ ಬಂದರು. ಅಲ್ಲಿ ಕನ್ನಡಿಯ ಎರಡು ಕಪಾಟುಗಳಿದ್ದುವು. ಅವುಗಳಲ್ಲಿ ಇಬ್ಬರಿಗೆ ಸಹಾಯವಾಗುವಂತಹ ಕೆಲವು ಕಾಗದ ಪತ್ರಗಳನ್ನು ಸಿಕ್ಕಿದುವು ಅವುಗಳನ್ನು ಜೇಬಿಗೆ ತುರುಕಿಕೊಂಡರು ಇನ್ನೊಂದೆಡೆಯಲ್ಲಿ ಶ್ರೀಕೃಷ್ಣ ಮೂರ್ತಿಯು ಕಂಡು ಬಂತು. ಇನ್ನು ಇಲ್ಲಿಂದ ಹೊರಡುವುದೆಂದು

ಯೋಚಿಸಿ ಗೋಡೆಯ ಮೇಲಿನ ಸ್ವಿಚ್‌ನ್ನು ನೋಡುವಾಗ ಎರಡು ಸ್ವಿಚ್‌ಗಳು ಕಾಣಿಸಲ್ಪಟ್ಟವು. ಅವುಗಳಲ್ಲಿ ಯಾವುದೋ ಒಂದನ್ನು ಒತ್ತಿದರು. ಅಷ್ಟರಲ್ಲಿ ಆ ಭಾಗವು ಮಾಯವಾಯಿತು. ಅವರು ಇನ್ನೊಂದೆಡೆಯಲ್ಲಿದ್ದರು. ಇದಿರು ನೋಡುವುದೇನು? ಕಳ್ಳರರಸ ಅಜೇಯಸಿಂಹ ಮತ್ತು ಸನಿಯದಲ್ಲೇ ವಿರೋಜಿ ಕುಳಿತಿರುವರು ಶ್ಯಾಮರಾಯರಿಗೆ ಅವರನ್ನು ಕಾಣುತ್ತಲೇ ಎದೆ ಥಸ್ ಎಂದಿತು. ಶ್ಯಾಮರಾಯರನ್ನು ಕಾಣುತ್ತಲೇ ಅಜೇಯಸಿಂಹ ಪೈಶಾಚಿಕ ನಗುನಗುತ್ತಾ, ಹೇ ಪತ್ತೆದಾರ ಹುಳವೇ, ಮೊನ್ನೆ ನಮ್ಮನ್ನು ಅವಮಾನ ಪಡಿಸಿ ತಪ್ಪಿಸಿಕೊಂಡು ಹೋಗಿ ಇಂದೀಗ ನಮ್ಮಲ್ಲಿ ದಯೆದೋರಿ ನೀನಾಗಿಯೇ ಆಗಮಿಸಿರುವೆಯಾ? ನಿನ್ನ ಆಟಗಳನ್ನು ನಮ್ಮಲ್ಲಿ ಪ್ರಕಟಿಸುವೆಯಾ? ನಿನಗೆ ಉಳಕೊಳ್ಳಲು ತಕ್ಕ ಸ್ಥಳವನ್ನು ತೋರಿಸುವೆನು, ಎನ್ನುತ್ತಾ ಒಂದು ಸ್ವಿಚ್‌ನ್ನೊತ್ತಲು ಗೋಡೆಯ ಕಡೆಗೆ ಸರಿದನು. ಅಷ್ಟರಲ್ಲಿ ಶ್ಯಾಮರಾಯರು ಜೇಬಿನಿಂದ ಪಿಸ್ತೂಲನ್ನು ತೆಗೆದು ಆತನಿಗೆ ಗುರಿ ಹಿಡಿದು "ಢಂ ಢಂ" ಎಂದು ಹಾರಿಸಿದರು ಗುರಿ ತಪ್ಪಿ ಅದು ಗೋಡೆಗೆ ತಾಗಿತು. ಒಡನೆಯೇ ಶ್ಯಾಮರಾಯರು ಕೆಳಗಿನ ಭಾಗದಿಂದ ದುರ್ಗಂಧವಾದ ಹೊಗೆ ಬರುತ್ತಿರುವ ಒಂದು ಬಲೆಯಲ್ಲಿ ನೇತಾಡುತ್ತಿದ್ದರು!

---

# ವಿದ್ಯುತ್ ಗೃಹ

ಬೆಳಗಾಗುವುದರೊಳಗಾಗಿ ಬರುವೆನೆಂದು ಹೇಳಿ ಹೋದ ಶ್ಯಾಮರಾಯರು ಹತ್ತುಗಂಟೆಯಾದರೂ ಬಾರದಿರುವುದನ್ನು ನೋಡಿ ಅವರ ಹೆಂಡತಿ ಕೂಲಿ ಆಳು ರಾಮಯ್ಯನನ್ನು ಕರೆದರು. ರಾಮಯ್ಯ ಬಂದು:—

—ಅಮ್ಮಾ, ನನ್ನನ್ನು ಯಾಕಾಗಿ ಬರಹೇಳಿದಿರಿ?

ಶ್ಯಾಮರಾಯರ ಪತ್ನಿಯ ಹೆಸರು ಮೀನಾಕ್ಷಿ

ಮೀನಾಕ್ಷಿ—ನೀನು ಈಗಲೇ ಸ್ಟೇಷನಿಗೆ ಹೋಗಿ ಸಬ್ ಇನ್‌ಸ್ಪೆಕ್ಟರರನ್ನು ಬರಹೇಳಬೇಕು.

ರಾಮಯ್ಯನು ಹೋಗಿ ಸಬ್ ಇನ್‌ಸ್ಪೆಕ್ಟರರನ್ನು ಬರಹೇಳಿದನು. ಆರಿಫ್ ಖಾನರು ಬಂದು—ಅಮ್ಮಾ, ನನ್ನನ್ನು ಬರಹೇಳಿದ ಕಾರ್ಯವೇನು?

ಮೀನಾಕ್ಷಿ—ಅವರು ನಿನ್ನೆ ರಾತ್ರಿ ಎಲ್ಲಿಗೋ ಹೋಗಿರುವರು. ಬೆಳಗಾಗುವುದರೊಳಗಾಗಿ ಬರುವೆನೆಂದು ಹೇಳಿರುತ್ತಾರೆ ಇಷ್ಟರ ತನಕವೂ ಕಾಣುವುದಿಲ್ಲ ಆದುದರಿಂದ ಕಳ್ಳರ ಕೈವಶವಾದರೋ ಏನೋ?

ಅರಬ್—ಆ ಚೋರರು ಬಹಳ ಚಾಣಾಕ್ಷರಿರುವರು. ಅವರು ಶ್ಯಾಮರಾಯರನ್ನು ಮಾಯಾಜಾಲದಲ್ಲಿ ಸಿಲುಕಿಸಲಿಕ್ಕೂ ಸಾಕು. ಇಂದೇ ನಾನು ಅಲ್ಲಿಗೆ ಹೋಗಿ ನೋಡುವೆನು. ಮೀನಾಕ್ಷಿ—ಆಗಬಹುದು

ರಾತ್ರಿ ಒಂಬತ್ತುಗಂಟೆಯ ಸಮಯದಲ್ಲಿ ಅರಬ್‌ಖಾನರು ನಾಲ್ಕು ಜನ ಪೋಲೀಸರೊಂದಿಗೆ ಸ್ಟೇಷನನ್ನು ಬಿಟ್ಟು ದೇವದಾರ್ ರೋಡಿನಲ್ಲಿ ಪ್ರವೇಶಿಸಿ ಆ ಚಿಕ್ಕದಾದ ಮನೆಯಲ್ಲಿ ಒಳಹೊಕ್ಕರು. ಗೋಡೆಯ ಸ್ವಿಚ್ಚ್ನೊತ್ತಿ ಸುರಂಗದಲ್ಲಿ ಮಾತನಾಡುತ್ತಾ ಮುಂದುವರಿಯುತ್ತಿದ್ದರು ಮುಂದೆ ಹೋಗಿ ಗೋಡೆಯ ಮೇಲಿನ ಒಂದು ಸ್ವಿಚ್ಚ್ನೊತ್ತಿದರು. ಅಷ್ಟರಲ್ಲಿ ಇದಿರಿನಲ್ಲಿ ಬೇರೊಂದು ಕೋಣೆಯು ಕಾಣಿಸಿತು ಖಾನರು ಇದಿರು ನೋಡುತ್ತಿರುವಾಗ ಅವರ ಇದಿರಿನಲ್ಲಿ ಓರ್ವ ಕಳ್ಳನು ನಿಂತಿದ್ದನು. ಒಡನೆಯೇ ಅವನನ್ನು ಬಂಧಿಸಲು ಪೋಲೀಸರಿಗೆ ಹೇಳಿದರು ಪೋಲೀಸರು ಬಂಧಿಸಲು ಹೋಗುವಷ್ಟರಲ್ಲಿ ಆತನು ಜೇಬಿನಿಂದ ಪಿಸ್ತೂಲನ್ನು ಹೊರತೆಗೆದು ಸಬ್ ಇನ್‌ಸ್ಪೆಕ್ಟರರಿಗೆ ಗುರಿ ಇಟ್ಟು ಹೊಡೆದನು. ಅವರ ಆತ್ಮವು ಅಲ್ಲೇ ಕೊನೆಗೊಂಡಿತು. ಇದನ್ನು ನೋಡಿ ಪೋಲೀಸರು ಫರಾರಿಯಾದರು.

ಪಿಸ್ತೂಲಿನ ಢಂ ಎಂಬ ಶಬ್ದವನ್ನು ಕೇಳಿದೊಡನೆ ತನ್ನ ಆಫೀಸಿನಲ್ಲಿ ಏನನ್ನೋ ನೋಡುತ್ತಿದ್ದ ಅಜೇಯಸಿಂಹನು ಶಬ್ದಕೇಳಿದೆಡೆಗೆ ಹೋಗುವುದಕ್ಕೋಸ್ಕರ ಅವಸರದಿಂದ ಒಂದು ಸ್ವಿಚ್ಚ್ನೊತ್ತಿದನು. ಅಷ್ಟರಲ್ಲಿ ಅವನಿಗೆ ಹೋಗಬೇಕಿದ್ದ ಕೋಣೆಯ ಬಾಗಿಲು ತೆರೆಯಲಿಲ್ಲ. ಇನ್ನೊಂದು ಸ್ವಿಚ್ಚ್ನೊತ್ತಿ ಅರಬ್‌ಖಾನರು ಬಿದ್ದಲ್ಲಿಗೆ ಬಂದನು. ಅಲ್ಲಿ ವಿರೋಜಿಯು ನಿಂತಿದ್ದನು. ಅಜೇಯಸಿಂಹನು ವಿರೋಜಿಯಿಂದ ನಡೆದ ವಿಷಯಗಳನ್ನು ತಿಳಕೊಂಡು ಆ ಮೃತದೇಹವನ್ನು ಅಲ್ಲಿಂದ ಬೇರೆ ಕಡೆಗೆ ಒಯ್ದರು.

ವಾಚಕರೆ, ಯಾವ ಸಮಯದಲ್ಲಿ ಅಜೇಯಸಿಂಹನು ತನ್ನ ಕೋಣೆಯಿಂದ ಪಿಸ್ತೂಲಿನ ಶಬ್ದವನ್ನು ಕೇಳಿದೆಡೆಗೆ ಹೋಗಲು ನೋಡದೆ ಬೇರೊಂದು ಸ್ವಿಚ್ಚ್ನೊತ್ತಲು ಶ್ಯಾಮರಾಯನು ನೇತಾಡುತ್ತಿದ್ದಲ್ಲಿಂದ ಮೇಲೆಬಂದರು. ಅಲ್ಲಿಂದ ಅವರು ಬೇರೊಂದು ಕೋಣೆಗೆ ಬಂದರು ಅಲ್ಲಿ ಒಂದು ಕೋಣೆಯಲ್ಲಿ ಅಜೇಯಸಿಂಹನು ಮತ್ತು ವಿರೋಜಿಯು ಕುಳಿತು

ಮಾತನಾಡುತ್ತಿದ್ದುದನ್ನು ಶ್ಯಾಮರಾಯರು ಒಂದು ಕಿಟಕಿಯ ಸಹಾಯ ದಿಂದ ಕಂಡರು.

ವಿರೋಜಿ—ಆ ದುಷ್ಟ ಅರಬ್‌ಖಾನನು ಶಾಮರಾಯನನ್ನು ಬಿಡಿಸಲು ಬಂದಿರಬೇಕು. ಅವನು ಯಮಲೋಕವನ್ನು ಸೇರಿದನು. ಇನ್ನು ಒಂದೆರಡು ದಿವಸಗಳಲ್ಲಿ ಆ ಪತ್ತೆದಾರನು ಕೂಡಾ ದುರ್ಗಂಧದ ಹೊಗೆಯಿಂದಾಗಿ ಸಾಯುವನು. ನಂತರ ನಮಗೆ ಯಾರ ಭಯವೂ ಇಲ್ಲ.

ಅರಬ್‌ಖಾನರ ನಿಧನದ ಸಂಗತಿ ಕೇಳಿ ಶ್ಯಾಮರಾಯರಿಗೆ ನಿಂತಲ್ಲೇ ಮೂರ್ಛೆ ಬಂತು. ಎರಡೇ ನಿಮಿಷಗಳಲ್ಲಿ ಅವರು ಎಚ್ಚತ್ತರು.

ಅಜೇಯ—ನಾನು ನಾಳೆ ನಾಗಪುರಕ್ಕೆ ಹೋಗಿ ಅಲ್ಲಿಯ ಕೆಲಸಗಳನ್ನು ಮಾಡಿಕೊಂಡು ಸೋಮವಾರ ಮುಂಬಾಯಿಯನ್ನು ತಲಪುವೆನು. ಅದೇ ದಿವಸ ಸಾಯಂಕಾಲ ಐದುಗಂಟೆಗೆ ಅಲ್ಲಿಂದ ವಿದೇಶಕ್ಕೆ ಹೊರಡಲಿರುವ ಹಡಗಿದಲ್ಲಿ ಹೋಗಲಿರುವೆನು. ಎಂಟು ದಿವಸಗಳಲ್ಲಿ ಈಜಿಪ್ಟನ್ನು ತಲಸಬಹುದು. ಅಲ್ಲಿ ಆ ಮೂರ್ತಿಯನ್ನು ವಿಕ್ರಯಿಸಿದಲ್ಲಿ ಹೇಗಿದ್ದರೂ ಐವತ್ತು ಸಾವಿರ ರೂಪಾಯಿಗಳು ದೊರೆಯಬಹುದು.

ವಿರೋಜಿ—ಇನ್ನೆಷ್ಟು ದಿವಸಗಳಲ್ಲಿ ಪುನಃ ಇಲ್ಲಿಗೆ ತಲಪುವಿರಿ?

ಅಜೇಯ—ಇಪ್ಪತ್ತು ಇಪ್ಪತ್ತೈದು ದಿವಸಗಳಲ್ಲಿ ಬರುವೆನು. ಅಪ್ಪರ ತನಕ ಬಹಳ ಜಾಗ್ರತನಾಗಿರು.

ವಿರೋಜಿ—ಕುಮಾರಸ್ವಾಮಿಯನ್ನು ಅದುವರೆಗೆ ಇರಗೊಡಬಾರದು.

ಅಜೇಯ—ಅದು ಸರಿ. ಹಾಗಿದ್ದರೆ ಅವನನ್ನೇನು ಮಾಡೋಣ?

ವಿರೋಜಿ—ಅವನನ್ನು ನಾನೆಷ್ಟು ದಿವಸ ಕಾದಿರಲಿ?

ಅಜೇಯ—ಹಾಗಿದ್ದರೆ ನಾಳೆ ಅವನನ್ನು ಸಾಕಷ್ಟು ಬೈದು ಭಂಗಿಸಿ ನಾಡದ್ದು (ರವಿವಾರ ದಿವಸ) ಕೊಂದುಬಿಡು.

ಬಳಿಕ ಅವರು ಮಲಗಲನುವಾದರು. ಶಾಮರಾಯರು ಅಲ್ಲಿಂದ ಫರಾರಿಯಾದರು.

* § † § *

ಭಾನುವಾರ ರಂಗಪುರದಿಂದ ಹೊರಡುವ ಸುಪ್ರಸಿದ್ಧ ಪತ್ರಿಕೆಯಾದ "ಉದಯ ಜ್ಯೋತಿ"ಯು ಸರದಿಯಂತೆ ಶನಿವಾರ ರಾತ್ರಿ ಎಂಟುಗಂಟೆಗೇ ವಾಚಕರ ಕೈಸೇರಿತು. ಶಾಮರಾಯರೂ ಒಂದು ಪತ್ರಿಕೆಯನ್ನು ಕೊಂಡುಕೊಂಡರು. ಅದರಲ್ಲಿ ದಪ್ಪಾಕ್ಷರಗಳಲ್ಲಿ ಶಿರೋನಾಮೆಯೆಂದು ಬರೆದಿತ್ತು.

● ರಂಗಪುರದ ವಿದ್ಯುತ್ ಯಂತ್ರವು ಹಾಳಾಯ್ತು ●

ಕೆಳಗಡೆ ಈ ರೀತಿಯಾಗಿತ್ತು. ಶನಿವಾರ ಬೆಳಿಗ್ಗೆ ರಂಗಪುರದ ವಿದ್ಯುತ್ ಯಂತ್ರವು ಯಾವುದೋ ಕಾರಣದಿಂದಾಗಿ ಕೆಟ್ಟುಹೋಗಿರುವುದು. ಪುನಃ ರಿಪೇರಿಯಾಗಲು ಎರಡು ದಿವಸಗಳು ಬೇಕಾಗುವುವು. ಆದುದರಿಂದ ಜನರಾರೂ ಈ ವಿಷಯದಲ್ಲಿ ಬೇಸರಿಸಬಾರದಾಗಿ ವಿನಂತಿ.

ವಾಚಕರೇ, ಈ ಶಿರೋನಾಮೆಯ ಸಾರಾಂಶವನ್ನು ಮಾತ್ರ ಇಲ್ಲಿ ಕೊಟ್ಟಿರುತ್ತೇವೆ. ಇನ್ನೊಂದೆಡೆ ಈ ರೀತಿಯಾಗಿತ್ತು.

ಪೋ. ಸಬ್ ಇನ್‌ಸ್ಪೆಕ್ಟರರಾದ ಅರಬ್‌ಖಾನರ ಶೋಚನೀಯ ಮರಣ.

ಕೆಳಗಡೆ ನಡೆದ ವೃತ್ತಾಂತಗಳನ್ನು ಬರೆದಿದ್ದರು.

ಶ್ಯಾಮರಾಯರಿಗೆ ಪತ್ರಿಕೆಯನ್ನೋದುವಾಗ ಒಂದೆಡೆಯಲ್ಲಿ ಸಂತೋಷವೂ ಇನ್ನೊಂದೆಡೆಯಿಂದ ದುಃಖವೂ ಉಕ್ಕಿ ಬರುತ್ತಿತ್ತು. ವಾಚಕರೇ, ಶ್ಯಾಮರಾಯರಿಗೆ ದುಃಖವು ಮತ್ತು ಸಂತೋಷವು ಯಾಕಾಗಿ?

ವಿದ್ಯುತ್ ಯಂತ್ರವು ಹಾಳಾದುದರಿಂದ ವಿದ್ಯುತ್ ಗೃಹದಲ್ಲಿ ವಿರೋಜಿಯ ಯಾವ ಆಟಗಳೂ ನಡೆಯಲಾರವು. ಆತನು ಕುಳಿತಲ್ಲಿಂದ ಹೊರಡಲಾರನು. ಯಾವ ಬಾಗಿಲುಗಳೂ ತೆರೆದು ಮುಚ್ಚಬೇಕಾದರೆ ವಿದ್ಯುತ್ ಅಗತ್ಯವೆಂದು ನೀವರಿತಿರುವಿರಿ. ಆದುದರಿಂದ ವಿದ್ಯುತ್ ಯಂತ್ರವು ರಿಪೇರಿಯಾಗುವಷ್ಟು ದಿವಸ ಕುಮಾರಸ್ವಾಮಿಯವರ ಪ್ರಾಣಕ್ಕೆ ಹಾನಿಬಾರದು. ಇದಕ್ಕಾಗಿ ವಿದ್ಯುತ್ ಯಂತ್ರವು ಹಾಳಾದುದರಿಂದ ಶ್ಯಾಮರಾಯರಿಗೆ ಸಂತೋಷವಾಗುತ್ತಿತ್ತು. ಇನ್ನೊಂದೆಡೆ ಅರಬ್‌ಖಾನರ ಶೋಚನೀಯಕರವಾದ ದುರ್ಮರಣಕ್ಕಾಗಿ ದುಃಖವು ಉಮ್ಮಳಿಸಿ ಬರುತ್ತಿತ್ತು. ಇರಲಿ. ಶ್ಯಾಮರಾಯರು ಏನನ್ನೋ ಆಲೋಚಿಸುತ್ತಾ ಕಡೆಗೆ ಪೋಲೀಸ್ ಸ್ಟೇಷನ್ನಿಗೆ ಹೋದರು ಅಲ್ಲಿಯ ಸಬ್ ಇನ್‌ಸ್ಪೆಕ್ಟರರು ಈ ದಿವಸ ಬೇರೆಯವರಾಗಿದ್ದರು. ಅವರೊಡನೆ ಶ್ಯಾಮರಾಯರು ನಡೆದ ಸಂಗತಿಗಳನ್ನೆಲ್ಲಾ ವಿವರಿಸಿ, ಬಳಿಕ ನಾಳೆಯ ಸಾಯಂಕಾಲ ಆರುಗಂಟೆಗೆ ಸರಿಯಾಗಿ ತಮ್ಮ ವಶಕ್ಕೆ ಎಂಟುಜನ ಪೋಲೀಸರನ್ನು ಕೊಡಲು ಕೇಳಿದರು.

ಸಬ್ ಇನ್‌ಸ್ಪೆಕ್ಟರ್— ಪೋಲೀಸರು ಯಾಕಾಗಿ?

ಶ್ಯಾಮ— ಸೋಮವಾರ ನಾಲ್ಕುಗಂಟೆಗೆ ಸರಿಯಾಗಿ ಅಜೇಯಸಿಂಹನು ಮುಂಬಯಿಯಿಂದ ಈಜಿಪ್ಟಿಗೆ ಹೊರಡುವವನು. ಈ ಸಮಯದಲ್ಲಿ ಹೋದರೆ ಸ್ಟೀಮರಿನಲ್ಲಿ ಆತನನ್ನು ಬಂಧಿಸಬಹುದು; ಆದರೆ ಈ ವಿಷಯವು ಗೌಪ್ಯವಾಗಿರಲಿ.

ಸಬ್—ಅದು ಸರಿ. ಆಗಬಹುದು. ಬೇಕಾದಾಗ ಕರೆಕೊಳ್ಳಿರಿ.

ಸೋಮವಾರ ಮಧ್ಯಾಹ್ನ ಎರಡು ಗಂಟೆಗೆ ಸರಿಯಾಗಿ ಎಕ್ಸಪ್ರೆಸ್ ಗಾಡಿಯು ಬೊಂಬಾಯಿ ಸ್ಟೇಷನನ್ನು ತಲುಪಿತು. ಶ್ಯಾಮರಾಯರು ಪೋಲೀಸರೊಡನೆ ರೈಲಿನಿಂದಿಳಿದರು. ನೆಟ್ಟಗೆ ಕಾರಿನ ಮುಖಾಂತರ ಧಕ್ಕೆಗೆ ಹೋದರು. ಅಲ್ಲಿ ಪರದೇಶಕ್ಕೆ ಹೋಗುವ ಪ್ರಯಾಣಿಕರ ಹಡಗೊಂದು ಹೊರಡಲನುವಾಗಿ ನಿಂತಿತ್ತು. ಶ್ಯಾಮರಾಯರು ಹಡಗಿನ ಆಫೀಸಿಗೆ ಹೋಗಿ ಅಲ್ಲಿಯ ಅಧಿಕಾರಿಯೊಡನೆ ಈಜಿಪ್ಟಿಗೆ ಹೋಗುವ ಪ್ರಯಾಣಿಕರ ಪಠವನ್ನೂ ಅವರ ವಿಳಾಸಗಳನ್ನೂ ಕೇಳಿದರು ಕೂಡಲೇ ಅಧಿಕಾರಿ ಪಠಗಳನ್ನು ತಂದು ಕೊಟ್ಟರು. ಶ್ಯಾಮರಾಯರು ಅವುಗಳಲ್ಲಿ ಒಂದು ಭಾವಚಿತ್ರವನ್ನು ತೆಗೆದು ಆ ವ್ಯಕ್ತಿಯ ವಿಳಾಸವನ್ನು ಕೇಳಿದರು. ಅಧಿಕಾರಿಯು ವಿಳಾಸವನ್ನು ಕೊಟ್ಟರು. ಅದರಲ್ಲಿ ಪ್ರಕಾಶರಾವ್ ನಾಗಪುರ. ಎಂದಿತ್ತು. ಶ್ಯಾಮರಾಯರು ಆ ಪ್ರಕಾಶರಾಯನಿದ್ದಲ್ಲಿಗೆ ಹೋದರು. ಅಲ್ಲಿ ನೋಡುವಲ್ಲಿ ಆ ಪ್ರಕಾಶರಾಯನೇ ಅಜೇಯಸಿಂಹನಾಗಿದ್ದ ಪೋಲಿಸರು ಆತನನ್ನು ಬಂಧಿಸಿ ಮರುದಿವಸ ರಂಗಪುರಕ್ಕೆ ತಂದರು.

ರಂಗಪುರದ ವಿದ್ಯುತ್ ಯಂತ್ರವು ಕೆಟ್ಟು ಹೋದುದರಿಂದ ವಿದ್ಯುತ್ ಗೃಹದಲ್ಲಿ ವಿರೋಜಿಯ ಯಾವ ಆಟಗಳೂ ನಡೆಯಲಾರದಾದುವು. ಆದುದರಿಂದ ಕುಮಾರ ಸ್ವಾಮಿಯವರ ಪ್ರಾಣಕ್ಕೆ ಏನೂ ಹಾನಿ ಬರಲಿಲ್ಲ ಪೋಲಿಸರು ವಿದ್ಯುತ್ ಗೃಹವನ್ನು ಪ್ರಯತ್ನಪಟ್ಟು (ಬಾಗಿಲುಗಳನ್ನು ಮುರಿದು) ಹೊಕ್ಕು ವಿರೋಜಿಯನ್ನೂ ಬೇರೆ ಕಳ್ಳರನ್ನೂ ಬಂಧಿಸಿದರು..

## ಉಪಸಂಹಾರ

ಅಜೇಯಸಿಂಹನನ್ನೂ ವಿರೋಜಿಯನ್ನೂ ಮತ್ತು ಉಳಿದುಳಿದ ಕಳ್ಳರನ್ನೂ ಮೆಜಿಸ್ಟ್ರೇಟರ ಮುಂದೆ ಹಾಜರು ಪಡಿಸಲಾಯಿತು. ಅಜೇಯ ತಾನಾಗಿಯೇ ತನ್ನ ಆತ್ಮವೃತ್ತವನ್ನು ಹೇಳಿದನು.

ನಾನು ಬೇರೆಯವನಾರೂ ಆಗಿರದೆ ಕುಮಾರಸ್ವಾಮಿಯವರ ಅಣ್ಣನ ಮಗನಾಗಿರುತ್ತೇನೆ. ಚಿಕ್ಕ ಪ್ರಾಯದಲ್ಲೇ ನಾನು ಬಹಳ ಪೋಲಿಯಾದೆ. ಹನ್ನೆರಡು ವರ್ಷ ಪ್ರಾಯದಲ್ಲೇ ಮನೆಯನ್ನು ಬಿಟ್ಟು ಎಲ್ಲೆಲ್ಲೋ ತಿರುಗಾಡುತ್ತಿದ್ದೆನು. ಈಗ ನಾಲ್ಕು ವರ್ಷಗಳಿಂದಲೂ ನಾನು ಈ ರಂಗಪುರದಲ್ಲಿ ಕಳ್ಳತನ ಮಾಡಿ ಜೀವಿಸುತ್ತಿದ್ದೇನೆ. ನಾನು ಈ ಕಸುಬಿನಲ್ಲಿ ಬಲ

ವಂತನಾಗಿ ವಿದ್ಯುತ್ ಗೃಹವನ್ನು ಕೂಡಾ ರಚಿಸಿದೆನು. ಕುಮಾರ ಸ್ವಾಮಿಯವರಿಗೆ ಮಕ್ಕಳಿಲ್ಲದುದರಿಂದ ಅವರ ಮರಣಾನಂತರ ಅವರ ಸ್ಥಿರ ಚರ ಸೊತ್ತು ನನಗೆ ಮತ್ತು ನನ್ನ ತಮ್ಮಂದಿರಿಗೇ ಸಲ್ಲತಕ್ಕದ್ದು. ಅವರು ಹೀಗೆ ಮಾಡದೆ ಅದನ್ನು ಅವರ ಓರ್ವ ಮಿತ್ರನಿಗೆ ಮೃತ್ಯುಪತ್ರ ಬರೆಕೊಟ್ಟಿರುತ್ತಾರೆ. ಅದಕ್ಕಾಗಿ ನಾನು ಅವರಿಗೆ ಒಂದಿಲ್ಲ ಒಂದು ದಿನ ಬುದ್ಧಿ ಕಲಿಸಬೇಕೆಂದು ಯೋಚಿಸುತ್ತಿದ್ದೆ.

ಕುಮಾರ ಸ್ವಾಮಿಯವರಂತಿರುವ ಮಾಧವನೆಂಬೊಬ್ಬನನ್ನು ನನ್ನ ಮಾಯಾಜಾಲಕ್ಕೆ ಸಿಲುಕಿಸಿ ಕುಮಾರ ಸ್ವಾಮಿಯವರ ಮನೆಗೆ ಸ್ಮೃತಿ ತಪ್ಪಿಸಿಕೊಂಡು ಹೋಗಿ ಕೊಂದೆನು. ಆತನು ನೋಡಲು ರೂಪ, ಯೌವನ, ವರ್ಚಸ್ಸು ಇವಗಳಲ್ಲೆಲ್ಲಾ ಅವರಂತೆಯೇ ತೋರುತ್ತಿದ್ದನು. ಕುಮಾರ ಸ್ವಾಮಿಯವರನ್ನು ಕೂಡಾ ಸ್ಮೃತಿ ತಪ್ಪಿಸಿ ಸುರಂಗ ಮೂಲಕ ತಂದು ವಿದ್ಯುತ್ ಗೃಹದಲ್ಲಿ ಬಚ್ಚಿಟ್ಟೆನು. ಮುಕುಂದರಾಯರ ಶ್ರೀಕೃಷ್ಣ ಮೂರ್ತಿಯನ್ನು ಕದ್ದಂತಹ ಅಪವಿತ್ರವಾದ ಕೈಗಳೂ ಇವೇ.

ಅರಬ್ ಖಾನರ ಪ್ರಾಣವನ್ನು ಹೀರಿದವರೂ ನಾವೇ. ನನ್ನ ನಿಜವಾದ ಹೆಸರು ಆಗ ಶಚೀಂದ್ರನೆಂದು. ರಂಗಪುರದ ಪ್ರಜೆಗಳೆಲ್ಲರೂ ನನ್ನನ್ನು ಕ್ಷಮಿಸಲಿ. ನಾ ನೇ ಕೊ ಲೆ ಗ ಡ ಕ

ಇನ್ನು ನಾನು ಒಂದು ಕ್ಷಣಾರ್ಧವೂ ನನ್ನೀ ಹೇಯವಾದ ಜೀವನ ವನ್ನು ನಡೆಸಲಾರೆ, ಎಂದವನೇ ವಿಚಾರಣೆಗೆ ನಿಲ್ಲಿಸಿದ್ದ ಪಂಜರದ ಒಂದು ಕಬ್ಬಿಣದ ಕಂಬಕ್ಕೆ ತಲೆ ಒಡೆದುಕೊಂಡು ಸತ್ತು ಹೋದನು.

ವೀರೋಜಿಯನ್ನು ವಿಚಾರಿಸಿ ಗಲ್ಲಿಗೇರಿಸಿದರು.

ಕುಮಾರಸ್ವಾಮಿಯವರು ಬಂಧ ಮುಕ್ತರಾದರು.

ಶ್ಯಾಮರಾಯರು ಅರಬ್ ಖಾನರ ಮರಣಕ್ಕಾಗಿ ದುಃಖಿಸಿದರು.

ಶ್ರೀಕೃಷ್ಣ ಮೂರ್ತಿಯನ್ನು ಮುಕುಂದರಾಯರು ಶ್ಯಾಮರಾಯರಿಗೇ ಅರ್ಪಿಸಿದರು.

ಸರಕಾರದಿಂದ ಶ್ಯಾಮರಾಯರಿಗೆ ಬಹುಮಾನ ಕೊಡಲ್ಪಟ್ಟಿತು.

ಆನಂದರಾಯರು ಬಿಡುಗಡೆ ಹೊಂದಿದರು.

ವಿದ್ಯುತ್ಗೃಹವು ಸರಕಾರದ ವಶವಾಯಿತು.

— ಸಂಪೂರ್ಣಂ —

## ನಮ್ಮ ಸಾಮಾಜಿಕ ಕಾದಂಬರಿಗಳು

| | | | |
|---|---|---|---|
| *ಅಪರಾಜಿತ | ಜೀ. ಕೃ. ಕುಲಕರ್ಣಿ | ೦ | ೮ |
| ಅವನಾರು? | ಶಾಂತಾರಾಂ | ೧ | ೪ |
| ಕಾಳಗದಲ್ಲಿ ಬಾಳು | ಮುರಲಿ | ೧ | ೪ |
| ಕಲಿಯುಗದ ರಕ್ಕಸರು | ಬಿ. ಎ. ರಾಮಚಂದ್ರ | ೧ | ೪ |
| ಕರಿನೀರು | ಸ್ವಾ. ಸಾವರಕರ | ೫ | ೦ |
| ಕಮಲಾ | ಜಡಿ | ೧ | ೮ |
| ಜೀವನ ವಿಕಾಸ | ಮುರಲಿ | ೧ | ೮ |
| ನನ್ನ ಅತ್ತಿಗೆ | ಭಾರತಿ ಸುತ | ೧ | ೦ |
| ನನ್ನ ಗೃಹಿಣಿ | ಕಾಳೆ | ೨ | ೪ |
| ಪ್ರಸಾದ | ನವಗಿರಿನಂದ | ೧ | ೪ |
| ಪರಿವರ್ತನ | ಮುರಲಿ | ೦ | ೧೨ |
| ಮಹಾತ್ಮಾ | ಮಹಾಬಲಭಟ್ಟ | ೦ | ೬ |
| ಯೋಗಾಯೋಗ | ಕಾಳೆ | ೨ | ೮ |
| ರಾಮದಾಸ | ಅಲ್ಫಾನ್ಸೊ | ೦ | ೧೨ |
| ವಿಲಕ್ಷಣ ಪತಿಸೇವೆ | ಕಾಳೆ | ೦ | ೫ |
| *ಸೌಭಾಗ್ಯ ತಿಲಕ | ,, | ೨ | ೦ |
| ಸತೀಸಾಹಸ | ಶ್ರೀಕಂಠ ಶಾಸ್ತ್ರೀ | ೦ | ೬ |
| ಸ್ತ್ರೀಯರ ಹಕ್ಕು ಬಾಧ್ಯತೆಗಳು | ಕಾಳೆ | ೧ | ೦ |
| ಸ್ಕೂಲ ಮಿಸ್ಟ್ರೆಸ್ | ,, | ೩ | ೦ |

## ನಾಟಕಗಳು.

| | | | |
|---|---|---|---|
| ಉತ್ತರ ಸಾವಿತ್ರಿ | ನವಗಿರಿನಂದ | ೧ | ೪ |
| ಧೀರ ದಾತಾ | ,, | ೧ | ೮ |
| ಜಲಂಧರ | ಗೋ. ರಾ. ಅ. | ೦ | ೧೨ |
| ನಿರ್ಭಾಗ್ಯ ಭಾರತಿ | ,, | ೦ | ೧೨ |
| ನಾರದ ಲೀಲಾ | ,, | ೦ | ೧೨ |
| ಪರಶು ವಿಜಯ | ನವಗಿರಿನಂದ | ೦ | ೧೨ |
| ಪನ್ನೆ | ಮಹಾಬಲಭಟ್ಟ | ೦ | ೧೨ |
| ಮೋಜಿನ ಮರಣ | ಶಂ. ಅ. ಕುಲ್ಕರ್ಣಿ | ೧ | ೪ |

● ಶ್ರೀ ಶೇಷಾಚಲ ಪ್ರೆಸ್, ಮದಿಹಾಳ-ಧಾರವಾಡ ●